ಶಾರದೆಯ ಮುತ್ತಿನ ಸರ

( ೩ )

# ಕಿರುಗತೆಗಳು

( 'ಶಾರದೆ'ಯಲ್ಲಿ ಪ್ರಕಟವಾದ ಲಘುಕಥೆಗಳ ಸಂಗ್ರಹವು )

---

## ೧ನೆಯ ಭಾಗ


ಸಂಪಾದಕ ಮತ್ತು ಪ್ರಕಾಶಕ

**ಪಂಡಿತ ಭೀ. ಜೀ. ಹುಲಿಕವಿ** ಎಸ್. ಟೀ. ಸೀ.

ಉಪಾಧ್ಯಾಪಕ ಗವ್ಹ. ಹಾಯಸ್ಕೂಲ

ಮತ್ತು

ಸಂಪಾದಕ '**ಶಾರದೆ**' ಶಾರದಾಮಂದಿರ, ಧಾರವಾಡ







ಮುದ್ರಕ

**ಶ್ರೀ. ಮಾಧವ ಕೃಷ್ಣ ಜೋಶಿ**

ಕರ್ನಾಟಕ ಪ್ರಿಂಟಿಂಗ ವರ್ಕ್ಸ್, ಧಾರವಾಡ

---

ಪೌಷ್ಯ ೧೮೫[illegible]

**ಬೆಲೆ ೧-೦-೦**

# ಕಥೆಗಳ ಪರಿವಿಡಿ

# ಪ್ರಸ್ತಾವನೆ

ಈ ಕಿರುಗತೆಗಳಲ್ಲಿ ಪೌರಾಣಿಕ, ಐತಿಹಾಸಿಕ ಮತ್ತು ಕಾಲ್ಪನಿಕ ಎಂದು ಮೂರು ವರ್ಗಗಳನ್ನು ಮಾಡಬಹುದು. (೧) ಮುಯ್ಯಿಕ್ಕೆ ಮುಯ್ಯಿ (೨) ಶರ್ಮಿಷ್ಠೆಯೂ ದೇವಯಾನಿಯೂ ಇವು ಮೊದಲನೆಯ ವರ್ಗಕ್ಕೆ ಸೇರುತ್ತವೆ; (೧) ವೀರಪತ್ನಿ (೨) ನರಸಿಂಗನಾಯಕ ಅಥವಾ ಕರ್ನಾಟಕವೀರ (೩) ರಾಮರಾಜ್ಯಾಭಿಷೇಕ ಅಥವಾ ಎಚ್ಚಮನ ರಾಜಭಕ್ತಿ (೪) ಕರ್ತವ್ಯಗಳ ತಾರತಮ್ಯ ಅಥವಾ ವ್ಯಕ್ತಿಧರ್ಮವೋ ರಾಷ್ಟ್ರಧರ್ಮವೋ ? (೫) ಬೆಳವಡಿಯ ಮಲ್ಲಮ್ಮನು ಈ ಕಥೆಗಳು ಎರಡನೆಯ ವರ್ಗದಲ್ಲಿ ಅಡಕವಾಗುತ್ತವೆ; ಮತ್ತು (೧) ಗೃಹಲಕ್ಷ್ಮಿ (೨) ಮೂರ್ತಿಪೂಜೆ (೩) ಯೋಗ್ಯಪ್ರತಿಫಲ (೪) ಸಾತ್ತ್ವಸ್ನೇಹ (೫) ವಿಚಿತ್ರಘಟನೆ (೬) ನಿಷ್ಫಲಪ್ರೇಮ (೭) ಯೋಗಿಮಹಿಮೆ ಇವು ಮೂರನೆಯ ವರ್ಗದಲ್ಲಿ ಸಮಾವಿಷ್ಟವಾಗುತ್ತವೆ. ಇಂತು ಹದಿನಾಲ್ಕು ಕಥೆಗಳು ಈ ಚಿಕ್ಕದಾದ ಪುಸ್ತಕದಲ್ಲಿ ಒಟ್ಟಾಗಿ ಸೇರಿವೆ. ಆಯಾ ಕಥೆಗಳ ಲೇಖಕ ಮಹಾಶಯರ ಅಭಿಧಾನಗಳನ್ನು ಅನುಕ್ರಮಣಿಕೆಯಲ್ಲಿ ಉಲ್ಲೇಖಿಸಿದೆ. ಅದರಿಂದ ಈ ಕಥೆಗಳ ಭಾಷೆ, ಶೈಲಿ ಮತ್ತು ಕಥಾಸಂವಿಧಾನ ಇವುಗಳ ವಿವಿಧತೆಯ ಕಿಂಚಿತ್ಕಲ್ಪನೆಯು ನಮ್ಮ ವಾಚಕರಲ್ಲಿ ಉಂಟಾಗಬಹುದು.

ಪ್ರತಿಯೊಂದು ಕಥೆಯನ್ನು ಬರೆಯುವಾಗ ಲೇಖಕನ ಕಣ್ಣ ಮುಂದೆ ಯಾವದೊಂದು ವಿಶಿಷ್ಟವಾದ ಉದ್ದೇಶವು ಇದ್ದೇ ಇರುತ್ತದಷ್ಟೇ ? ಇಂತಹ ಉದ್ದೇಶದ ದೃಷ್ಟಿಯಿಂದ ಕಿರುಗತೆಗಳನ್ನು ಇಬ್ಭಾಗವಾಗಿ ವಿಂಗಡಿಸಬಹುದು. ಮನುಷ್ಯಹೃದಯದೊಳಗಿನ ಒಂದು ಇಲ್ಲವೆ ಹಲವು ಮನೋವಿಕಾರಗಳನ್ನು ಆವಿಷ್ಕರಿಸುವದು, ಆ ವಿಕಾರಗಳಿಂದ ಉದ್ಭೂತವಾದ ಉದಾತ್ತವಾದ ಇಲ್ಲವೆ ಅಧಮವಾದ ಕೃತಿಗಳನ್ನು ಬಣ್ಣಿಸುವದು, ವಿಶಿಷ್ಟಪರಿಸ್ಥಿತಿಯಲ್ಲಿ ಬೆಳೆದ ಒಂದಾನೊಂದು ವ್ಯಕ್ತಿಯ ಜೀವನಕ್ರಮವನ್ನು ತಿಳಿಸುವದು, ಮತ್ತು ಯಾವದೊಂದು ಕಾವ್ಯಮಯಪ್ರಸಂಗವನ್ನು ವಾಚಕರ ಕಣ್ಣೆದುರಿನಲ್ಲಿ ನಿಲ್ಲಿಸುವದು ಇವೇ ಮೊದಲಾದ ಉದ್ದೇಶಗಳಿಂದ ಲೇಖಕರು ಕಥಾನಕಗಳನ್ನು ಬರೆಯುವದುಂಟು. ಇಂತಹ ಧ್ಯೇಯದಿಂದ ಬರೆಯಲ್ಪಟ್ಟ ಕಥೆಗಳು ಒಂದನೆಯ ವರ್ಗದವು; ಯಾವದೊಂದು ನೈತಿಕ, ಸಾಮಾಜಿಕ ಅಥವಾ ರಾಜಕೀಯ ತತ್ವವನ್ನು ಮನಸ್ಸಿನಲ್ಲಿಟ್ಟುಕೊಂಡು, ಅದನ್ನು ಕಥಾಮೂಲಕವಾಗಿ ಪ್ರತಿಪಾದಿ

ಸುವ ಪ್ರಯತ್ನವನ್ನೂ ಲೇಖಕರು ಮಾಡುತ್ತಾರೆ. ಇಂತಹ ಧ್ಯೇಯದಿಂದ ಬರೆಯಲ್ಪಟ್ಟ ಕಥೆಗಳು ಎರಡನೆಯ ವರ್ಗವು.

ಪೌರಾಣಿಕ ಮತ್ತು ಐತಿಹಾಸಿಕಕಥಾನಕಗಳಲ್ಲಿ ಮೇಲಿನ ಎರಡೂ ಉದ್ದೇಶಗಳು ಸ್ವಲ್ಪ ಹೆಚ್ಚು ಕಡಿಮೆ ಮಾನದಿಂದ ಒಂದೇ ಕಡೆಯಲ್ಲಿ ಗೋಚರಿಸುತ್ತವೆಂದು ಹೇಳಬಹುದು. ಯಾಕಂದರೆ ನಿಜವಾದ ವ್ಯಕ್ತಿಗಳ ಗುಣಸ್ವಭಾವಾದಿಗಳನ್ನು ಇದ್ದಕ್ಕಿದ್ದಂತೆಯೇ ತೋರಿಸಬೇಕಾದುದಂತೂ ಅಪರಿಹಾರ್ಯವು; ಮತ್ತು ಹಿಂದಿನ ಕಾಲದ ಕಥೆಗಳನ್ನು ಇಂದಿನ ಜನರಿಗಾಗಿ ಬರೆಯಬೇಕಾದರೆ ಅದರಲ್ಲಿ ಏನಾದರೂ ಒಂದು ಪ್ರಕೃತಕಾಲೋಚಿತವಾದ ಉದ್ದೇಶವು ಇದ್ದೇ ತೀರಬೇಕು. ಹೀಗೆ ವಿಶಿಷ್ಟೋದ್ದೇಶದಿಂದಲೇ ಶಾರದೆಯು ಕಿರುಗತೆಗಳನ್ನು ಪ್ರಸಿದ್ಧಿಸುತ್ತಿದ್ದಾಳೆ. ಇವರೊಳಗಿನ ಮುಯ್ಯಕ್ಕೆ ಮುಯ್ಯ ಎಂಬ ಕಥೆಯಿಂದ ಆ ತತ್ವವು ಸಮಾಜದಲ್ಲಿ ಎಷ್ಟರಮಟ್ಟಿಗೆ ಆದರಣೀಯವಾಗಿದೆಯೆಂಬದನ್ನು ವಿಷ್ಣುಪುರಾಣಕಾಲದ ಉದಾಹರಣೆಯಿಂದ ಸಿದ್ಧಮಾಡಿ ತೋರಿಸಿದೆ. ಶರ್ಮಿಷ್ಠೆಯೂ ದೇವಯಾನಿಯೂ ಎಂಬ ಕಥೆಯಲ್ಲಿ ಎಲ್ಲರೂ—ವಿಶೇಷವಾಗಿ ಸ್ತ್ರೀಯರು- ಅವಶ್ಯವಾಗಿ ಅನುಸರಿಸಬೇಕಾದ ಶ್ರೇಷ್ಠವಾದ ಸಾಮಾಜಿಕತತ್ವಗಳು ಒಡಮೂಡಿವೆ. ವೀರಪತ್ನಿಯಾದ ವೀರಮತಿಯ ಧೀರೋದಾತ್ತತೆಯು ಅನುಕರಣೀಯವಾಗಿದೆ. ಕರ್ಣಾಟಕವೀರನಾದ ನರಸಿಂಗನಾಯಕನ ವೀರಾವೇಶವು ಹೇಡಿಗಳನ್ನೂ ಹುರಿದುಂಬಿಸುವಂತಿದೆ. ಎಚ್ಚಮನ ರಾಜಭಕ್ತಿಯನ್ನು ಓದಿದೊಡನೆಯೇ ಮನಸ್ಸು ಅವನಿಗೆ ಧನ್ಯವಾದಗಳನ್ನು ಕೊಡದೆ ಇರಲಾರದು. ಕರ್ತವ್ಯಗಳ ತಾರತಮ್ಯದಲ್ಲಿ ವ್ಯಕ್ತಿಧರ್ಮಕ್ಕೆ ಯಾವಾಗ ಎಷ್ಟು ಮಹತ್ವವನ್ನು ಕೊಡಬೇಕು? ರಾಷ್ಟ್ರಧರ್ಮವು ಯಾಕೆ ಮತ್ತು ಹೇಗೆ ಶ್ರೇಷ್ಠವಾದದ್ದು ? ಎಂಬದನ್ನು ಒಳ್ಳೆಯ ಪರಿಣಾಮಕರವಾದ ರೀತಿಯಿಂದ ವ್ಯಕ್ತಗೊಳಿಸಿದೆ. ಬೆಳವಡಿಯ ಮಲ್ಲಮ್ಮನ ಕಥೆಯನ್ನು ಓದುವದರಿಂದಂತೂ ವೀರಶ್ರೀಯು ವಾಚಕರ ಪ್ರತ್ಯವಯವದಲ್ಲಿಯೂ ಆವಿರ್ಭವಿಸಿ ರೋಮಾಂಚಗಳನ್ನೇಳಿಸುವದು.

ರಾಷ್ಟ್ರಕ್ಕೆ ಪುರಾಣೇತಿಹಾಸವಾಚನದ ಉಪಯೋಗವು ಎಷ್ಟಿದೆಯೆಂಬದನ್ನು ಬೇರೆ ಹೇಳಬೇಕಾಗಿಲ್ಲ. ಪೌರಾಣಿಕ ಮತ್ತು ಐತಿಹಾಸಿಕ ಕಥಾನಕಗಳ ವಾಚನದಿಂದ ಮನೋರಂಜನೆಯಾಗುವದಲ್ಲದೆ, ತಲ್ಲೀನತೆಯ ಮೂಲಕ ಪುರಾಣೇತಿಹಾಸವಾಚನದ ಪ್ರಯೋಜನಗಳು ತಾವಾಗಿಯೇ ಉಂಟಾಗುವವು. ನಮ್ಮ ನಿಜಸ್ಥಿತಿಯನ್ನು ಅರಿತು ಪ್ರಕೃತಪರಿಸ್ಥಿತಿಯಲ್ಲಿ ಯಾವ ರೀತಿಯಿಂದ ಮುಂದಡಿ

ಯಿಡಬೇಕೆಂಬುದನ್ನು ಅರಿತುಕೊಳ್ಳುವವಕ್ಕೆ ಇಂತಹ ಕಥಾನಕಗಳು ಒಳ್ಳೆಯ ಸಾಧಕಗಳು. ಇವುಗಳ ವಾಚನದಿಂದ ಸ್ವಾಭಿಮಾನ, ಸ್ವಕೀಯಾಭಿಮಾನ, ಸ್ವದೇಶಾಭಿಮಾನ, ಸ್ವಭಾಷಾಭಿಮಾನ ಮತ್ತು ಸ್ವಧರ್ಮಾಭಿಮಾನ ಮೊದಲಾದ ಸದ್ಗುಣಗಳ ಬೀಜವು ಅನಾಯಾಸವಾಗಿಯೇ ಬಿತ್ತಲ್ಪಡುವದು.

ಇರಲಿ. ಕೇವಲ ಮನೋವೃತ್ತಿಗಳ ಆವಿಷ್ಕರಣಕ್ಕಾಗಿ ಬರೆದ ಕಥೆಗಳು ಇದರಲ್ಲಿ ತೀರ ಕಡಿಮೆ. ಮಾತೃಸ್ನೇಹ ಮತ್ತು ಯೋಗ್ಯಪ್ರತಿಫಲ ಇವುಗಳಲ್ಲಿ ಆ ಉದ್ದೇಶವು ಬಲುಮಟ್ಟಿಗಿದೆ. ನಿಷ್ಫಲಪ್ರೇಮವು ವಿಶಿಷ್ಟಪರಿಸ್ಥಿತಿಯೊಳಗಿನ ವ್ಯಕ್ತಿಯ ಜೀವನಕ್ರಮವನ್ನು ತಿಳಿಸುತ್ತದೆ. ಆದರೂ ಎಲ್ಲ ಕಥೆಗಳೂ ಒಟ್ಟಿನ ಮೇಲೆ ಒಂದೊಂದು ವಿಶಿಷ್ಟತತ್ವದ ಪ್ರತಿಪಾದನಕ್ಕಾಗಿಯೇ ಬರೆಯಲ್ಪಟ್ಟಿವೆಯೆಂದು ಹೇಳಬಹುದು. ಶಿಕ್ಷಿತರಾದವರು 'ಕೆಲಸ, ಕೆಲಸ' ಎಂದು ಬಡಬಡಿಸುತ್ತ ಆಯುಷ್ಯವನ್ನು ವ್ಯರ್ಥಮಾಡಿಕೊಳ್ಳುವ ಹವ್ಯಾಸವನ್ನು ಬಿಟ್ಟು ಬಿಟ್ಟು, ಯಾವದೊಂದು ಸ್ವತಂತ್ರೋದ್ಯಮವನ್ನಾಗಲಿ, ಗೃಹೋದ್ಯೋಗವನ್ನಾಗಲಿ ಕೈಕೊಳ್ಳಬೇಕೆಂಬ ಮಾತನ್ನು 'ಗೃಹಲಕ್ಷ್ಮಿ'ಯು ಕಲಿಸುತ್ತಾಳೆ. 'ಮೂರ್ತಿಪೂಜೆ'ಯಲ್ಲಿ ಮೂರ್ತಿಪೂಜೆಯ ಇಂಗಿತವೂ ತ್ಯಾಗದ ಮಹತ್ವವೂ ಪ್ರತಿಪಾದಿತವಾಗಿವೆ. ಐಶ್ವರ್ಯಮದದಿಂದ ಬೀಗಿ ಬಿರಿಯದೆ, ಸಮದೃಷ್ಟಿಯುಳ್ಳವರೂ ವಿನೀತರೂ ಆಗಿರಬೇಕೆಂಬ ನೀತಿಯು 'ಯೋಗ್ಯಪ್ರತಿಫಲ'ದಿಂದ ಧ್ವನಿತವಾಗಿದೆ. ತಾಯಿಯ ಹೃದಯವು ಹೇಗೆ ವಾತ್ಸಲ್ಯಮಯವಾಗಿರುತ್ತದೆಂಬದನ್ನು 'ಮಾತೃಸ್ನೇಹ'ದಲ್ಲಿ ತೋರಿಸಿದೆ. ಅಸ್ಪೃಶ್ಯತೆ, ಜಾತ್ಯಂತರವಿವಾಹಪ್ರತಿಬಂಧ, ತಂದೆತಾಯಿಗಳು ಅಧಿಕಾರದಿಂದ ಮಗಳ ಮದುವೆಯನ್ನು ಮಾಡುವದು ಇವುಗಳಿಂದಾಗುತ್ತಿರುವ ಅನರ್ಥದ ದೃಶ್ಯವೇ 'ವಿಚಿತ್ರಘಟನೆ'ಯು. 'ನಿಷ್ಫಲಪ್ರೇಮ'ದಲ್ಲಿ ಅವ್ಯಾಜ ಮತ್ತು ನಿಷ್ಕಲಂಕವಾದ ಪ್ರೇಮದ ಮಾದರಿಯು ಚಿತ್ರಿಸಲ್ಪಟ್ಟಿದೆ. ಯೋಗಿಗಳಿಗೂ, ಬ್ರಹ್ಮಚಾರಿಗಳಿಗೂ, ಸ್ತ್ರೀಪುರುಷರಿಗೂ ಎಲ್ಲರಿಗೂ ಪ್ರಕೃತಕಾಲೋಚಿತವಾದ ಕರ್ತವ್ಯವನ್ನು 'ಯೋಗಿಮಹಿಮೆ'ಯು ಬೋಧಿಸುತ್ತದೆ. ಹೀಗೆ ಒಂದೊಂದರಲ್ಲಿ ಒಂದೊಂದು ಉದಾತ್ತವಾದ ಮಾತಿರುವದೇನೋ ನಿಜ. ಅದರಂತೆಯೇ ವ್ಯಕ್ತಿಸ್ವಭಾವಚಿತ್ರವು ಪ್ರತಿಯೊಂದು ಕಥೆಯಲ್ಲಿಯೂ ಸೂಕ್ಷ್ಮವಾಗಿಯೂ ಮನೋಹರವಾಗಿಯೂ ಮೂಡಿದೆಯೆಂಬದನ್ನು ರಸಿಕವಾಚಕರು ಮನಗಾಣಬಹುದು.

ಪ್ರತಿಯೊಂದು ಕಥೆಯಲ್ಲಿರುವ ಮಹತ್ವದ ಮಾತನ್ನು ಮಾತ್ರ ಇದುವರೆಗೆ ಉಲ್ಲೇಖಿಸಿದೆವು. ಆದರೂ ಪ್ರತಿಯೊಂದರಲ್ಲಿಯೂ ಸದ್ಯಕ್ಕೆ ನಮಗೆ

ಉಪಯುಕ್ತವಾದ ಹಲವು ಬಗೆಯ ನೀತಿಬೋಧಗಳು ಅಡಕವಾಗಿವೆಯೆಂಬ ವನ್ನು ವಾಚಕರು ಮರೆಯತಕ್ಕದ್ದಲ್ಲ.

ಉದ್ದೇಶದ ದೃಷ್ಟಿಯಿಂದ ಕಿರುಗತೆಗಳಲ್ಲಿ ಎರಡು ವರ್ಗಗಳುಂಟೆಂದು ಮೊದಲು ಹೇಳಿದೆಯಷ್ಟೇ ? ಅವುಗಳಲ್ಲಿ ತತ್ವಪ್ರತಿಪಾದಕವಾದ ಕಥಾನಕವನ್ನು ಬರೆಯುವ ಕೆಲಸವು ಬಲು ಬಿಗಿಯಾದದ್ದು. ಯಾಕೆಂದರೆ ತತ್ವ ಮತ್ತು ಕಥೆ ಇವುಗಳ ಸಂಬಂಧವನ್ನು ಯೋಗ್ಯಪ್ರಮಾಣದಿಂದ ಕೂಡಿಸಬೇಕಾಗುತ್ತದೆ. ತತ್ವಗಳ ಭಾರವು ಕಥೆಯ ಮೇಲೆ ಬಿದ್ದರೆ ಅದು ಮನೋಹರ ವಾಙ್ಮಯವಾಗು ವದಿಲ್ಲ. ಅದರಂತೆಯೇ ತತ್ವಶೂನ್ಯವಾದ ಕಥಾನಕದಲ್ಲಿ ಇತರಸೌಂದರ್ಯವು ಎಷ್ಟಿದ್ದರೇನು ಪ್ರಯೋಜನವು ? ಮುಖ್ಯವಾಗಿ ಕಥೆಯ ಉತ್ಕರ್ಷವು ಶಿಖರಕ್ಕೆ ಮುಟ್ಟಬೇಕು; ವಾಚಕರು ತಲ್ಲೀನರಾಗಿ ತನ್ಮಯರಾಗಿರುವಾಗಲೇ, ತತ್ವದ ಸ್ಥಿರ ಚಿಹ್ನಗಳು ಅವರ ಹೃದಯದಲ್ಲಿ ಮೂಡಬೇಕು. ಕಥಾನಕದೊಳಗಿನ ಪಾತ್ರ ಗಳ ನುಡಿ ಮತ್ತು ನಡೆ ಇವುಗಳ ವಿಪಾಕವನ್ನು ಅವಲೋಕಿಸಲು ಆತುರ ಪಡುವ ಮನಸ್ಸಿಗೆ, ಕೊನೆಯಲ್ಲಿ ವಿಶ್ರಾಂತಿಯು ದೊರೆತಾಗ ಕಥಾಲೇಖಕನ ಉದ್ದೇಶವು ಸ್ಪಷ್ಟವಾಗಿ ಬಿಂಬಿಸಬೇಕು. ಈ ದೃಷ್ಟಿಯಿಂದ ಇದರೊಳಗಿನ ಪ್ರತಿಯೊಂದು ಕಥೆಯನ್ನು ಪರೀಕ್ಷಿಸಬೇಕೆಂದು ವಿದ್ವಾಂಸರೂ ರಸಿಕರೂ ಆದ ನಮ್ಮ ವಾಚಕರನ್ನು ಕೇಳಿಕೊಳ್ಳುತ್ತೇವೆ.

ಲೇಖನಕಲೆಯ ದೃಷ್ಟಿಯಿಂದ ಕಿರುಗತೆಗಳಲ್ಲಿರಬೇಕಾದ ಇನ್ನೊಂದು ಗುಣ ವನ್ನು ಇಲ್ಲಿ ಹೇಳುವದು ಅವಶ್ಯವೆಂದು ತೋರುತ್ತದೆ. ಕಾದಂಬರಿಗೂ ಲಘು ಕಥೆಗೂ ವಿಶಿಷ್ಟವಾದ ಭೇದವಿರುತ್ತದೆ. ಲಘುಕಥೆಯಲ್ಲಿ ಒಂದು ವಿಶಿಷ್ಟವಾದ ಮಾತನ್ನು ವಾಚಕರ ಹೃತ್ಫಲಕದ ಮೇಲೆ ಚಿತ್ರಿಸುವದಿರುತ್ತದೆ. ಆದದರಿಂದ ಲೇಖಕನ ದೃಷ್ಟಿಯು ಯಾವಾಗಲೂ ಹೇತುಸಿದ್ಧವಾಗಿರಬೇಕಾಗುತ್ತದೆ. ಆದರೆ ಕಾದಂಬರಿಯಲ್ಲಿ ಈ ತರದ ಪರಿಸ್ಥಿತಿಯಿರುವದಿಲ್ಲ. ಬೇರೆ ಬೇರೆ ಉಪಕಥೆಗಳು, ವರ್ಣನೆಗಳು ಇವುಗಳನ್ನು ಉಪಯೋಗಿಸಿ ವಿಸ್ತೃತರೀತಿಯಿಂದ ವಿಚಾರಗಳನ್ನು ಪ್ರಕಟಿಸಲು ಅನುವಿರುತ್ತದೆ. ಮಧ್ಯವರ್ತಿಯಾದ ಕಥಾನಕಕ್ಕೂ ಇಂತಹ ಉಪಕಥಾದಿಗಳಿಗೂ ಅಲ್ಲಿ ದೂರದ ಸಂಬಂಧವಿರುತ್ತದೆ. ಇಂತಹ ಅವಾಂತರ ವಾದ ಮಾತುಗಳ ಮನೋಹಾರಿತ್ವದ ಮೂಲಕವಾಗಿ ಕಾದಂಬರಿಯೊಳಗಿನ ಪ್ರಮಾಣಬದ್ಧತೆಯು ಶಿಥಿಲವಾದರೂ ವಾಚಕರಿಗೆ ಸಹ್ಯವೆನಿಸುತ್ತದೆ. ಆದರೆ ಲಘುಕಥಾಲೇಖಕನು ಈ ಬಗೆಯಾಗಿ ತನ್ನ ಲೆಕ್ಕಣಿಕೆಯನ್ನು ಸ್ವೈರವಾಗಿ ತಿರು

ಗಿಸಲಿಕ್ಕಾಗುವದಿಲ್ಲ. ಅವನ ದೃಷ್ಟಿಯು ಯಾವಾಗಲೂ ಮಧ್ಯವರ್ತಿಯಾದ ಕಲ್ಪನೆಯ ಮೇಲೆ ನಟ್ಟಿರಬೇಕಾಗುತ್ತದೆ. ದೊಡ್ಡ ದೊಡ್ಡ ಚಿತ್ರಗಳನ್ನು ಬರೆಯುವ ಚಿತ್ರಕಾರನು, ಬಣ್ಣದ ಕುಂಚವನ್ನು ಇತ್ತಲತ್ತ ಶಿಥಿಲಮನಸ್ಸಿನಿಂದ ಎಳೆದಾಡಿದರೆ ನಡೆಯಬಹುದು. ಆದರೆ ಅವನೇ ಸಣ್ಣ ಪ್ರಮಾಣದ ಚಿತ್ರಗಳನ್ನು ತೆಗೆಯುವಾಗ ಪ್ರತಿಯೊಂದು ಗೆರೆಯನ್ನು ಲಕ್ಷ್ಯಪೂರ್ವಕವಾಗಿ ಎಳೆಯಬೇಕಾಗುವದು. ಲಘುಕಥಾಲೇಖಕನ ಸ್ಥಿತಿಯೂ ಹೀಗೆಯೇ ಇರುತ್ತದೆ. ಅವನು ಲೇಖಣಿಕೆಯನ್ನು ಸಡಿಲುಬಿಟ್ಟರೆ ಮೂಲಕಥೆಯು ಎಲ್ಲಿಯೋ ಉಳಿದುಹೋಗುವದು ; ಆಮೇಲೆ ಕಥಾನಕದ ಸ್ಥಾನಮರ್ಯಾದೆಯನ್ನು ಕಾಯ್ದುಕೊಳ್ಳುವದಕ್ಕಾಗಿ ಕಥೆಯನ್ನು ಸಂಕ್ಷೇಪಿಸಬೇಕಾಗುವದು. ಹೀಗಾಗಿ ಮೂಲಕಲ್ಪನೆಯು ಸ್ಫುಟವಾಗಿ ಮೂಡುವದಿಲ್ಲ; ಮತ್ತು ಕಥಾಸೌಂದರ್ಯವೂ ಕೆಡುವ ಸಂಭವವುಂಟು. ಆದದರಿಂದ ಕಿರುಗತೆಗಳನ್ನು ಬರೆಯುವಾಗ ಬರಹಗಾರನು ಮೂಲಕಲ್ಪನೆಯನ್ನು ಸ್ವಲ್ಪವೂ ಮರೆಯತಕ್ಕದ್ದಲ್ಲ; ಮತ್ತು ಕಥೆಯೊಳಗಿನ ಪ್ರತಿಯೊಂದು ಭಾಗವು ಮಧ್ಯವರ್ತಿಯಾದ ಕಲ್ಪನೆಗೆ ಪೋಷಕವಾಗಿ ಎಲ್ಲ ಮಾತುಗಳಲ್ಲಿಯೂ ಪ್ರಮಾಣಬದ್ಧತೆಯು ಇರತಕ್ಕದ್ದು. ಈ ದೃಷ್ಟಿಯಿಂದ ಇಲ್ಲಿರುವ ಕಿರುಗತೆಗಳನ್ನು ಪರೀಕ್ಷಿಸುವ ಕೆಲಸವನ್ನಾದರೂ ನಮ್ಮ ಸಹೃದಯರಾದ ವಾಚಕಮಹಾಶಯರಿಗೇ ಒಪ್ಪಿಸುವೆವು.

ಇನ್ನು ಕಥಾನಕದ ವಾತಾವರಣದ ಸಂಬಂಧದಿಂದಲೂ ಒಂದೆರಡು ಮಾತುಗಳನ್ನು ಬರೆಯುವದು ಯೋಗ್ಯವೆನಿಸುತ್ತದೆ. ಇದು ಕೇವಲ ಲೇಖಕರ ಪ್ರತಿಭೆಗೆ ಸಂಬಂಧಪಟ್ಟದ್ದು. ಯಾವ ಜಗತ್ತಿನ ಪ್ರತ್ಯಕ್ಷಾನುಭವವು ತಮಗೆ ಇಲ್ಲವೋ, ಅಂತಹ ಸ್ಥಳದಲ್ಲಿ ಕೆಲವರು ಕಾಲನ್ನೇ ಇಡಲಿಚ್ಛಿಸುವದಿಲ್ಲ. ಇಂತಹ ಲೇಖಕರ ಕಥೆಯೊಳಗಿನ ಸಾಮಾಜಿಕವಾತಾವರಣದಲ್ಲೆಲ್ಲ ಅವರ ರೂಢಿಯೊಳಗಿನ ದೃಶ್ಯಗಳೇ ಕಣ್ಣಿಗೆ ಬೀಳುತ್ತವೆ. ತಾವು ಯಾವ ಜನಸಮಾಜದಲ್ಲಿ ವ್ಯವಹರಿಸುವರೋ, ಆಯಾವ್ಯಕ್ತಿಗಳ ಯೋಗ್ಯತೆಯು ಎಷ್ಟಿರುವದೋ ಅಷ್ಟೇ ಯೋಗ್ಯತೆಯ, ಅಂತಹ ಸಮಾಜವನ್ನೇ ಅವರು ತಮ್ಮ ಕಥಾನಕಕ್ಕೆ ಆರಿಸುವರು. ನಾಯಕನಾಯಿಕೆಯರಾಗಲಿ, ಉಳಿದ ಪಾತ್ರಗಳಾಗಲಿ ಮೇಲೆ ಹೇಳಿದಂತೆ ಅವರ ಬಳಕೆಯೊಳಗಿನವೇ ಇರುತ್ತವೆ. ಇನ್ನೂ ಕೆಲವರು ಲೇಖಕರ ಸ್ಥಿತಿಯು ಹೇಗಿರುತ್ತದೆಂದರೆ, ತಮಗೆ ಸಾಕ್ಷಾತ್ತಾಗಿಯಾಗಲಿ, ಪರೋಕ್ಷವಾಗಿಯಾಗಲಿ ಅನುಭವಕ್ಕೆ ಬಾರದೆ ಇದ್ದ ವಿಷಯಗಳ ಶಬ್ದಚಿತ್ರಗಳನ್ನು ತೆಗೆಯುವದು ಅವರಿಗೆ

ಸಾಧ್ಯವಿರುವದಿಲ್ಲ. ಸ್ವಾನುಭವದ ಹೊರಗೆ ಅವರ ಕಲ್ಪನೆಯು ಓಡುವದೇ ಇಲ್ಲ. ಹೀಗೆ ತಮ್ಮ ಅನುಭವಮರ್ಯಾದೆಯಲ್ಲಿಯೇ ಇದ್ದರೂ, ಕಲ್ಪನಾಶಕ್ತಿಯಿಂದಲೂ ನಿರೀಕ್ಷಣಶಕ್ತಿಯಿಂದಲೂ ನಿಕಟವರ್ತಿಯಾದ ಜಗತ್ತಿನ ಸುಂದರಚಿತ್ರವನ್ನು ಅವರು ತೆಗೆಯುತ್ತಾರೆ. ಆದದರಿಂದ ಅವರಿಗೆ ಸಾಹಿತ್ಯಸಾಮ್ರಾಜ್ಯದಲ್ಲಿ ಸ್ಥಾನವು ದೊರೆಯುತ್ತದೆ. ಇನ್ನೂ ಒಂದು ತರಗತಿಯ ಲೇಖಕರಿರುತ್ತಾರೆ. ಅವರ ಸುತ್ತಮುತ್ತಲಿನ ಜಗತ್ತು ಮತ್ತು ಕಲ್ಪನೆಯೊಳಗಿನ ಜಗತ್ತು ಇವುಗಳಲ್ಲಿ ಭೂಮ್ಯಾಕಾಶಗಳಷ್ಟು ಅಂತರವಿರುತ್ತದೆ. ಅಂತಹರ ಕಲ್ಪನಾಶಕ್ತಿಯು ಅತಿಶಯತೀವ್ರವಾಗಿಯೂ, ಮನಸ್ಸು ಅತ್ಯಂತ ವ್ಯಾಪನಶೀಲವಾಗಿಯೂ ಇರುತ್ತದೆ. ಅವರು ಸಾಕ್ಷಾದನುಭವವನ್ನಂತೂ ಪ್ರಕಟಮಾಡಿಯೇ ಮಾಡುತ್ತಾರೆ. ಆದರೆ ಉತ್ತುಂಗವೂ ಅನಿವಾರ್ಯವೂ ಆದ ಪ್ರತಿಭಾ ಶಕ್ತಿಯ ಬಲದಿಂದ ಅಸಂಖ್ಯಾಕವಾದ ವೈಚಿತ್ರ್ಯಪೂರ್ಣವಾದ ಅನುಭವಕುಸುಮಗಳ ಆಮೋದವನ್ನು ಹರಡುತ್ತಾರೆ. ಲೇಖಕರ ವಿಷಯದಲ್ಲಿ ಹೇಳಿದ ಈ ಸಾಮಾನ್ಯವಾದ ಮಾತುಗಳು ಪ್ರಸ್ತುತಪುಸ್ತಕದೊಳಗಿನ ಕಥಾನಕಗಳಲ್ಲಿ ಎಲ್ಲಿ ಎಷ್ಟರ ಮಟ್ಟಿಗೆ ಅನ್ವಯಿಸುತ್ತವೆಂಬವನ್ನು ನಮ್ಮ ಚಾಣಾಕ್ಷವಾಚಕಮಹಾಶಯರೇ ಪರೀಕ್ಷಿಸಲಿ.

ಸಾಮಾಜಿಕದೃಶ್ಯಗಳನ್ನು ವಾಚಕರಿಗೆ ತೋರಿಸುವಾಗ ಶಾಂದೆಯು ಸಂಕುಚಿತದೃಷ್ಟಿಯನ್ನು ಅಂಗೀಕರಿಸುವದಿಲ್ಲ. ಮಾನವಕುಟುಂಬದೊಳಗಿನ ಸಾಮಾಜಿಕವಾದ ಆಚಾರವ್ಯವಹಾರಗಳನ್ನೂ ಅವುಗಳ ಪ್ರತ್ಯಕ್ಷಫಲಗಳನ್ನೂ ಕಥಾರೂಪದಿಂದ ತೋರ್ಪಡಿಸುವದು ಅವಳ ಇಂಗಿತವಾಗಿದೆ. ಆದದರಿಂದ ವಾಚಕರು ತಮ್ಮ ದೃಷ್ಟಿಕೋಣವನ್ನು ವಿಸ್ತೃತಗೊಳಿಸಿ ಆಯಾ ಕಥಾನಕಗಳನ್ನು ಅವಲೋಕಿಸಬೇಕೆಂದು ಬೇಡುವೆವು.

ವಿಚಾರಗಳಲ್ಲಿ ಕೇವಲ ಭಾವನಾಧಿಷ್ಠಿತತತ್ವಗಳು ಶಾಶ್ವತಫಲಕಾರಿಗಳಲ್ಲ. ಆದದರಿಂದ ಭಾವನೆಗಳು ಬುದ್ಧಿಯ ಅಧೀನದಲ್ಲಿರಬೇಕು. ಬುದ್ಧಿನಿರ್ದಿಷ್ಟವಾದ ದಿಕ್ಕಿನಿಂದಲೇ ಅವು ಓಡುತ್ತಿರಬೇಕು. ವಿಕಾರವಶರಾದ ವ್ಯಕ್ತಿಗಳಿಗಿಂತಲೂ, ಸುವಿಚಾರಸಂಪನ್ನರೇ ಮೇಲಾದವರು. ಮುಂದೆ ಬರಬಹುದಾದ ತೊಂದರೆಗಳನ್ನು ಹಿಂದೋಡಿಸುವದಕ್ಕಾಗಿ ಪತಿಗೆ ಪ್ರೇರಣೆಯನ್ನೂ ಪ್ರೋತ್ಸಾಹವನ್ನೂ ಕೊಟ್ಟು ಸಾಹಾಯ್ಯ ಮಾಡುವದು ಸತಿಯ ಕರ್ತವ್ಯವು. ಸ್ತ್ರೀಯರು ಸುಶಿಕ್ಷಿತರಾಗಿ ಬೌದ್ಧಿಕಬಲವನ್ನು ಬೆಳಿಸಿಕೊಳ್ಳಬೇಕು. ಪುರುಷರು ಕೈಕೊಂಡ

ರಾಷ್ಟ್ರಕಾರ್ಯಗಳಿಗೆ ಅವರು ನೆರವಾಗಬೇಕು. ಹೆಂಡತಿಯು ಗಂಡನ ಮನಃ ಸಹಚಾರಿಣಿಯಾಗಬೇಕು. ಸ್ತ್ರೀಯಿಂದ ಅಪೇಕ್ಷಿತವಾಗುವ ಸಾಹಾಯ್ಯವು ವ್ಯಕ್ತಿಯನ್ನು ಅನುಸರಿಸಿ ಬೇರೆ ಬೇರೆಯಾಗಿರಬಹುದು. ಪತ್ನಿಯ ಪ್ರೇಮಲ ಕಟಾಕ್ಷವೂ, ಮಧುರವೂ ಶುಚಿಯೂ ಆದ ಸ್ಮಿತವೂ ಪತಿಗೆ ಪ್ರೇರಣಾಪ್ರೋತ್ಸಾಹನಗಳನ್ನು ಕೊಡಬಹುದು. ಪತಿ-ಪತ್ನಿಯರ ಸಂಬಂಧವು ಪ್ರೇಮದ ಅಭೇದ್ಯವಾದ ತಳಹದಿಯ ಮೇಲೆ ನಿಲ್ಲಬೇಕು. ರಾಜಕೀಯವಾದ ಇಲ್ಲವೆ ಸಾಮಾಜಿಕವಾದ ಕಾರ್ಯಗಳನ್ನು ಕೈಕೊಂಡ ಪುರುಷರಿಗೆ ಪತ್ನಿಯರಿಂದ ಅಪರಿಮಿತವಾದ ಸಾಹಾಯ್ಯವಾಗುವದು. ಕವಿಗಳು, ಕಾದಂಬರೀಕಾರರು ಶಾಸ್ತ್ರಜ್ಞರು ಇಲ್ಲವೆ ತತ್ತ್ವಜ್ಞರು ಇವರಾದರೂ ಒಂದಿಲ್ಲೊಂದು ಬಗೆಯಿಂದ ರಾಷ್ಟ್ರಸೇವೆಯನ್ನು ಮಾಡುವವರೇ. ಇಂತಹರಿಗೆ ಕುಟುಂಬದಲ್ಲಿ ಅನುಕೂಲಪರಿಸ್ಥಿತಿಯನ್ನು ಉಂಟುಮಾಡಿಕೊಡುವದು ಪತ್ನಿಯ ಕರ್ತವ್ಯವು. ಇದರಿಂದ ಅವಳಾದರೂ ರಾಷ್ಟ್ರಸೇವೆಯನ್ನು ಮಾಡಿದಂತಾಗುವದು. ಧರ್ಮತತ್ವಗಳು ಮಹತ್ವದವೇ ಹೊರತು ಬಾಹ್ಯಾಚಾರಗಳಿಗೆ ಬೆಲೆಯಿಲ್ಲ. ಅಸ್ಪೃಶ್ಯತೆ, ಬಾಲವಿವಾಹ ಇವೇ ಮೊದಲಾದ ಪೂರ್ವಪದ್ಧತಿಗಳಿಂದಾಗುತ್ತಿರುವ ದುಷ್ಪರಿಣಾಮಗಳನ್ನು ಹೋಗಲಾಡಿಸಿಕೊಳ್ಳುವ ಉಪಾಯವನ್ನು ಮಾಡುವದು ಪ್ರತಿಯೊಬ್ಬರ ಕರ್ತವ್ಯವು. ಇವೇ ಮೊದಲಾದ ಮಾತುಗಳ ದಿಗ್ದರ್ಶನವು ಪ್ರಸ್ತುತಕಥಾನಕಗಳೊಳಗಿನ ಸ್ತ್ರೀ-ಪುರುಷರ ಮುಖಾಂತರವಾಗಿ, ಅಲ್ಲಲ್ಲಿ ಮಾಡಲ್ಪಟ್ಟಿದ್ದನ್ನು ವಾಚಕ ಮಹಾಶಯರು ಮನಗಾಣಬಹುದು.

ಶೃಂಗಾರವು ಈ ಕಥಾನಕಗಳಲ್ಲಿ ಇಲ್ಲನೆಂತಲ್ಲ. ನಮ್ಮಲ್ಲಿಯ ಅನೇಕರು ಶೃಂಗಾರವೆಂದ ಕೂಡಲೆ ಹೆದರುವವರಾದದರಿಂದ ಈ ಮಾತನ್ನು ಇಲ್ಲಿ ಅವಶ್ಯವಾಗಿ ಹೇಳಬೇಕಾಯಿತು. ಆದರೆ ಹಾರವೆಯೊಳಗಿನ ಕಥೆಗಳ ಶೃಂಗಾರವು ಮುಗ್ಧವೂ ಸಭ್ಯವೂ ಆಗಿರುತ್ತದೆ. ಪ್ರಿಯಾ-ಪ್ರಿಯಕರರೊಳಗಿನ ಶೃಂಗಾರವೇ ಇರಲಿ, ಅಥವಾ ಪತಿ-ಪತ್ನಿಯರೊಳಗಿನ ಶೃಂಗಾರವೇ ಇರಲಿ, ಸದಭಿರುಚಿಯ ಕಕ್ಷೆಯನ್ನು ಅದು ಎಂದೂ ಮೀರಿರುವದಿಲ್ಲ. ಆದುದರಿಂದಲೇ ಮಧುರತರವಾಗಿಯೂ, ನಿರಾಗಸವಾಗಿಯೂ ಇರುತ್ತದೆ. ಕಥಾನಕಗಳಲ್ಲಿ ನಡುನಡುವೆ ಬಂದ ಸಂಭಾಷಣೆಗಳಲ್ಲಿ ಲೇಖಕರ ಕೌಶಲ್ಯವನ್ನೂ ನಿರೀಕ್ಷಣಶಕ್ತಿಯನ್ನೂ ಪರೀಕ್ಷಿಸಬಹುದು.

ಒಟ್ಟಿನ ಮೇಲೆ ಕಥಾನಕಗಳ ವಾಚನದಿಂದ ಸುಶಿಕ್ಷಣವು ದೊರೆಯಬೇಕೆಂಬುದೇ ಮುಖ್ಯೋದ್ದೇಶವು. ನಮ್ಮ ಕುಟುಂಬರಚನೆಯಲ್ಲಿಯೂ, ವಿವಾಹಪದ್ಧತಿಯಲ್ಲಿಯೂ, ಸಮಾಜವ್ಯವಸ್ಥೆಯಲ್ಲಿಯೂ, ಆಚಾರವ್ಯವಹಾರಗಳಲ್ಲಿಯೂ ದಿನದಿನಕ್ಕೆ ವ್ಯತ್ಯಾಸವು ಉಂಟಾಗಹತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ಭವಿಷ್ಯತ್ಕಾಲದ ಆದರ್ಶಭೂತವಾದ ಸ್ವಪ್ನಸೃಷ್ಟಿಯ ವಿಶಿಷ್ಟಲಕ್ಷಣಗಳನ್ನು ಕಥಾರೂಪದಿಂದ ಬಹುಜನಸಮಾಜಕ್ಕೆ ತೋರಿಸುವದು ಸಣ್ಣ ಪುಟ್ಟ ಕೆಲಸವಲ್ಲ. ಈ ದೃಷ್ಟಿಯಿಂದ ಕಿರುಗತೆಗಳ ಮಹತ್ವವು ಬಹಳವಾಗಿದೆ.

ಶುದ್ಧತೆ, ಸರಲತೆ, ಮತ್ತು ಏಕೀಕರಣ ಇವು ಶಾರದೆಯ ಭಾಷೆಯ ಗುಟ್ಟಾಗಿವೆಯೆಂಬದನ್ನು ನಮ್ಮ ವಾಚಕಬಂಧುಭಗಿನಿಯರಿಗೆ ಬೇರೆ ಹೇಳಬೇಕಾಗಿಲ್ಲ. ಎಂದಮೇಲೆ ಈ ಕಥಾನಕಗಳೊಳಗಿನ ಭಾಷೆಯ ವಿಷಯವಾಗಿ, ಮತ್ತೆ ಏನನ್ನು ಹೇಳುವದು ? ಶಾರದೆಯಲ್ಲಿ ಆಗಾಗ ಪ್ರಕಟವಾಗಿದ್ದ ಈ ಕಥಾನಕಗಳ ಭಾಷೆ, ಶೈಲಿ, ಸಂವಿಧಾನ ಮತ್ತು ಉದ್ದೇಶ ಇವೆಲ್ಲವೂ ಮನಸ್ಸಿಗೆ ಬಂದದ್ದರಿಂದ ನಮ್ಮ ಕೆಲವು ಹಿತಚಿಂತಕಮಿತ್ರರು ಇವನ್ನು ಪ್ರತ್ಯೇಕವಾಗಿ ಪುಸ್ತಕರೂಪದಿಂದ ಪ್ರಕಟಿಸಿದರೆ ಬಹಳ ಒಳಿತಾಗುವದೆಂದು ಸೂಚಿಸಿದರು. ಅವರ ಸೂಚನೆಯನ್ನು ಅನುಸರಿಸಿ ಈ ಪ್ರಥಮಪ್ರಯತ್ನವನ್ನು ಮಾಡಿದ್ದೇವೆ. ಶಾರದೆಯ ಸಾಮಾನ್ಯಧ್ಯೇಯದಂತೆಯೇ ಈ ಕಥಾನಕಗಳು ಆಬಾಲವೃದ್ಧರಾದ ಸ್ತ್ರೀ-ಪುರುಷರೆಲ್ಲರಿಗೂ ಸರಿಯಾಗಿಯೇ ಬೋಧಪ್ರದವಾಗಿಯೂ ಮನೋರಂಜಕವಾಗಿಯೂ ಪರಿಣಮಿಸುವವೆಂದು ಕೋರುತ್ತೇವೆ.

ಇದರೊಳಗಿನ ಪ್ರತಿಯೊಂದು ಕಥಾನಕದ ಲೇಖಕಮಹಾಶಯರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುವದಲ್ಲದೆ, ಶಾರದೆಯು ಅವರನ್ನು ಉತ್ತರೋತ್ತರವಾಗಿ ಅನುಗ್ರಹಿಸಲೆಂದೂ ಅವರಾದರೂ ಉತ್ತರೋತ್ತರವಾಗಿ ಶಾರದಾಸೇವೆಯಲ್ಲಿ ಬದ್ಧರಾಗಲೆಂದೂ ಆಶಿಸುವೆವು. ಕೊನೆಯಲ್ಲಿ ಕನ್ನಡಿಗರ ಜನತೆಯ ರೂಪದ ಜನಾರ್ದನನು ನಮ್ಮ ಅಲ್ಪಪ್ರಯತ್ನದಿಂದ ತುಷ್ಟಿವಡೆದು ಇತೋಪ್ಯತಿಶಯವಾದ ಕಾರ್ಯವನ್ನು ಮಾಡುವ ಬುದ್ಧಿಶಕ್ತಿಯನ್ನು ದಯಪಾಲಿಸಲೆಂದು ಬೇಡಿಕೊಂಡು ಈ ಪ್ರಸ್ತಾವನೆಯನ್ನು ಮುಗಿಸುತ್ತೇವೆ.

—ಸಂಪಾದಕ

---

# ಮುಯ್ಯಕ್ಕೆ ಮುಯ್ಯ

## (೧)

## ಮೂರು ತಪಗಳ ತಪಸ್ಸು.

"ಆಹಹಾ ! ಇದೇನು ಚಮತ್ಕಾರವು ! ತೇಜಸ್ವಿತೆಯಲ್ಲಾಗಲಿ, ಪರಾಕ್ರಮದಲ್ಲಾಗಲಿ ನನ್ನನ್ನು ಸರಿಗಟ್ಟುವವರು ಪೊಡವಿಯಲ್ಲಿಲ್ಲ ! ಆದರೆ ಸ್ವರ್ಗವಾಸಿಗಳಾದ ದೇವತೆಗಳ ಮೇಲೆ ನನ್ನ ಆಟವು ಏಕೆ ನಡೆಯಬಾರದು! ಒಂದಲ್ಲ, ಎರಡಲ್ಲ, ಮೂರುಸಾರೆ ನೋಡಿದೆನು. ಭೂಮಿಯ ಮೇಲಿನ ಈ ನೀಚ ಬ್ರಾಹ್ಮಣರು ಹೋಮಹವನಗಳನ್ನೂ ಯಜ್ಞಯಾಗಗಳನ್ನೂ ಮಾಡಿ, ದೇವತೆಗಳಿಗೆ ಬಲವನ್ನೂ ಬುದ್ಧಿಯನ್ನೂ ಉಂಟುಮಾಡುತ್ತಾರೆ. ಅದರಿಂದಲೇ ನಮ್ಮನ್ನು ಬಗೆಬಗೆಯಿಂದ ಠಕ್ಕಿಸುವ ಯುಕ್ತಿಗಳು ದೇವತೆಗಳಿಗೆ ಗೊತ್ತಾಗುತ್ತವೆ ! ಮೊದಲನೆಯ ಸಾರೆ ಸೋತುಬಂದ ನನಗೆ ಈ ಸಂಗತಿಯು ತಿಳಿಯಿತು. ಅಂದಿನಿಂದ ನಾನು ಬ್ರಾಹ್ಮಣರನ್ನು ಮಿತಿಮೀರಿ ಕಾಡತೊಡಗಿದೆನು! ಸಿಕ್ಕವರನ್ನೆಲ್ಲ ಸೆರೆಮನೆಯಲ್ಲಿ ಹಾಕಿದೆನು ! ಹೋಮಹವನಾದಿಗಳು ಹೇಳಹೆಸರಿಲ್ಲದಂತಾದವು ! ಪ್ರತಿಯೊಬ್ಬ ಬ್ರಾಹ್ಮಣನು ಬಂದಿಯಲ್ಲಿ ಬಿದ್ದುಕೊಂಡಿದ್ದನು !

" ಇಂತಹ ಸಂಧಿಯನ್ನು ಸಾಧಿಸಿ ನನ್ನ ದಂಡನ್ನು ಇಮ್ಮಡಿಸಿಕೊಂಡು, ಸಂಪೂರ್ಣ ಸನ್ನಾಹದಿಂದ ಸ್ವರ್ಗವನ್ನು ಎರಡನೆಯ ಸಾರೆ ಮುತ್ತಿದೆನು. ಈ ಕಾಲದಲ್ಲಿ ಬ್ರಾಹ್ಮಣರು ಪ್ರತ್ಯಕ್ಷವಾಗಿ ಅಗ್ನಿಕುಂಡಗಳನ್ನು ಹೊತ್ತಿಸಲಿಲ್ಲ. ಸಮಿತ್ತುಗಳಿಂದ ಅಗ್ನಿಯನ್ನು ಪ್ರಜ್ವಲಿಸಿ ಘೃತಮಿಶ್ರಿತವಾದ ಪಕ್ವಾನ್ನಗಳ ಆಹುತಿಯನ್ನು ಪ್ರತ್ಯಕ್ಷವಾಗಿ ಕೊಡಲಿಲ್ಲ. ಆದರೆ ಸೆರೆಮನೆಯಲ್ಲಿ ತಮ್ಮ ಶರೀರಕುಂಡದಲ್ಲಿ ಜಠರಾಗ್ನಿಯನ್ನು ಪ್ರದೀಪ್ತಮಾಡಿ ನಿತ್ಯದ ಆಹಾರವನ್ನೇ ಆಹುತಿಗೊಟ್ಟರು! ಇಷ್ಟರಿಂದಲೇ ಬಲಿಷ್ಠರಾದ ದೇವತೆಗಳು ನನ್ನನ್ನು ಗೆಲ್ಲಲು ಸಮರ್ಥರಾದರು! ಆಹಾ ! ಆ ನೀಚಬ್ರಾಹ್ಮಣರ ಆಹುತಿಗಳಲ್ಲಿ ಯಾವ ಮಾಯೆಯಿದೆಯೋ ಯಾರಿಗೆ ಗೊತ್ತು ?

" ಆದರೇನು ? ಈ **ಗಯಾಸುರನು** ಇಷ್ಟರಿಂದ ಎದೆಗುಂದುವನೇ ? ಆ ನೀಚರಾದ ಬ್ರಾಹ್ಮಣರನ್ನು ಸೆರೆಮನೆಯಲ್ಲಿ ಡಬ್ಬು ಮಲಗಿಸಿ ಡುಬ್ಬದ ಮೇಲೆ ಒಂದೊಂದು ಕಲ್ಲನ್ನು ಹೇರಿಸಿದೆನು ! ಕೂಳನ್ನು ಕೂಡ ಕೊಡಕೂಡದೆಂದು

ಕಟ್ಟಿ ಮಾಡಿದೆನು ! ಇದರಿಂದ ಮೊದ ಮೊದಲು ಮಾತ್ರ ಗೆಲವು ದೊರೆಯು ವಂತೆ ಭಾಸವಾಯಿತು ! ಆನಂದಿತನಾದೆನು ! ಬ್ರಾಹ್ಮಣರನ್ನು ಬಂಧಿಸಿದ್ದರ ಫಲವೇ ಇದೆಂದು ಮನವರಿಕೆಯಾಯಿತು ! ಅವರನ್ನು ಎಂದೂ ಬಿಡುಗಡೆ ಮಾಡಬಾರದೆಂದು ನಿರ್ಧರಿಸಿದೆನು ! ಹಾಯ್! ಹಾಯ್ ! ಅದೆಲ್ಲವೂ ಮನೋ ರಾಜ್ಯವೇ ಆಯಿತು ! ಇಂದ್ರನ ರಾಜ್ಯವನ್ನು ಸಮೀಪಿಸಿದೊಡನೆಯೇ ಯಕ್ಷಿ ಣಿಯ ದಂಡವು ತಿರುಗಿದಂತಾಯಿತು ! ಆ ಯುದ್ಧದ ರೀತಿಯೇ ಬೇರೆ ! ನಮ್ಮ ಒಂದೂ ಬಾಣವು ನಾಟಲಿಲ್ಲ ! ವಾತಾವರಣದಲ್ಲಿಯೇ ಮಾಯವಾಗತೊಡಗಿ ದವು! ನಮ್ಮವೆಲ್ಲವೂ ಹುಸಿಹುದ್ದು! ಹುಸಿಗುಂಡು ! ಹುಸಿಹೊಡತ ! ದೇವತೆಗಳ ಒಂದೊಂದು ಕ್ಷುದ್ರಬಾಣವು ಕೂಡ ನಮ್ಮಲ್ಲಿ ಅಪರಿಮಿತ ಹಾನಿಯನ್ನು ಮಾಡ ತೊಡಗಿತು ! ನಾನು ಜೀವದಿಂದ ಪಾರಾದದ್ದೇ ಹೆಚ್ಚಿನ ಮಾತು !

"ದೇವತೆಗಳು ನಮ್ಮಷ್ಟು ಶಕ್ತಿಯುಂತರಲ್ಲ. ಆದರೆ ಅವರಲ್ಲಿ ಯಾವುದೋ ಒಂದು ಅದ್ಭುತವಾದ ಸಾಮರ್ಥ್ಯವಿದೆಯೆಂಬಲ್ಲಿ ಸಂದೇಹವಿಲ್ಲ ಅವರ ಶಸ್ತ್ರಾಸ್ತ್ರ ಗಳಲ್ಲಿ ಅಂತಹ ದಿವ್ಯವಾದ ಶಕ್ತಿಯು ತುಂಬಿಕೊಂಡಿದೆ; ತಪಶ್ಚರ್ಯೆಯಿಂದ ಅವರು ಅಂತಹ ವರವನ್ನು ಪಡೆದು ಅಭೇದ್ಯರಾಗಿದ್ದಾರೆ. ಅವರೊಡನೆ ಹೋರಾ ಡಬೇಕಾದರೆ ತಪೋಮೂಲಕವಾದ ಅಂತಹ ಬಲವಿರಲಿಕ್ಕೆಬೇಕು; ವರವನ್ನು ಪಡೆದು ವಜ್ರಕಾಯಿಯಾಗಿಯೇ ಅವರನ್ನೆದುರಿಸಲಿಕ್ಕೆಬೇಕು. ಇನ್ನು ಇದೇ ನಿಶ್ಚ ಯವು. ಇಂದೇ ತಪಸ್ಸಿಗೆ ಹೊರಟೆನು. ಈ ಗಯಾಸುರನ ಕೈಯನ್ನು ದೇವತೆ ಗಳಿಗೆ ತೋರಿಸಿಯೇ ಬಿಡುವೆನು ! ಇಂದ್ರನ ಐಶ್ವರ್ಯವನ್ನು ಸೂರೆಮಾಡಿಯೇ ತೀರುವೆನು ! ದೇವತೆಗಳನ್ನು ಒದ್ದಾಡಿಸಿ, ದಿಕ್ಕುದಿಕ್ಕಿಗೆ ಓಡಾಡಿಸಿ ಕಳವಳಿಸಗೊ ಳಿಸದಿದ್ದರೆ ನನ್ನ ಹೆಸರು ಗಯಾಸುರನೇ ಅಲ್ಲ ! ಜಯ ಚಂಡಿ! ಮಹಾಕಾಳಿ!"

ಹೀಗೆನ್ನುತ್ತ ಜಯಘೋಷಮಾಡುತ್ತ ಗಯಾಸುರನು ಹೊರಟೇ ಬಿಟ್ಟನು ! ಕಟ್ಟಡವಿಯಲ್ಲಿ ಸೇರಿದನು ! ಕೈಲಾಸನಾಥನಾದ ಶ್ರೀ ಶಂಕರನನ್ನು ಕುರಿತು ಹನ್ನೆರಡು ವರ್ಷಗಳ ವರೆಗೆ ಕಠಿಣವಾದ ತಪಸ್ಸನ್ನಾಚರಿಸಿದನು. ಶಂಕರನು ಶಂ-ಕರನೇ ಅಹುದು ! ಭಕ್ತರ ಕೋರಿಕೆಗಳನ್ನು ಈಡೇರಿಸುವಲ್ಲಿ ಅತ್ಯಂತ ತತ್ಪರನು ! ಒಂದು ತಪದ ವರೆಗೆ ಅಖಂಡವಾಗಿ ತಪಸ್ಸು ಮಾಡು ತ್ತಿದ್ದ ಗಯಾಸುರನ ದೃಢನಿಷ್ಠೆಯನ್ನು ನೋಡಿ ಸಂಪ್ರೀತನಾದನು. ಆದದ

ರಿಂದ ಪ್ರತ್ಯಕ್ಷನಾಗಿ ಆಶೀರ್ವದಿಸಿದನು. ಈಪ್ಸಿತವನ್ನು ಕೇಳಿಕೊಳ್ಳೆಂದು ಗಯಾಸುರನಿಗೆ ಹೇಳಿದನು. ಇಂತು ತುಷ್ಟನಾದ ಮಹಾದೇವನಿಂದ ಗಯನು ಪೃಥ್ವಿಯಲ್ಲಾಗಲಿ ಸ್ವರ್ಗದಲ್ಲಾಗಲಿ ಇರುವ ಎಂತಹ ಶಸ್ತ್ರಾಸ್ತ್ರವನ್ನಾದರೂ ಭೇದಿಸುವ ಶಕ್ತಿಯುಳ್ಳ ತ್ರಿಶೂಲದಂಡವನ್ನು ಪಡೆದನು !

ಆಮೇಲೆ ಆನಂದಿತನಾದ ಆ ಅಸುರನು ದೃಢತರವಾದ ನಿಷ್ಠೆಯಿಂದ ಬ್ರಹ್ಮನನ್ನು ಕುರಿತು ಕಠಿನತರವಾದ ತಪಸ್ಸನ್ನು ಆಚರಿಸಹತ್ತಿದನು ! ಮತ್ತೊಂದು ತಪವು ಕಳೆಯಿತು ! 'ಕರುವನೆಳಗಂದಿ ತಾನರಸಿಕೊಂಡೈತಪ್ಪ ತೆರದಿಂದೆ' ಬ್ರಹ್ಮನು ಗಯಾಸುರನಿದ್ದಲ್ಲಿಗೆ ಬಂದು ಬಯಕೆಯೇನೆಂದು ಬೆಸಗೊಂಡನು. ಆಗ ಯಾವ ಪ್ರಾಣಿಯಿಂದಲೂ ತನ್ನ ಶರೀರಕ್ಕೆ ಅಪಾಯ ತಟ್ಟದಂತೆ ವರವನ್ನೀಯಬೇಕೆಂದು ರಕ್ಕಸನು ಬೇಡಿಕೊಂಡನು. ಅದಕ್ಕೆ ಬ್ರಹ್ಮನು–ರಾಕ್ಷಸಾಗ್ರಣೀ, ನೀನು ನಿನ್ನ ದೇಹವನ್ನು ತೋರಿಸುವಾಗ ಹೆಗಲಿನಿಂದ ಪಾದದವರೆಗೆ ಕೈಮಾಡಿರುತ್ತೀ. ಅಷ್ಟು ಭಾಗದಮೇಲೆ ನನ್ನ ದೃಷ್ಟಿಯು ಬಿದ್ದಿದೆ. ಆದದರಿಂದ ಅದಕ್ಕೆ ಯಾವ ಭಯವೂ ಇಲ್ಲ. ನಿನ್ನ ಹೆಗಲಿನಿಂದ ತಲೆಯವರೆಗಿನ ಭಾಗಕ್ಕೆ ಮಾತ್ರ ಮರಣದ ಭಯವಿದೆ. ನೋಡಿಕೋ. ಎಂದು ಹೇಳಿ ಮಾಯವಾದನು.

ಗಯಾಸುರನ ಆನಂದಕ್ಕೆ ಪಾರಾವಾರವೇ ಇಲ್ಲವಾಯಿತು! 'ತನ್ನ ಶರೀರದ ಮೇಲ್ಭಾಗಕ್ಕುಷ್ಟು ಮೃತ್ಯುವಿನ ಭೀತಿಯನ್ನು ತಪ್ಪಿಸಿಕೊಂಡರೆ ಗೆದ್ದೆನೆಂದು ಆತುರನಾದನು! ಈಗ ದೊರೆತ ಎರಡು ವರಗಳಿಂದಲೂ ಭವಿಷ್ಯದಾಶೆಯಿಂದಲೂ ಅತ್ಯಂತವಾಗಿ ಉತ್ಸಾಹಿತನಾಗಿ ದೃಢತಮವಾದ ನಿಷ್ಠೆಯಿಂದ ಶ್ರೀ ವಿಷ್ಣುವನ್ನು ಕುರಿತು ಕಠಿನತಮವಾದ ತಪಸ್ಸಿಗೆ ತೊಡಗಿದನು ! ಮೂರನೆಯ ತಪವು ಮುಗಿಯಿತು. ಮೊಲೆಯೂಡಿಸುವದಕ್ಕಾಗಿ ಹಸುಗೂಸನ್ನು ಹುಡುಕುವ ತಾಯಿಯಂತೆ ವಿಷ್ಣುದೇವರು ಮೈದೋರಿದನು ! ಬೇಕಾದ ವರವನ್ನು ಬೇಡೆಂದನು. ಹೀಗೆ ಶ್ರೀ ವಿಷ್ಣುವನ್ನು ಒಲಿಸಿಕೊಂಡ ಗಯಾಸುರನು, ತನ್ನ ಹೆಗಲಿನಿಂದ ತಲೆಯ ವರೆಗಿನ ಎಲ್ಲ ಶರೀರಕ್ಕೆ ಯಾತರಿಂದಲೂ ಅಪಾಯವಿಲ್ಲದಂತೆ ವರವನ್ನು ಪಡೆದನು! ಇಂತು ಮೂರು ತಪಗಳ ತಪಸ್ಸಿನಿಂದ ಪಡೆದ ವರಗಳಿಂದ ಗಯಾಸುರನ ಕಣ್ಣುಗಳು ನೆತ್ತಿಯಮೇಲೆ ಬಂದವು!

(೨)

## ಒಡಕೇ ಕೆಡಕಿನ ಮೂಲವು.

'ಮೊದಲೆ ಮರ್ಕಟ ಮೇಲೆ ಮದ್ಯದ ಮದವು' ಎಂಬಂತೆ ಗಯಾಸುರನ ಈಗಿನ ಸ್ಥಿತಿಯಾಗಿತ್ತು! ಅವನು ಪೃಥ್ವಿಯಮೇಲೆ ನಡೆಯಿಸಿದ ಅನಾಹುತಗಳನ್ನು ಬಣ್ಣಿಸುವದಕ್ಕೆ ಕೂಡ ನಮ್ಮ ಲೇಖಣಿಕೆಯು ನಡುಗುತ್ತಿದೆ! ಬ್ರಾಹ್ಮಣರ ಯಜ್ಞಯಾಗಾದಿಗಳನ್ನು ಧ್ವಂಸಮಾಡುವದು, ಮತ್ತು ಹೆಂಡರುಮಕ್ಕಳೊಡನೆ ಅವರನ್ನು ಗೋಳಾಡಿಸಿ ಸೆರೆಮನೆಯಲ್ಲಿ ನೂಕುವದು ಇವೇ ಮೊದಲಾದ ಕೃತಿಗಳು ಅವನ ನಿತ್ಯವ್ಯವಹಾರವಾಗಿದ್ದವು! ಬಹಳ ಹೇಳುವದೇನು? ಪೃಥ್ವಿಯು ಬಹು ಭಾಗವು ಗಯಾಸುರನ ಸೆರೆಮನೆಯಾಗಿತ್ತು! ರಾಕ್ಷಸರನ್ನುಳಿದು ಮಿಕ್ಕವರೆಲ್ಲರೂ ಅಲ್ಲಿ ಸೆರೆಯಾಳಾಗಿದ್ದರು! ಇಷ್ಟಾದಬಳಿಕ ಅವನ ವಕ್ರದೃಷ್ಟಿಯು ದೇವತೆಗಳ ಮೇಲೆ ಬಿತ್ತು! ಸ್ವರ್ಗದ ಮೇಲೆ ಸಾಗಿಹೋಗಿ ದೇವತೆಗಳನ್ನು ಸೆರೆಹಿಡಿದು ತಂದನು! ಕನಿಷ್ಠಪ್ರತಿಯ ಕೆಲಸಗಾರರಂತೆ ಅವರನ್ನು ಹೀನಕರ್ಮಗಳಲ್ಲಿ ತೊಡಗಿಸಿದನು! ಹೀಗೆ ಗಯಾಸುರನ ಹಾವಳಿಯಿಂದ ಸ್ವರ್ಗಕ್ಕೂ ಪೃಥ್ವಿಗೂ ಸಾಕುಬೇಕಾಯಿತು!

ಆಗ ಪೃಥ್ವಿಯು ಆಕಳ ರೂಪವನ್ನು ಧಾರಣ ಮಾಡಿತು! ತಪಸ್ವಿಗಳೂ ಋಷಿಗಳೂ, ಬ್ರಾಹ್ಮಣರೂ ಅದನ್ನು ಹಿಂಬಾಲಿಸಿದರು! ಮೊದಲು ಕೈಲಾಸಪತಿಯಾದ ಶಂಕರನ ಮರೆಹೊಕ್ಕರು. ಶ್ರೀ ಮಹಾದೇವನು ಅವರೆಲ್ಲರನ್ನೊಡಗೊಂಡು ಬ್ರಹ್ಮದೇವನ ಬಳಿಯಲ್ಲಿ ಬಂದು ಸಾದ್ಯಂತವನ್ನು ಸ್ಪಷ್ಟೀಕರಿಸಿದನು. ಬ್ರಹ್ಮದೇವನು ಎಲ್ಲರಿಗೂ ಮುಂದಾಳುವಾಗಿ ಶ್ರೀಮದ್ವಿಷ್ಣುವಿನ ಹತ್ತರ ಬಂದು ಕೈ ಮುಗಿದು, ತ್ರಸ್ತವಾದ ಭೂ-ಸ್ವರ್ಗಗಳನ್ನು ಕಾಪಾಡಬೇಕೆಂದು ಕೇಳಿಕೊಂಡನು.

**ಶ್ರೀವಿಷ್ಣು:**—ಎಲೇ ಪೃಥ್ವಿಯೇ, ಎಲೈ ದೇವಬ್ರಾಹ್ಮಣರೇ, ರಾಕ್ಷಸರು ಕ್ಷುದ್ರರು; ಹೀಗಿದ್ದು ಗಯಾಸುರನು ಹೇಗೆ ಇಷ್ಟು ಬಲಿಷ್ಠನಾದನು? ನೀವು ಸತ್ವಶಾಲಿಗಳು; ಹೀಗಿದ್ದು ನೀವು ಹೇಗೆ ಇಷ್ಟು ಬಲಹೀನರಾದಿರಿ?

**ಎಲ್ಲರೂ:**—(ಕೈಮುಗಿದು) ಋಷಿಗಳ ಮತ್ತು ತಪಸ್ವಿಗಳ ಬಲವು ತಪಶ್ಚರ್ಯೆಯನ್ನೂ, ಬ್ರಾಹ್ಮಣರ ಬಲವು ವೇದಪಠನಾದಿ ನಿತ್ಯ ನೈಮಿತ್ತಿಕ ಕರ್ಮ

ಗಳನ್ನೂ, ದೇವತೆಗಳ ಬಲವು ಹೋಮಹವನಾದಿಗಳನ್ನೂ ಅವಲಂಬಿಸಿದೆ! ಗಯಾಸುರನು ಇವೆಲ್ಲವನ್ನು ನಿಷ್ಕ್ರಿಯರನ್ನಾಗಿ ಮಾಡಿದ್ದಾನೆ! ಆದದರಿಂದ ನಾವೆಲ್ಲರೂ ನಿರ್ಬಲರಾಗಿದ್ದೇವೆ! ಮೇಲಾಗಿ ತ್ರಿಮೂರ್ತಿಗಳಾದ ನಿಮ್ಮ ವರಗಳ ಜಂಬಲವು ಅವನಿಗಿದೆ. ಆದದರಿಂದಲೇ ಅವನು ಸ್ವರ್ಗ ಪೃಥ್ವಿಗಳೆರಡನ್ನೂ ಹಣ್ಣುಗಾಯಿ ನೀರುಗಾಯಿ ಮಾಡಿ ಬಿಟ್ಟಿದ್ದಾನೆ!

ಬ್ರಹ್ಮವಿಷ್ಣುಮಹೇಶರಿಂದ ಬೇರೆ ಬೇರೆಯಾಗಿ ವರಗಳನ್ನು ಪಡೆದು, ಗಯಾಸುರನು ಹೇಗೆ ಮೋಸಮಾಡಿದನೆಂಬುದು ಎಲ್ಲರಿಗೂ ವಿದಿತವಾಯಿತು. ಇದಕ್ಕೆ ಯಾವ ಹಂಚಿಕೆಯನ್ನು ಮಾಡಬೇಕೆಂದು ಶ್ರೀವಿಷ್ಣುವು ಬ್ರಹ್ಮಮಹೇಶರನ್ನು ಕೇಳಿದನು. ಪ್ರತಿಯೊಬ್ಬರು ಕೊಟ್ಟ ವರಗಳೊಳಗಿನ ಶಬ್ದಗಳ ಮತ್ತು ಅವುಗಳ ಅರ್ಥಗಳ ಚರ್ಚೆಯಾಯಿತು. ಕೊಟ್ಟವರಗಳ ಅರ್ಥವನ್ನು ವಿಪರ್ಯಾಸಗೊಳಿಸಿ, ವರಗಳಿಗೆ ಬಾಧೆಬಾರದಂತೆ ಗಯಾಸುರನನ್ನು ತಗ್ಗಿಸಬೇಕೆಂಬ ತತ್ತ್ವವು ಸರ್ವಮಾನ್ಯವಾಯಿತು! ಮುಯ್ಯಕ್ಕೆ ಮುಯ್ಯವೇ ಸರಿಯಾದ ದಾರಿಯೆಂದು ಎಲ್ಲರೂ ಒಪ್ಪಿದರು! ಆದರೆ ಬೆಕ್ಕಿನ ಕೊರಳಲ್ಲಿ ಗಂಟೆಯನ್ನು ಕಟ್ಟುವವರಾರು? ಯಾರು ತಾವು ಕೊಟ್ಟ ವರದ ಅರ್ಥವನ್ನು ಬದಲಿಸಬೇಕು? ಅದಕ್ಕೆ ಒಬ್ಬರೂ ಸಿದ್ಧರಾಗಲಿಲ್ಲ! ಇಷ್ಟೇ ಅಲ್ಲ; ಮಾತಿಗೆ ಮಾತು ಹೊರಟು ಬ್ರಹ್ಮನೂ ಮಹೇಶ್ವರನೂ ವಿಪರೀತವಾಗಿ ಪರಸ್ಪರರ ಮೇಲೆ ಸಿಟ್ಟಾಟದರು! ಅವರಿಬ್ಬರೂ ತಮ್ಮ ತಮ್ಮ ಹಟವನ್ನು ಬಿಡಲೇ ಇಲ್ಲ! ಪಶುಪತಿಯಂತೂ ಸಿಟ್ಟಿನ ಆವೇಶದಲ್ಲಿ ಒದರಾಡುತ್ತ ನಿಂತ ಹೆಜ್ಜೆಯ ಮೇಲೆಯೇ ಸಭೆಯನ್ನು ಬಿಟ್ಟು ಹೊರಟುಹೋದನು! ಶ್ರೀವಿಷ್ಣುದೇವರು ಇದೆಲ್ಲ ಅನರ್ಥವನ್ನು ಅವಲೋಕಿಸಿ ಹೀಗೆಂದು ಎಲ್ಲರನ್ನೂ ಆಜ್ಞಾಪಿಸಿದನು.

"ಎಲೈ ಸೃಷ್ಟಿಯೇ, ದೇವತೆಗಳೇ, ಋಷಿಗಳೇ, ಬ್ರಾಹ್ಮಣರೇ ಕೇಳಿರಿ. ಒಡಕೇ ಕೆಡಕಿನ ಮೂಲವು. ನಿಮ್ಮಲ್ಲಿರುವ ಒಡಕಿನಿಂದ ಗಯಾಸುರನು ಏರಿ ಕುಳಿತಿದ್ದಾನೆ. ನಿಮ್ಮೆಲ್ಲರಿಗೂ ಅವರಿಂದಲೇ ಕೆಡಕಾಗಿದೆ. ಅದಕ್ಕೆ ನಾನಾದರೂ ಏನುಮಾಡಲಿ? ಬ್ರಾಹ್ಮಣರನ್ನು ಗಯಾಸುರನನು ಕಾಡುವಾಗ ಇತರರು ಸ್ವಾರ್ಥದಿಂದ ಸಂತಸಪಟ್ಟಿರು; ಅವರೇನಾದರೂ ನೆರವಾಗಬಂದರೇ? ಬ್ರಾಹ್ಮಣರಲ್ಲಿ ಯಾದರೂ ಸ್ವಾರ್ಥವನ್ನು ನೋಡುವವರೇ ಬಹುಜನರಾದಿರಿ. ಸತ್ವವನ್ನು ಕಳೆದುಕೊಂಡಿರಿ. ಬ್ರಹ್ಮತೇಜಕ್ಕೆ ಸಮವಾದುದು ಯಾವದೂ ಇಲ್ಲ. ಅದನ್ನೇ

ನೀವು ಕಳೆದುಕೊಂಡಿರುವಿರಿ. ಹೆಸರಿಗೆ ಮಾತ್ರ ಬ್ರಾಹ್ಮಣರೆನಿಸಿಕೊಂಡಿದ್ದೀರಿ. ನಿಜವಾದ ಬ್ರಾಹ್ಮಣರೇ ಎಲ್ಲ ದೃಷ್ಟಿಯಿಂದಲೂ ಇತರರ ಆಧಾರಸ್ತಂಭವು. ಬ್ರಾಹ್ಮಣರ ಗತಿಯು ಹೀಗಾದ ಮೇಲೆ ಇತರರನ್ನಾರು ಕೇಳಬೇಕು? ಅದರಿಂದಲೇ ಪೃಥ್ವಿಯು ಈ ಹೀನದಿಶೆಯನ್ನು ಹೊಂದಿದೆ. ಅದರಿಂದಲೇ ದೇವತೆಗಳಾದರೂ ಕಷ್ಟದಲ್ಲಿದ್ದಾರೆ. ಈಗ ಮಾತ್ರ ಎಲ್ಲರಿಗೂ ಬುದ್ಧಿ ಬಂದಿದೆ; ಪಶ್ಚಾತ್ತಾಪವಾಗಿದೆ. ಆದರೆ ನಿಮ್ಮೆಲ್ಲರ ದುರ್ದೈವವು ಇನ್ನೂ ಮುಗಿದಿಲ್ಲ. ಮತ್ತು ಗಯಾಸುರನ ಪಾಪದ ಪಾತ್ರೆಯೂ ಪೂರ್ಣವಾಗಿಲ್ಲ. ಆದರೂ ನಿರಾಶರಾಗಬೇಡಿರಿ. ನಿಮ್ಮ ಸುಖದ ದಿವಸಗಳು ಸಮೀಪದಲ್ಲಿವೆ. ಈಗ ಸಹಿಸಿದಂತೆ ಇನ್ನೂ ಕೆಲವು ದಿವಸಗಳ ವರೆಗೆ ಕಷ್ಟವನ್ನು ಸಹಿಸಿರಿ. ಸಹನೆಯು ಸುಖಸಾಧನದ ಸೋಪಾನವು. ಬ್ರಹ್ಮ ಮಹೇಶರು ಬಡಿದಾಡಿದ್ದನ್ನು ನೋಡಿ ವಿಪರೀತವನ್ನು ಬಗೆಯಬೇಡಿರಿ. ಎಲ್ಲಕ್ಕೂ ಕಾಲವು ಕೂಡಿ ಬರಬೇಕಾಗುತ್ತದೆ. ಅಲ್ಲಿಯವರೆಗೆ ಕರ್ತವ್ಯವನ್ನು ಮಾತ್ರ ಯಾರೂ ಅಲಕ್ಷಿಸಬಾರದು. ಸತ್ವವನ್ನು ಕಳೆದುಕೊಳ್ಳಬಾರದು; ಬ್ರಹ್ಮ ಮಹೇಶರ ವರ್ತನವು ತೋರಿಕೆಯ ಆಟವೆಂದು ತಿಳಿಯಿರಿ. ಅಲ್ಪಾವಧಿಯಲ್ಲಿಯೇ ನಾನು ನಿಮ್ಮೆಲ್ಲರಿಗುಂಟಾದ ಉಪಟಳವನ್ನು ಹೋಗಲಾಡಿಸುವೆನು. ಚಿಂತೆ ಮಾಡಬೇಡಿರಿ. ”

ಎಲ್ಲರ ಮೋರೆಗಳು ಬಾಡಿದವು. ಆದರೂ ಆನಂದದ ಅಸ್ಪಷ್ಟವಾದ ಅಂಕುರದ ಆವಿರ್ಭಾವವು ಅಲ್ಲಿ ಕೊಂಚ ತೋರುತ್ತಿತ್ತು. “ **नाहं जाने नैव जाने न जाने**” ಎಂಬ ಭಾವನೆಯಿಂದ ಎಲ್ಲರೂ—ಎಲೈ ಪ್ರಭುವೇ, ಪರಮಾತ್ಮಾ, ಬೇಗನೆ ಕೃಪೆ ಮಾಡು. ನಮ್ಮನ್ನು ರಕ್ಷಿಸು. ಉದ್ಧರಿಸು.” ಎಂದು ಸಂಪ್ರಾರ್ಥಿಸಿ ಸ್ವಸ್ಥಾನಕ್ಕೆ ತೆರಳಿದರು.



(೩)

## "विनाशाय च दुष्कृताम्"

ತನ್ನ ವಿರುದ್ಧವಾಗಿ ವಿಷ್ಣುವಿನ ಮುಂದೆ ದೂರು ಹೇಳುವ ವಿಷಯದಲ್ಲಿ ಶಂಕರನೂ ಬ್ರಹ್ಮನೂ ಮುಂದಾಳುಗಳಾಗಿದ್ದರೆಂದು ಗಯಾಸುರನಿಗೆ ತಿಳಿಯಿತು. ಆಗಂತೂ ಅವನ ಸಂತಾಪಕ್ಕೆ ಎಣೆಯಿಲ್ಲದಾಯಿತು! ದೇವ ಬ್ರಾಹ್ಮಣರನ್ನು ಅಪರಿಮಿತವಾಗಿ ಕಾಡತೊಡಗಿದನು. ದೇವತೆಗಳನ್ನೆಲ್ಲ ತಂದು ತನ್ನ ಸೆರೆಯಲ್ಲಿರಿಸುವ ಕೆಲಸವು ಭರದಿಂದ ನಡೆಯಿತು; ಇನ್ನು ಶಿವನನ್ನೂ ಬ್ರಹ್ಮನನ್ನೂ ಯೋಗ್ಯವಾಗಿ ಶಿಕ್ಷಿಸಲೇ ಬೇಕೆಂದು ನಿರ್ಧರಿಸಿದನು. ಮತ್ತು ಇದಕ್ಕೆ ತಡಮಾಡುವದು ಸರಿಯಲ್ಲವೆಂದೂ ನಿಶ್ಚಯಿಸಿದನು. ಏಕೆಂದರೆ ಕಬ್ಬಿಣವು ಕಾದಾಗಲೇ ಬಡಿದರೆ ಮಣಿಯುವದು. ಗಾಳಿಯು ಬಿಟ್ಟಾಗಲೇ ತೂರಿಕೊಳ್ಳಬೇಕು. ಅದರಂತೆಯೇ ಶತ್ರುಪಕ್ಷದಲ್ಲಿ ಒಡಕು ಹುಟ್ಟಿಸಿ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಆದರೆ ಭೇದನೀತಿಯು ಪ್ರಯೋಗ ಮಾಡುವ ಕಾರಣವೇ ಈಗ ಉಳಿದಿದ್ದಿಲ್ಲ. ಏಕೆಂದರೆ ಬ್ರಹ್ಮಮಹೇಶರು ತಾವಾಗಿಯೇ ಕಾದಾಡಿದ್ದರು. ಆದದರಿಂದ ಈ ಸಂಧಿಯನ್ನು ಕಳೆದುಕೊಳ್ಳಬಾರದೆಂದು ಆ ನೀತಿನಿಪುಣನಾದ ಗಯಾಸುರನು ನಿರ್ಧರಿಸಿ, ಕೈಲಾಸಪರ್ವತದ ಮೇಲೆ ದಂಡೆತ್ತಿ ಹೋಗಬೇಕೆಂದು ತನ್ನ ದಂಡಿನವರನ್ನು ಆಜ್ಞಾಪಿಸಿದನು. ಬಲವಾದ ಬಲವು ಬಲವಾದ ರೀತಿಯಿಂದಲೇ ಕೈಲಾಸವನ್ನು ಏರತೊಡಗಿತು. ಹಾದಿಯಲ್ಲಿ ಪರ್ವತದ ಸೌಂದರ್ಯವನ್ನು ಹಾಳುಮಾಡುತ್ತಲೂ, ಕೈಗೆ ಸಿಕ್ಕದ್ದನ್ನೆಲ್ಲ ಕೆಡಿಸುತ್ತಲೂ ಸೈನಿಕರು ಉನ್ಮತ್ತತೆಯಿಂದ ಸಾಗಿದರು; ಶಿವನ ಗಣಗಳನ್ನೆಲ್ಲ ದಿಕ್ಕುದಿಕ್ಕಿಗೆ ಓಡಿಸಿದರು. ಶ್ರೀಕೈಲಾಸಪತಿಯು ಸಮಾಧಿಯಲ್ಲಿದ್ದನು. ಸಮಾಧಿಸ್ಥನಾದ ಅವನನ್ನು ಹೆಡಮುರಿಗೆ ಕಟ್ಟಿ ಹಿಡಿದೊಯ್ಯಬೇಕೆಂದು ಗಯಾಸುರನ ಆಲೋಚನೆ. ಇಷ್ಟರಲ್ಲಿ ನಂದಿಕೇಶನು ಕಾಲು ಕೆದರಿ ಡರಿಕೆ ಹೊಡೆಯುತ್ತ ಅಲ್ಲಿ ಬಂದನು. ಅವನ ಪಾದಾಘಾತದಿಂದ ಕೈಲಾಸವು ಅದಿರಿತು. ಡರಕೆಗಳ ಧ್ವನಿಯಿಂದ ಮೂಲೋಕಗಳು ಪ್ರತಿಧ್ವನಿತವಾದವು! ಶ್ರೀಶಂಕರನ ಸಮಾಧಿಯು ಮುರಿಯಿತು! ನಡೆದ ವೃತ್ತಾಂತವನ್ನು ಕಥನ ಮಾಡಿ, ನಂದಿಕೇಶ್ವರನು ಗಯಾಸುರನನ್ನು ಹೊಡೆದಟ್ಟುವದಕ್ಕೆ ಅಪ್ಪಣೆಯನ್ನು ಕೇಳಿಕೊಂಡನು. ಆಮೇಲೆ ಬಾಲವನ್ನು

ಮೇಲಕ್ಕೆತ್ತಿ ಎದುರಾವವರನ್ನೆಲ್ಲ ಇರಿದಿರಿದುಕೊಲ್ಲುತ್ತ ಹೊಡೆದೋಡಿಸುತ್ತ ಗಯಾಸುರನ ದಂಡನ್ನೆಲ್ಲ ಚೆಲ್ಲಾಪಿಲ್ಲಿಯಾಗಿ ಮಾಡಿದನು. ಗಯಾಸುರನನ್ನು ಕೋಡಿನಿಂದ ಎತ್ತಿ ಬೀಸಿ ಒಗೆಯಲು, ಅವನ ಭೂಲೋಕದಲ್ಲಿ ತನ್ನ ಅರಮನೆಯ ಹತ್ತರ ಮೂರ್ಛಿತವಾಗಿ ಬಂದು ಬಿದ್ದನು! ಆಮೇಲೆ ಕೈಲಾಸದಲ್ಲಿ ಶಾಂತತೆಯುಂಟಾಯಿತು!

ಆಗ ಗಯಾಸುರನ ಖಟಪಟಿಳದ ನಿಜವಾದ ಕಲ್ಪನೆಯು ಶಿವನ ಮನಸ್ಸಿನಲ್ಲಿ ಬಂತು. ತನ್ನಂತಹನ ಗತಿಯೂ, ದೇವತೆಗಳ ಸ್ಥಿತಿಯೂ, ಕೈಲಾಸದ ಇರವೂ ಹೀಗಾದಮೇಲೆ ಪೃಥ್ವಿಯು ಎಷ್ಟರ ಮಟ್ಟಿಗೆ ಗಯಾಸುರನಿಂದ ತ್ರಸ್ತವಾಗಿರಬಹುದೆಂದು ಅವನಿಗೆ ಚೆನ್ನಾಗಿ ಮನವರಿಕೆಯಾಯಿತು. ಕಳವಳಬಟ್ಟನು! ಈಗಿಂದೀಗಲೆ ಶ್ರೀವಿಷ್ಣುವಿನ ಬಳಿಗೆ ಹೋಗಲೇಬೇಕು. ಮತ್ತು ಬ್ರಹ್ಮನು ಒಪ್ಪಲಿ, ಬಿಡಲಿ, ನಾನಂತೂ ನನ್ನ ವರದ ಶಬ್ದಗಳ ಅರ್ಥವನ್ನು ಬದಲಿಸಿ ಈ ದುಷ್ಟ ರಾಕ್ಷಸನನ್ನು ನಿಗ್ರಹಿಸಲೇ ಬೇಕು, ಎಂದು ನಿರ್ಧರಿಸಿ ಶೇಷಶಾಯಿಯಾದ ಶ್ರೀಭಗವಂತನ ಬಳಿಗೆ ಬಂದನು. ಬ್ರಹ್ಮನು ಅದಕ್ಕೂ ಮೊದಲೇ ಕಾರ್ಯಾಂತರದಿಂದ ಶ್ರೀವಿಷ್ಣುಸಾನ್ನಿಧ್ಯಕ್ಕೆ ಬಂದಿದ್ದನು. ಅನಪೇಕ್ಷಿತವಾಗಿ ಶಿವನು ಆಗಮಿಸಿದ್ದನ್ನು ನೋಡಿ, ಶ್ರೀವಿಷ್ಣುವು ಕುಶಲಪ್ರಶ್ನಾದಿಗಳನ್ನು ಕೇಳಿ ಆಗಮನದ ಕಾರಣವನ್ನು ಬೆಸಗೊಂಡನು. ಆಗ ಶಿವನು ಸಾದ್ಯಂತವನ್ನೆಲ್ಲ ನಿವೇದಿಸಿದನು. ಬಳಿಕ ಶ್ರೀವಿಷ್ಣುವು ಬ್ರಹ್ಮನ ಅಭಿಪ್ರಾಯವನ್ನು ಕೇಳಲು, ಆತನು ಶಿವನ ಒಪ್ಪಿಗೆಯಿದ್ದರೆ ತನ್ನದೇನೂ ಆತಂಕವಿಲ್ಲವೆಂದನು. ಆಮೇಲೆ ಶ್ರೀವಿಷ್ಣುವು:—

“ತಮ್ಮ ಮೈಮೇಲೆ ಪ್ರಸಂಗಬಾರದ ಹೊರತು ಯಾರಿಗೂ ಬುದ್ಧಿ ಬರುವದಿಲ್ಲವೆಂಬ ಮಾತು ಸುಳ್ಳಲ್ಲ. ಯಾರ ಹೊಟ್ಟೆ ಕಡಿದರೆ ಯಾರು ಅಜವಾನವನ್ನು ತಿನ್ನುತ್ತಾರೆ? ಎಲೈ ಕೈಲಾಸಪತಿ, ಎಲೈ ಕಮಲೋದ್ಭವ, ನೀವೇ ವಿಚಾರ ಮಾಡಿರಿ, ನಿಮ್ಮ ನಿಮ್ಮೊಳಗಿನ ಒಡಕಿನ ಫಲವು ಏನಾಯಿತು ? ಪಾಪ ! ಇದಕ್ಕಾಗಿ ಆ ಭೂಲೋಕದ ಪ್ರಾಣಿಗಳಿಗೆಷ್ಟು ಗೋಳು? ಏನೇ ಇರಲಿ. ಈಗಾದರೂ ನೀವಿಬ್ಬರೂ ಸಮ್ಮತಿಸಿದುದನ್ನು ನೋಡಿ ನನಗೆ ಬಹಳ ಆನಂದವಾಯಿತು ! ಆದರೆ ಆ ಗಯಾಸುರನ ಶಾಸನವನ್ನು ಮಾಡುವದಕ್ಕಾಗಿ ನಾನೊಂದು ಬೇರೆ ಹಂಚಿಕೆಯನ್ನು ತೆಗೆದಿದ್ದೇನೆ. ಅದರಿಂದ ಯಾರ ವರಕ್ಕೂ ಬಾಧೆ ಬರುವಂತಿಲ್ಲ,”

ಯೂರ ವನ್ಯದ ಶಬ್ದಗಳ ಅರ್ಥವನ್ನೂ ಬದಲುಮಾಡುವ ಅಗತ್ಯವಿಲ್ಲ! ನೀವಿಬ್ಬರೂ ಈ ಕಾರ್ಯದಲ್ಲಿ ನನಗೆ ನೆರವಾಗಿರಿ, ಎಂದನಾಯಿತು. ”

ಬ್ರಹ್ಮಮಹೇಶರು ಕೈಕಟ್ಟಿಕೊಂಡು ನಿಂತರು. ಶ್ರೀಮಹಾವಿಷ್ಣುವಿನ ಮಹಿಮೆಯನ್ನು ಕೊಂಡಾಡಿದರು. 'ತಮ್ಮ ಆಜ್ಞೆಯನ್ನು ನಿಂತ ಹೆಜ್ಜೆಯ ಮೇಲೆಯೇ ಶಿರಸಾವಹಿಸಲು ಸಿದ್ಧರಿರುವೆವು.' ಎಂದು ಅರಿಕೆಮಾಡಿಕೊಂಡರು; ಮತ್ತು ಶ್ರೀವಿಷ್ಣುವಿನ ಅಪ್ಪಣೆಯಂತೆ ಗಯಾಸುರನ ಚಲನವಲನಗಳನ್ನು ನಿರೀಕ್ಷಿಸುವದಕ್ಕೆ ಹೊರಟು ಹೋದರು.



(೪)

# ಮುಯ್ಯಿಗೆ ಮುಯ್ಯಿ

ಪರಾಜಯದಿಂದ ನೊಂದ ಗಯಾಸುರನು ಎರಡನೆಯ ಯಾವ ಆಲೋಚನೆಯನ್ನೂ ಮಾಡದೆ ಉಗ್ರತಮವಾದ ತಪಸ್ಸನ್ನು ಮತ್ತೆ ಆಚರಿಸತೊಡಗಿದನು ! ಇದರಿಂದ ಬ್ರಹ್ಮಾದಿಗಳು ಮತ್ತೆ ಬಹಳ ಹೆದರಿದರು. ಇನ್ನು ಇವನು ಯಾವ ವರವನ್ನು ಪಡೆಯುವನೋ ! ಎಷ್ಟು ಅನರ್ಥವನ್ನು ಮಾಡುವನೋ ? ಎಂಬದು ಯಾರಿಗೂ ತಿಳಿಯದಾಯಿತು ! ಪೃಥ್ವಿಯ ಹೌಹಾರಿತು ! ದೇವಾದಿಗಳ ಅವಸಾನವು ತೀರಿತು ! ಎಲ್ಲರೂ ಮತ್ತೆ ಶ್ರೀವಿಷ್ಣುವನ್ನು ಮರೆವೊಕ್ಕರು. ಶ್ರೀವಿಷ್ಣು:-(ಬ್ರಹ್ಮನನ್ನು ಕರೆದು) ಬ್ರಹ್ಮ, ಹೆದರಬೇಡಿರೆಂದು ಎಲ್ಲರಿಗೂ ಧೈರ್ಯಗೊಡು. ನೀನು ಶಾರದೆಯನ್ನು ಕರೆದು, ಗಯಾಸುರನ ನಾಲಿಗೆಯ ಮೇಲೆ ಕುಳಿತುಕೊಳ್ಳೆಂದು ಹೇಳು. ಎಂದರೆ ವರವನ್ನು ಬೇಡುವಾಗ ಅವನ ಬಾಯಿಂದ ಶುಭವೇ ಹೊರಡುವದು.

ಆ ಕ್ಷಣದಲ್ಲಿಯೇ ಶಾರದೆಯು ಗಯಾಸುರನ ನಾಲಿಗೆಯ ಮೇಲೆ ಮಂಡಿಸಿದಳು !

ಶ್ರೀ ವಿಷ್ಣುಬ್ರಹ್ಮರು:—(ಗಯಾಸುಸುರನಿದ್ದಲ್ಲಿಗೆ ಬಂದು) ಎಲೈ ರಾಕ್ಷಸೇಶ್ವರಾ, ನಾವಿಬ್ಬರೂ ನಿನ್ನ ತಪಶ್ಚರ್ಯಕ್ಕೆ ಮೆಚ್ಚಿದ್ದೇವೆ. ನಿನಗೇನುಬೇಕು ? ಹೇಳು. ಗಯಾಸುರ:—(ಸಾಷ್ಟಾಂಗ ಪ್ರಣಿಪಾತಮಾಡಿ ಕೈಜೋಡಿಸಿಕೊಂಡು ನಿಂತು) ಎಲೈ ಪೂಜ್ಯರೇ, ನನ್ನ ಶರೀರವು ಅತ್ಯಂತ ಪವಿತ್ರವಾದ ವಸ್ತುವಿಗಿಂತಲೂ ಪವಿತ್ರತರವಾಗಿರಬೇಕೆಂದು ನನಗೆ ಆಸೆ. ದಯಮಾಡಿ ನನಗೆ ಈ ವರವನ್ನು ಕೊಡಬೇಕು. ಶ್ರೀವಿಷ್ಣುಬ್ರಹ್ಮರು:—ತಥಾಸ್ತು. ತಥಾಸ್ತು.

ಶ್ರೀವಿಷ್ಣು:—ಎಲೈ ಅಸುರಾಧೀಶಾ, ಗಯಾಸುರಾ, ಈಗ ನಿನ್ನ ಶರೀರದಷ್ಟು ಪವಿತ್ರವಾದ ಸ್ಥಾನವು ಇನ್ನಾವುದೂ ಇಲ್ಲ. ನಾವು ಯಜ್ಞಮಾಡಬೇಕೆಂದು ಬಯಸುತ್ತೇವೆ. ಅದಕ್ಕೆ ನಿನ್ನ ಶರೀರದಷ್ಟು ಯೋಗ್ಯವಾದ ಸ್ಥಾನವು ಮತ್ತಾವದೂ ಸಿಗುವಂತಿಲ್ಲ. ಆದದರಿಂದ ಉದಾರನೂ, ಸುಶೀಲನೂ ಆದ ನೀನು ನಮ್ಮ ಈ ಯಾಚನೆಯನ್ನು ಸಫಲ ಮಾಡುವೆಯಾ ? ಗಯಾಸುರ:—ಎಲೈ ಮಹಾವಿಷ್ಣುವೇ, ನೀವೆಲ್ಲರೂ ಲೋಕರಕ್ಷಣಾರ್ಥವಾಗಿ ಯಜ್ಞಮಾಡುವವರು.

ಮೇಲಾಗಿ ನಿಮ್ಮಂತಹರು ಬೇಡಿದ ಮೇಲೆ ಇಲ್ಲೆನ್ನಬಹುದೇ? ನಿಮ್ಮ ಇಚ್ಛೆಯನ್ನು ಈಗಿಂದೀಗಲೆ ಪೂರ್ಣಮಾಡಿಕೊಳ್ಳಬಹುದು.

ಹೀಗೆಂದು ಅಸುರನು ಅಡ್ಡಮಲಗಿದನು. ಅದರಿಂದ ನೆಲವು ಅದಿರಿತು. ಶೇಷನ ತಲೆಯು ಸ್ವಲ್ಪ ಒಳೆಯಿತು. ಆಗ ಗಯಾಸುರನು ದಿಂಡೀರವನದಲ್ಲಿ ನಿಂತಿದ್ದನು. ಅಡ್ಡಬಿದ್ದಕೂಡಲೆ ಅವನ ತಲೆಯು ವಾರಾಣಾಸಿಯಿಂದಾಚೆಗೆ ಹೋಯಿತು ! ಅವನ ಕಾಲುಗಳು ಗೋಮತೀತೀರದ ಆಚೆಯ ಪ್ರದೇಶವನ್ನು ಮುಟ್ಟಿದವು ! ಅವನ ಕಟಿಪ್ರದೇಶವು ದಿಂಡೀರವನವನ್ನೆಲ್ಲ ತುಂಬಿತು !

ಬ್ರಹ್ಮದೇವನು ಅವನ ತಲೆಯಮೇಲೆ ಯಾಗವನ್ನು ಮಾಡಿದನು. ಒಂದು ವರ್ಷದಲ್ಲಿ ಯಜ್ಞವು ಮುಗಿಯಿತು. ದೇವಬ್ರಾಹ್ಮಣರು ಸಂತುಷ್ಟರಾದರು ! ಭೂಲೋಕವೆಲ್ಲ ಆನಂದದ ಸಾಗರದಲ್ಲಿ ಓಲಾಡಿತು. ಬ್ರಾಹ್ಮಣರೆಲ್ಲರು ಜಳಕ ಮಾಡಿ ಯಜ್ಞಕ್ಕೆ ಪ್ರದಕ್ಷಿಣೆಯನ್ನು ಹಾಕಿದರು. ಆಗ ಗಯಾಸುರನು ತನ್ನ ದೇಹವನ್ನು ಸ್ವಲ್ಪ ಅಲ್ಲಾಡಿಸಿದನು. ಕೂಡಲೆ ಎಲ್ಲರೂ ಬೆದರಿದರು! ಇನ್ನು ಈ ರಾಕ್ಷಸನು ಮೇಲಕ್ಕೆದ್ದರೆ, ಮತ್ತೆ ಏನನ್ನು ಮಾಡುವನೋ ಎಂದು ಅತ್ಯಂತ ವಾಗಿ ಭಯಗ್ರಸ್ತರಾದರು. ಗಯಾಸುರನು ಮತ್ತೆ ಮೆಲ್ಲನೆ ಮಗ್ಗಲಾಗತೊಡ ಗಿದನು. ಎಲ್ಲರ ಭೀತಿಗೆ ಮಿತಿಯಿಲ್ಲದಾಯಿತು! ಎಲ್ಲರ ಕೈಕಾಲುಗಳೇ ಹೋದವು. ಎಲ್ಲರೂ ಎದೆಯನ್ನು ಕಳೆದುಕೊಂಡರು! ಆ ಮೇಲೆ ಎಲ್ಲರೂ ಒಟ್ಟಾಗಿ ದೈನ್ಯ ದಿಂದ ಮತ್ತೆ ಶ್ರೀವಿಷ್ಣುವನ್ನು ಸಂಪ್ರಾರ್ಥಿಸಿದರು.

ಶ್ರೀವಿಷ್ಣುವು ಗಯಾಸುರನ ದೇಹವನ್ನೆಲ್ಲ ವ್ಯಾಪಿಸಿಬಿಡುವಂತೆ ಎಲ್ಲ ಪರ್ವತಗಳಿಗೆ ಅಪ್ಪಣೆಯನ್ನಿತ್ತನು. ಆಗ ವಿಂಧ್ಯಾಚಲವು ಅವನ ಬೆನ್ನಮೇಲೆ ಕುಳಿತಿತು! ತ್ರ್ಯಂಬಕಗಿರಿಯು ಅವನ ಎಡಗೈಯನ್ನ ಹಿಡಿಯಿತು! ಶೈಲ್ಯಶೇಷಾ ದ್ರಿಯು ಅವನ ಬಲಗೈಯಮೇಲೆ ಭಾರಹಾಕಿತು! ಗೋಮಂತಪರ್ವತವು ಅವನ ಕಾಲುಗಳನ್ನು ಬಿಗಿದು ಹಿಡಿಯಿತು! ಶ್ರೀವಿಷ್ಣುವೂ ಎಲ್ಲ ದೇವತೆಗಳೂ ಅವನ ಕಟಿಪ್ರದೇಶದಮೇಲೆ ನಿಂತುಕೊಂಡರು. ಇಷ್ಟಾದರೂ ಗಯಾಸುರನು ತನ್ನ ತಲೆಯನ್ನು ಅಲ್ಲಾಡಿಸಿದನು ! ಆಗ ಯಮನು ಯಮಪುರಿಯ ಭಾರವಾದ ಶಿಲೆ ಯನ್ನು ತಂದು ತಲೆಯಮೇಲೆ ಇಟ್ಟನು. ಆದರೂ ಗಯಾಸುರನು ಮತ್ತೆ ತನ್ನ ತಲೆಯನ್ನು ಕೊಡಹಿದನು. ! ಆ ಮೇಲೆ ಶ್ರೀವೈಕುಂಠನಾಥನು ಸ್ವತಃ ತನ್ನ

ಕಾಲನ್ನು ಅವನ ತಲೆಯಮೇಲಿಟ್ಟು ಎಲ್ಲ ಬ್ರಹ್ಮಾಂಡದ ಭಾರವನ್ನು ಹೇರಿದನು! *

ಗಯಾಸುರ:— ಎಲೈ, ನಿಮಗೆ ದೇವತೆಗಳೆಂದು ಹೆಸರು. ಆದರೆ ಈ ತರದ ಮೋಸಗಾರಿಕೆಯು ನಿಮಗೆ ಸಲ್ಲುವದೇ? ಯಜ್ಞಕ್ಕೆ ಅನುವು ಬೇಕೆಂದು ಬಿಕ್ಕೆಬೇಡಿ ಹೀಗೆ ಠಕ್ಕಿಸುವದು ಸರಿಯೇ? ಮೂರು ಲೋಕಗಳನ್ನೂ ತೆಕ್ಕೆ ಮುಕ್ಕೆ ಹಾಯ್ದು ಹಿಚುಕಿ ಹಿಂಡಿಬಿಡುವಷ್ಟು ಕಸುವು ನನ್ನದು ! ಆದರೇನು ಮಾಡಲಿ? ಸಾಕ್ಷಾದ್ವಿಷ್ಣುವೇ ಈ ತರದ ನಿಂದ್ಯವಾದ ಕಪಟವನ್ನು ಕೈಕೊಂಡನು! ಉಪಾಯವಿಲ್ಲ! ಇದು ನಿಮ್ಮೆಲ್ಲರಿಗೆ ತರವೇ ? ನೀವೇ ನೋಡಿರಿ.

ಶ್ರೀವಿಷ್ಣು:—ಗಯಾಸುರಾ, ಯಾರು ಎಂತು ಇರುತ್ತಾರೋ, ಅವರೊಡನೆ ಅಂತೆಯೇ ನಡೆಯಬೇಕು. ಮೂರು ಲೋಕಗಳನ್ನೆಲ್ಲ ಗೆದ್ದು ಅಲ್ಲಿರುವ ಪ್ರಾಣಿಗಳನ್ನು ಕಾಡಬೇಕೆಂದೇ ನೀನು ತಪವನ್ನು ಮಾಡಿದೆ. ವರಗಳನ್ನು ಪಡೆದೆ. ನೀನು ನಮ್ಮನ್ನು ಮೋಸಗೊಳಿಸಲಿಲ್ಲವೇ? ಅದರ ಫಲವನ್ನೀಗ ಉಣ್ಣುವೆ. ನಾವು ನಿನ್ನ ತಪಕ್ಕೆ ತಕ್ಕ ವರವನ್ನೂ ಕೊಡಬೇಕು. ಕರ್ಮಕ್ಕೆ ತಕ್ಕ ಫಲವನ್ನೂ ಉಂಟುಮಾಡಬೇಕು. ಅಪರಾಧಕ್ಕೆ ತಕ್ಕ ಶಿಕ್ಷೆಯನ್ನೂ ವಿಧಿಸಬೇಕು. ನಮ್ಮಿಂದ ಪಡೆದ ವರಗಳ ದುರುಪಯೋಗ ಮಾಡಿಕೊಂಡು ನೀನು ಮೂಲೋಕಗಳನ್ನೂ ಪೀಡಿಸಿದೆ. ನಾವು ಲೋಕರಕ್ಷಣವನ್ನೂ ಮಾಡಬೇಕು; ಕೊಟ್ಟ ಮಾತನ್ನೂ ಪಾಲಿಸಬೇಕು. ಅಂತೇ ಕರ್ಮಕ್ಕೆ ತಕ್ಕ ಫಲವನ್ನು ಅವರವರಿಗೆ ಕೊಡುವದಕ್ಕಾಗಿ ಬೇರೆ ಬೇರೆ ಯುಕ್ತಿಗಳನ್ನು ಹೂಡಬೇಕಾಗುತ್ತದೆ. ನಿನ್ನಂತಹ ದುಷ್ಟರ ಬಾಧೆಯು ಲೋಕಕ್ಕಾಗಬಾರದೆಂದೂ, ಅಂತಹ ಪ್ರಸಂಗಬಂದರೆ ಮುಯ್ಯಕ್ಕೆ ಮುಯ್ಯದ ಈ ನೀತಿಯನ್ನು ಜನರು ಅನುಸರಿಸಬೇಕೆಂದೂ ನಾನಿದನ್ನು ಬೇಕೆಂತಲೇ ಆಚರಿಸಿ ತೋರಿಸಿದ್ದೇನೆ.

---

* ಗಯೆಯಲ್ಲಿರುವ ವಿಷ್ಣುಪಾದಕ್ಕೆ ಹೋಗಿ ಪಿತೃತರ್ಪಣವನ್ನು ಮಾಡುವ ಪದ್ಧತಿಯಿದೆ.



# ಶರ್ಮಿಷ್ಠೆಯೂ ದೇವಯಾನಿಯೂ

ಶರ್ಮಿಷ್ಠೆಯು ರಾಕ್ಷಸರಾಜನಾದ ವೃಷಪರ್ವನ ಮಗಳು. ರಾಕ್ಷಸಗುರುವಾದ ಶುಕ್ರಾಚಾರ್ಯನಿಗೆ ದೇವಯಾನಿಯು ಒಬ್ಬಳೇ ಒಬ್ಬ ಮಗಳು. ಇವರಿಬ್ಬರೂ ಸಲಿಗೆಯ ಗೆಳತಿಯರು. ಆಡುತ್ತ ನೋಡುತ್ತ ನಗುತ್ತ ಕೆಲೆಯುತ್ತ, ಕೂಡಿಯೇ ಬೆಳೆವವರು. ಬೇಸಿಗೆಯಲ್ಲಿ ಒಂದು ದಿನ ನೀರಾಟವಾಡುವದಕ್ಕೆಂದು ಇಬ್ಬರೂ ಹೊರಟರು. ಹೊಳೆಯ ದಂಡೆಗೆ ಬಂದು, ಹೆಚ್ಚಿನ ಬಟ್ಟೆಗಳನ್ನೆಲ್ಲ ಕಳೆದಿಟ್ಟು ನೀರಲ್ಲಿ ದುಮುಕಿದರು. ಆಟದ ಹುರುಪಿನಲ್ಲಿಯೂ ಹಿಗ್ಗಿನಲ್ಲಿಯೂ ಇಬ್ಬರೂ ಮೈಮರೆತರು. ದಂಡೆಯಮೇಲಿದ್ದ ಬಟ್ಟೆಗಳು ಗಾಳಿಯ ಬೀಸಾಟಕ್ಕೆ ಚಲ್ಲಾಪಿಲ್ಲಿಯಾಗಿ ಹಾರಿ ಒಂದರೊಳಗೊಂದು ತೊಡಕಿದವು. ಉದಯದ್ಯೌವನೆಯರಾದ ಈ ಇಬ್ಬರು ಕುವರಿಯರ ಬೆಡಗಿಗೆ ಬೆಪ್ಪಾಗಿ ವಾಯುವು ಹುಚ್ಚನಾದನೋ ಎಂಬಂತೆ ತೋರುತ್ತಿತ್ತು! ಇಬ್ಬರಿಗೂ ಜಲಕ್ರೀಡೆಯು ಸಾಕಾಯಿತು. ಮೈ ನಡುಗಹತ್ತಿತು. ಲಗುಬಗೆಯಿಂದ ನೀರ ಹೊರಗೆ ಬಂದರು. ಮಾತಾಡುವದಕ್ಕೆ ಬಾಯಿ ತೊಡಲುತ್ತಿತ್ತು. ಅಷ್ಟು ಕಟಕಟ ನಡುಗುತ್ತಿದ್ದರು. ಸಡಗರದಿಂದ ಓಡೋಡಿ ಬಟ್ಟೆಗಳನ್ನು ಆಯ್ದು ಉಟ್ಟುಕೊಂಡರು. ಆದರೆ ಗಡಬಿಡಿಯಲ್ಲಿ ಬಟ್ಟೆಗಳು ಬದಲಾದವು. ದೇವಯಾನಿಯ ಬಟ್ಟೆಯನ್ನು ಶರ್ಮಿಷ್ಠೆಯು ಉಟ್ಟಳು. ಇದು ದೇವಯಾನಿಗೆ ಸರಿದೋರಲಿಲ್ಲ. ಒಬ್ಬರುಟ್ಟ ತೊಟ್ಟ ಬಟ್ಟೆಯನ್ನು ಇನ್ನೊಬ್ಬರು ಉಡುತೊಡುವದು ಒಳ್ಳೆಯದಲ್ಲವೆಂದು ಅವಳ ತಿಳಿವಳಿಕೆ. ವ್ಯವಹಾರದೊಳಗಿನ ರೂಢಿಯೂದರೂ ಹಾಗೆಯೇ. ಇರಲಿ. ಇದರ ಕಾರಣವನ್ನು ಹೇಳುತ್ತ ಈಗೇಕೆ ಕುಳಿತುಕೊಳ್ಳಬೇಕು? ಮುಖ್ಯವಿಷಯವನ್ನೇ ಗಮನಿಸುವ.

**ದೇವಯಾನಿ**:—(ಶರ್ಮಿಷ್ಠೆಯ ಬಳಿಯಲ್ಲಿ ಬಂದು) ಗೆಳತೀ, ಇದೇನೇ? ನನ್ನ ಕಿರುಗೆಯನ್ನೇ ಉಟ್ಟೆಯಲ್ಲ ! ಇಷ್ಟೂ ತಿಳಿಯಬಾರದೇನೇ ? ಏನು ಬೇಕೆಂತಲೇ ಹೀಗೆ ಮಾಡಿದೆಯೋ ? ನಿನ್ನ ಈ ನಡತೆಯು ನನಗೆ ಎಳ್ಳಷ್ಟೂ ಸೇರುವದಿಲ್ಲ ಬಿಡು ! ಹೀಗೆ ಹಾದಿಯನ್ನು ಬಿಟ್ಟು ನಡೆಯುವ ನಿನಗೆ ಎಂದೂ ಒಳಿತಾಗಲಾರದು !

**ಶರ್ಮಿಷ್ಠೆ**:—ಇದರಲ್ಲೇಂತಹ ಹಾದಿಯೇ ಸಟವಿ? ನಿನ್ನದೇನು ಅಂತಹ ದೊಡ್ಡ ಬೆಲೆಯ ಸೀರೆ? ಅದು ನಿನಗೆ ದೊರೆತದ್ದಾದರೂ ಹೇಗೆ ? ನಮ್ಮಪ್ಪನು ನಿಮ್ಮಪ್ಪನಿಗೆ ಕೊಟ್ಟ ದುಡ್ಡಿನಿಂದಲ್ಲವೇ? ನಾನು ಉಟ್ಟದ್ದರಿಂದ ಅದಕ್ಕೆ ಹೆಚ್ಚು

ಶೋಭೆಬಂತೆಂದು ತಿಳಿ. ಹೋಗು; ನಿನಗೆ ಬೇಕಾದರೆ ಮತ್ತೊಂದನ್ನುಸುತ್ತಿಕೋ. ಏಕೆ ಪಟಪಟ ಹಚ್ಚುತ್ತೀ ?

**ದೇವಯಾನಿ:—** ಶರ್ಮಿಷ್ಠೇ, ಹೆಚ್ಚಿಗೆ ಮಾತಾಡಬೇಡ. ನಾಲಿಗೆಯನ್ನು ಬಿಗಿಹಿಡಿ. ನಮ್ಮಪ್ಪನ ಹೆಸರನ್ನು ತೆಗೆಯಬೇಡ. ತಿರುಗಿ ಕೇಳಿದರೆ, ನೀನು ನನಗೆ ಶಿಷ್ಯಳಾಗಬೇಕು. ಹೀಗಿದ್ದು ನಿನ್ನ ಉದ್ಧಟತನವೆಷ್ಟು?

"ಮಾತಿಗೆ ಮಾತು ಮಥಿಸಲ್ಕೆ ವಿಧಿ ಬಂದು ಆತುಕೊಂಡಿಹುದು." ಎಂಬ ಸರ್ವಜ್ಞೋಕ್ತಿಯು ಇಲ್ಲಿ ನೆನಪಿಗೆ ಬರುತ್ತದೆ. ಕಾರಣವು ಕ್ಷುಲ್ಲಕವಿದ್ದರೂ ಪರಿಣಾಮವು ಭಯಂಕರವಾಗುವದುಂಟು! ದೇವಯಾನಿಯು ಬ್ರಾಹ್ಮಣ ಕುಮಾರಿಯು ಆಚಾರವ್ಯವಹಾರದೊಳಗಿನ ಮರ್ಯಾದಾತಿಕ್ರಮಣವನ್ನು ಸಹಿಸದಷ್ಟು ತೀಕ್ಷ್ಣವಾದ ಸ್ವಾಭಿಮಾನವವಳದು! ಶರ್ಮಿಷ್ಠೆಯಂತೂ ಹೇಳಿ ಕೇಳಿ ಅರಸನ ಮಗಳು. ಎಷ್ಟು ಗೆಳೆತನವಿದ್ದರೇನು? ಒಡೆಯತನದ ಒಗರು ಎಲ್ಲಿ ಹೋಗಬೇಕು? ಶರ್ಮಿಷ್ಠೆಯು ಅವಡುಗಚ್ಚುತ್ತ ಸಿಟ್ಟಿನಿಂದ ಮಾತನಾಡಿದಳು.

**ಶರ್ಮಿಷ್ಠೆ:—**ಎಲೇ, ನಿನ್ನ ಬಡಿವಾರವನ್ನು ಬಿಡು. ನಮ್ಮಪ್ಪನು ಮಲಗಿರಲಿ, ಕುಳಿತಿರಲಿ; ನಿಮ್ಮಪ್ಪನು ಬೆಕ್ಕಿನಂತೆ ಬಂದು ನಮ್ಮಪ್ಪನ ಮೋರೆಯನ್ನು ನೋಡುತ್ತ ಕೆಳಗೆ ಕುಳಿತು, ದೇವರಂತೆ ನಮ್ಮಪ್ಪನನ್ನು ಬೇಡಿಕೊಳ್ಳುತ್ತಾನೆ. ಇಂತಹ ತಿರುಕನ ಮಗಳು ನೀನು. ನಾನೇನು ನಿನ್ನಂತೆ ಹರಕೆಯಲ್ಲ ಕಂಡೆಯಾ? ಸಿಟ್ಟಿಂದು ಮಾತಾಡದೆ ಸುಮ್ಮನಿರು. ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. " अनायुधा सायुधाये: किं त्वं कुप्यसि भिक्षुकि ।" ಶಸ್ತ್ರರಹಿತೆಯಾದ ನೀನು ನನ್ನಮೇಲೆ ಸಿಟ್ಟಿಗೆದ್ದರೆ ಆಗುವದೇನು ?

ಬ್ರಾಹ್ಮಣನ ಮಗಳಾದುದರಿಂದ ದೇವಯಾನಿಗೆ ಅನಾಯುಧೆಯೆಂದು ಶರ್ಮಿಷ್ಠೆಯು ಚುಚ್ಚಿ ಮಾತನಾಡಿದಳು. ದೇವಯಾನಿಗೂ ಗೂಢವಿತ್ತು. ಇದರ ಇಂಗಿತವನ್ನು ಅರಿಯಬೇಕೆಂದು ನಿರ್ಧರಿಸಿದಳು. ಅವಿಮೃಶ್ಯಕಾರಿತ್ವವು ಅನರ್ಥಪರಂಪರೆಗೆ ಮೂಲವೆಂದು, ಕೋಪಾಟೋಪವನ್ನು ಸಂಯಮನ ಮಾಡಿದಳು. ನೆಟ್ಟನೆ ತಂದೆಯ ಬಳಿಗೆ ಬಂದಳು. ದೇವಯಾನಿಯ ದುರುಕ್ತಿಯು ಅವಳನ್ನು ಒಂದೇ ಸವನೆ ಬಾಧಿಸುತ್ತಿತ್ತು. ನಡುಗುವ ದನಿಯಿಂದಲೇ ನಡೆದ ಸಂಗತಿಗಳನ್ನೆಲ್ಲ ತಂದೆಗೆ ನಿವೇದಿಸಿ, ತನ್ನ ಸಂಶಯವನ್ನು ದೂರಮಾಡಬೇಕೆಂದಳು.

**ಶುಕ್ರಾಚಾರ್ಯ:—** ಮಗಳೇ, ಶರ್ಮಿಷ್ಠೆಯ ಮಾತಿನಲ್ಲೇನೂ ಹುರುಳಿಲ್ಲ. ನೀನು ಕುಲೀನೆ. ಅವಳಂದಂತೆ ನಾನೇನೂ ಹೀನದೀನನಲ್ಲ. ಮನಸ್ಸಿನಲ್ಲಿ ಎಳ್ಳಷ್ಟೂ ಕುಂದಬೇಡ, ಕಂದಬೇಡ ಕಂಡೆಯಾ ಮಗೂ? (ದೇವಯಾನಿಯ ಬೆನ್ನಮೇಲೆ ಕೈಯಾಡಿಸುತ್ತ) ಹಾಗಾದರೆ, ಇದನ್ನೆಲ್ಲ ಯಾಕೆ ತಾಳಿಕೊಳ್ಳುವಿರೆಂದು ಕೇಳುತ್ತೀಯೋ ? ಹೇಳುತ್ತೇನೆ ಕೇಳು. "**यः परेषां नरो नित्यमतिवादांस्तितिक्षति । देवयानि विजानीहि तेन सर्वमिदं जितम् ॥**" ಎರಡನೆಯವರ ಬಿರುನುಡಿಗಳನ್ನು ಯಾರು ತಾಳಿಕೊಳ್ಳುತ್ತಾರೋ, ಅವರು ಈ ಜಗತ್ತೆಲ್ಲವನ್ನೂ ಗೆಲ್ಲಬಲ್ಲರು! ಸಿಟ್ಟಿಗೇಳಲು ಯೋಗ್ಯವಾದ ಕಾರಣಗಳಿದ್ದರೂ ಯಾವನು ಸಿಟ್ಟಿಗೇಳುವದಿಲ್ಲವೋ, ಅವನೇ ನಿಜವಾದ ಮನುಷ್ಯನು! ಹಗೆತನವನ್ನು ಬೆಳೆಸುವ ಹುಡುಗಹುಡುಗೆಯರು ತಿಳಿಗೇಡಿಗಳು. "**ये कुमाराः कुमार्यश्च वैरं कुर्वन्त्यचेतसः । नैतत्प्राज्ञस्तु कुर्वीत विदुस्ते न बलाबलम् ॥**" ಅವರಿಗೆ ವ್ಯಕ್ತಿಯ ಸಾಮರ್ಥ್ಯದ ಜ್ಞಾನವೇ ಇರುವದಿಲ್ಲ. ಆದರೆ ಬಲ್ಲವರು ಹೀಗೆಂದಿಗೂ ಮಾಡಬಾರದು. ತಿಳಿಯಿತೇ ? ದುಡ್ಡೇ ದೊಡ್ಡದಲ್ಲ! ಅಧಿಕಾರವೇ ಅಧಿಕವಲ್ಲ! ಸದಾಚಾರವೇ ಶ್ರೇಷ್ಠವು! ತಾಳ್ಮೆಯೇ ಸಾಧುತ್ವವು!

ದೇವಯಾನಿಯೇನು ಎಡಡ ಹುಡುಗೆಯೇ ? ಕಲಿತವಳು. ಕಲಿತವಳೆಂದರೆ, ವೇಷಭೂಷಾದಿಗಳಿಂದ ಮೆರೆಯುತ್ತ ಒನಪಿನಿಂದ ಓಡಾಡುವ ಕೇವಲ ಬಾಹ್ಯದಂಭದವಳೇ ? ಗುರುಮುಖದಿಂದ ಅಧ್ಯಯನಮಾಡಿ ತಿರುಳನ್ನು ತಿಳಿದ ಆಚಾರಶೀಲೆ. ಪೂರ್ವಾಪರಗಳನ್ನು ಪರ್ಯಾಲೋಚಿಸಿ ಕರ್ತವ್ಯವನ್ನು ನಿಶ್ಚಯಿಸುವ ಧೀಮತಿ. ಆದುದರಿಂದಲೇ ಆಚಾರ್ಯರ ಪ್ರವಚನದಿಂದ ಅವಳ ಮನಸ್ಸು ತೃಪ್ತವಾಗಲಿಲ್ಲ.

**ದೇವಯಾನಿ:—** ತಂದೆಯೇ ಕ್ಷಮಿಸಬೇಕು. ಅಹಂಕಾರವೆಂದಾಗಲಿ ಅವಿನಯವೆಂದಾಗಲಿ ತಿಳಿಯಬಾರದು. ತಿಳಿದದ್ದನ್ನು ಹೇಳುತ್ತೇನೆ. ನಾನು ಚಿಕ್ಕವಳೇನೋ ಸರಿ. ಆದರೂ ತಮ್ಮ ಆಶೀರ್ವಾದದಿಂದ ಈಗ ನೀವು ಹೇಳಿದ ಮಾತುಗಳೆಲ್ಲವೂ ನನಗೆ ತಿಳಿದಿವೆ. "**वेदाऽहं तात बालाऽपि !**" ಆದರೆ ನನ್ನದೊಂದು ಮಾತನ್ನು ಕೇಳಿರಿ. ಕುಲಶೀಲಗಳ ಬೆಲೆಯನ್ನು ತಿಳಿಯದ ಪಾಪಿಗಳ ಹತ್ತರ ಇರುವದು ಎಂದೂ ಶ್ರೇಯಸ್ಕರವಲ್ಲ. ಇಷ್ಟೇ ಅಲ್ಲ; ಅದರಿಂದ ನಮ್ಮ ಅಸ್ತಿತ್ವಕ್ಕೇ ಬಾಧೆ ಬರುವ ಸಂಭವವಿರುತ್ತದೆ. "**पुंसो ये नाभिनन्दन्ति वृत्ते नाभिजने न च । न तेषु निवसेत्प्राज्ञः श्रेयोऽर्थी पापबुद्धिषु॥**"

ಶುಕ್ರಾಚಾರ್ಯನ ಬಾಯಿ ಕಟ್ಟಾಯಿತು. ಮಗಳ ಯುಕ್ತಿವಾದವನ್ನು ಕೇಳಿ ಆನಂದಿತನಾದನು. ಅವಳನ್ನು ತನ್ನ ಸಂಗಡ ಕರಕೊಂಡು ವೃಷಪರ್ವನ ಹತ್ತರ ಹೋದನು. ಅವಳ ಎದುರಿನಲ್ಲಿಯೇ ಅರಸನ ತಲೆಯೊಳಗಿನ ಹುಚ್ಚನ್ನೆಲ್ಲ ಬಿಡಿಸಿದನು. "ಅಧರ್ಮಾಚರಣದ ಫಲವು ತತ್ಕಾಲಕ್ಕೇ ಒಂದು ವೇಳೆ ಉಂಟಾಗಲಿಕ್ಕಿಲ್ಲ. ಆದರೆ ಒಮ್ಮಿಲ್ಲೊಮ್ಮೆ ಅದನ್ನು ಅನುಭವಿಸಲೇಬೇಕಾಗುವದು. ನೀನಿಲ್ಲದಿದ್ದರೆ ನಿನ್ನ ಮಗನು; ಅವನಿಲ್ಲದಿದ್ದರೆ ಮೊಮ್ಮಗನು. ಹೀಗೆ ನಿನ್ನ ವಂಶವು ಒಮ್ಮಿಲ್ಲೊಮ್ಮೆ ಅದರ ಫಲವನ್ನು ನಿಃಸಂಶಯವಾಗಿ ಭೋಗಿಸಲಿಕ್ಕೆ ಬೇಕು. " **नाधर्मश्चरितो लोके सद्यःफलति गौरिव। शनैरावर्तमानस्तु मूलान्यपि निकृन्तति ॥** " ತಿಳಿದು ನೋಡು. ಎಲ್ಲಿ ಹೋದರೂ ಧರ್ಮಕ್ಕೇ ಜಯವು! ಅಧರ್ಮಿಯಾದ ನಿನ್ನ ರಾಜ್ಯದಲ್ಲಿ ಇನ್ನು ನಾನು ಒಂದ ಗಳಿಗೆಯಾದರೂ ಇರಲಾರೆನು ! **राजा कालस्य कारणम्** ಎಂದಿರುವದರಿಂದ ಇತರರನ್ನು ಕೂಡ ಸರಿಯಾದ ಮಾರ್ಗಕ್ಕೆ ಹಚ್ಚುವದು ನಿನ್ನ ಧರ್ಮವು. ಹೀಗಿದ್ದು ನೀನೇ ಅಧರ್ಮನಿರತನಾದೆ. ಎರಡನೆಯವರನ್ನಲ್ಲ; ಗುರುವಾದ ನನ್ನ ಮಗಳನ್ನೇ ನಿನ್ನ ಮಗಳು ಅವಮಾನಗೊಳಿಸಿದಳು. ಅದಕ್ಕೆ ನೀನು ಸುಮ್ಮನೆ ಇರುವೆ. ಇಂತಹ ಗುರುದ್ರೋಹಿ ಬ್ರಹ್ಮದ್ರೋಹಿಯಾದ ನಿನ್ನ ದರ್ಶನವೇ ನನಗೆ ಬೇಡ. ಪದರಿನಲ್ಲಿ ಗಂಟುಹಾಕಿಕೋ. ಬ್ರಾಹ್ಮಣನನ್ನು ಪರಿಪೀಡಿಸಿದ ನಿನಗೆ ಅಧೋಗತಿಯು ಕಟ್ಟಿಟ್ಟದ್ದೇ." ಇತ್ಯಾದಿಯಾಗಿ ಶುಕ್ರಾಚಾರ್ಯನು ನಿಶ್ಚಯಾತ್ಮಕಸ್ವರದಿಂದ ಮಾತನಾಡಿದನು.

ವೃಷಪರ್ವನು ಬೆರಗಾದನು. ಮುಂದೆ ಏನುಮಾಡಬೇಕೆಂಬುದು ಅವನಿಗೆ ತಿಳಿಯದಾಯಿತು. ಶುಕ್ರಾಚಾರ್ಯನು ಸಂಜೀವಿನೀ ವಿದ್ಯೆಯನ್ನು ಬಲ್ಲವನು. ಅವನಿಂದಲೇ ರಾಕ್ಷಸರ ಚಲ್ಲಾಟವು. ದೇವತೆಗಳಂತೂ ಆಗಾಗ ಅಸುರರ ಮೇಲೆ ಗುರ್ರೆನ್ನುತ್ತಿದ್ದರು. ಇಂತಹ ಸಂದರ್ಭದಲ್ಲಿ ಶುಕ್ರಾಚಾರ್ಯನು ಪರಾಙ್ಮುಖನಾದರೆ ತನ್ನ ಪಾಡೇನೆಂದು ವೃಷಪರ್ವನು ಹಳಹಳಿಸಹತ್ತಿದನು. ಕೊನೆಗೆ ಅತ್ಯಂತದೀನವದನನಾಗಿ ಹೀಗೆ ಹೇಳಿಕೊಂಡನು.

**ವೃಷಪರ್ವ:—** ಗುರುಗಳೇ, ಬಡವನ ತಪ್ಪನ್ನು ಮನ್ನಿಸಬೇಕು. ನಾನೂ ನನ್ನ ರಾಜ್ಯವೂ ಎಲ್ಲವೂ ತಮ್ಮದೇ. " **यत्किंचिदसुरेन्द्राणां विद्यते वसु भार्गव । भुवि हस्तिरथाश्वं वा तस्य त्वं मम चेश्वरः ॥** " ನಿಮ್ಮ

ಹೊರತು ನನಗೆ ಗತಿಯಾರು ? ಕುಂಬಳಕಾಯಿಯೂ ಕುಡುಗೋಲೂ ನಿಮ್ಮ ಕೈಯಲ್ಲೇ ಇದೆ. ಬೇಕಾದರೆ ಅಡ್ಡ ಹೆಚ್ಚಿರಿ; ಉದ್ದ ಹೆಚ್ಚಿರಿ.

**ಶುಕ್ರಾಚಾರ್ಯ:**— ಇರಲಿ; ವೃಷಪರ್ವಾ, ಇದೇ ಮಾತು ನಿಜವಾದರೆ, ಇಕೋ, ಈ ದೇವಯಾನಿಯನ್ನು ಸಂತಯಿಸು.

ವೃಷಪರ್ವನು ಮಾಡುತ್ತಾನೇನು ? ಎರಡನೆಯ ಮಾರ್ಗವೇ ಇದ್ದಿಲ್ಲ ! ಸ್ವಾಭಿಮಾನಿನಿಯಾದ ದೇವಯಾನಿಯು ಅಷ್ಟಕ್ಕೇ ಸುಮ್ಮನಾಗುವವಳೇ ? ಅವಳಿಗೆ ವೃಷಪರ್ವನ ಬಾಯಿಂದ ಅಭಿವಚನವೂ, ಮಾತಿಗೆ ತಕ್ಕಂತೆ ಕೃತಿಯೂ ಆಗಲೇ ಬೇಕಾಗಿದ್ದುವು ! ಕೊನೆಗೆ ವೃಷಪರ್ವನು ಹೀಗೆ ಮಾತು ಕೊಟ್ಟನು. "ದೇವಯಾನೀ, ನೀನು ಬೇಕಾದದ್ದನ್ನು ಬೇಡು. ಅದು ಎಷ್ಟೇ ದುರ್ಲಭವಾಗಿದ್ದರೂ ನಿನಗದನ್ನು ತಂದು ಕೊಡುವೆನು. ನನ್ನ ಈ ಮಾತನ್ನು ಎಂದೂ ತಪ್ಪವದಿಲ್ಲ."

**ದೇವಯಾನಿ:**— ಒಂದು ಸಾವಿರ ದಾಸಿಯರೊಡನೆ ಬಂದು, ಶರ್ಮಿಷ್ಠೆಯು ನನ್ನ ತೊತ್ತಾಗಿರಬೇಕು.

ಇಲ್ಲವೆನ್ನಲು ವೃಷಪರ್ವನಿಗೆ ಮಾರ್ಗವೆಲ್ಲಿತ್ತು ? ಕೂಡಲೆ ಒಬ್ಬ ದಾಸಿಯನ್ನು ಕಳುಹಿ, ಶರ್ಮಿಷ್ಠೆಯನ್ನು ಕರೆಯಿಸಿದನು. ದಾಸಿಯು ಬಡಬಡ ಓಡಿಹೋದಳು. ಬೆದರಿದ ಮೋರೆ. ತೇಗುತ್ತಿದ್ದಳು. ಅವನ್ನು ನೋಡಿ ಶರ್ಮಿಷ್ಠೆಗೆ ಏನೂ ತಿಳಿಯದಾಯಿತು. ಇನ್ನು ಶರ್ಮಿಷ್ಠೆಯು ಪ್ರಶ್ನಮಾಡತಕ್ಕವಳು. ಅಷ್ಟರಲ್ಲಿಯೇ ದಾಸಿಯು ಮೋರೆಯ ಮೇಲಿನ ಬೆವರ ಹನಿಗಳನ್ನು ಒರೆಸಿಕೊಳ್ಳುತ್ತಲೂ, ಹಣೆಯ ಮೇಲೆಯೂ ಕಿವಿಯ ಮೇಲೆಯೂ ಚದರಿಬಿದ್ದ ಕುಂತಲಗಳನ್ನು ಸರಿಪಡಿಸಿಕೊಳ್ಳುತ್ತಲೂ ಮಾತನಾಡಿದಳು:

**ದಾಸಿ:**— ಒಡತಿಯೇ, ಪ್ರಸಂಗವು ಬಿಕ್ಕಟ್ಟಿನದಾಗಿದೆ. ಬೇಗನೆ ಸಿದ್ಧಳಾಗು. ಯಜಮಾನರು ಬರಹೇಳಿದ್ದಾರೆ. ಪಾಲಿಗೆ ಬಂದದ್ದು ಪಂಚಾಮೃತವು. ಬಂದದ್ದಕ್ಕೆ ಎದುರಾಗು; ಒಲ್ಲೆನೆನಬೇಡ. ಅಂದರೇ ಎಲ್ಲರ ಹಿತವಾಗುವದು. ನನಗೂ ಬಹಳ ಕೆಡಕೆನಿಸುತ್ತದೆ. ಆದರೆ ಮಾಡಬೇಕೇನು ? ಈಗಿನ ಪ್ರಸಂಗವೇ ಹಾಗಿದೆ.

**ಶರ್ಮಿಷ್ಠೆ :**— (ದಾಸಿಯ ಹೆಗಲಮೇಲೆ ಕೈಹಾಕಿ ಅವಳ ಮೋರೆಯನ್ನು ದಿಟ್ಟಿಸುತ್ತ) ಸಖೀ, ಚದುರೇ, ನೀನು ಹೇಳುವೆಯಾದರೂ ಏನು! ತಿಳಿ

ಯುವಂತೆ ಹೇಳಬಾರದೇ? ಇಷ್ಟು ಬೆದರಿರುವೆ ಏಕೆ? ಹೇಳು, ಸ್ಪಷ್ಟವಾಗಿ ಹೇಳು. ಎಲ್ಲರ ಹಿತವೂ ಸಾಧಿಸುವಂತಿದ್ದರೆ, ಏನಿದ್ದರೂ ನಾನದನ್ನು ಮಾಡುವೆನು. ತೀರಿತೇ? ಹೇಳಿನ್ನು ಸ್ಪಷ್ಟವಾಗಿ.

**ದಾಸಿ:**— ಒಡತಿಯೇ, ಶುಕ್ರಾಚಾರ್ಯರ ಮಗಳಾದ ದೇವಯಾನಿಯು ಹಟವಿದು. ನೀರಾಟವಾಡಿದ ಮೇಲೆ ನೀವೂ ಅವರೂ ಹಾಕಾಡಲಿಲ್ಲೇ? ಅದನ್ನೇ ಅವಳು ಮನಸ್ಸಿನಲ್ಲಿ ಹಿಡಿದಿದ್ದಾಳೆ. ತನ್ನ ತಂದೆಯ ಮುಂದೆ ಅದನ್ನೆಲ್ಲ ಬಣ್ಣ ಸುರಿಸಿ ಹೇಳಿದ್ದಾಳೆ. ಈಗ ಶುಕ್ರಾಚಾರ್ಯರು ನಮ್ಮ ರಾಜ್ಯವನ್ನೇ ಬಿಟ್ಟು ಹೋಗುವೆವೆಂದು ಹಟತೊಟ್ಟಿದ್ದಾರೆ. ನೋಡಿದಿಯಾ ಅನರ್ಥವನ್ನು ?

**ಶರ್ಮಿಷ್ಠೆ:**— ( ನಡುವೆ ಬಾಯಿಹಾಕಿ ಸ್ವಲ್ಪ ಸಿಟ್ಟಿನ ದನಿಯಿಂದ ) ಇಷ್ಟೆಯೋ ? ಹೋಗಲಿ, ಬಿಡು. ಕೋಳಿ ಕೂಗದಿದ್ದರೆ ಬೆಳಗಾಗುವದಿಲ್ಲವೇ? ಹೋದರೆ ಹೋಗಲಿ. ನಮಗೇನದರಿಂದ ?

**ದಾಸಿ:**— ಹಾಗಲ್ಲವಮ್ಮಾ ! ಶುಕ್ರಾಚಾರ್ಯರು ಸಾಮಾನ್ಯರೇ ? ತೇಜಸ್ವಿಗಳಾದ ಬ್ರಾಹ್ಮಣರು. " **वाचमर्थोऽनुधावति** " ಎಂದು ಹೇಳಿಸಿಕೊಳ್ಳುವ ವರ್ಗದೊಳಗಿನವರು ! ಕ್ರಿಯಾವಂತರು ! ಅವರ ಕ್ರೋಧೆಯು ನಮ್ಮೆಲ್ಲ ರಾಕ್ಷಸಕುಲವನ್ನೇ ನಾಶಮಾಡಬಲ್ಲದು! ಮೇಲಾಗಿ ಅವರಿಗೆ ಸಂಜೀವಿನೀ ವಿದ್ಯೆಯು ಗೊತ್ತಿದೆ! ಅದರಿಂದಲೇ ಅಲ್ಲವೇ ನಾವೆಲ್ಲರೂ ಸುರರ ಬಾಧೆಯಿಲ್ಲದೆ ಸುರಕ್ಷಿತವಾಗಿರುವದು ?

**ಶರ್ಮಿಷ್ಠೆ:**— ಹೀಗೋ ? ಅಹಹಾ ! ನಮ್ಮ ಪರಾವಲಂಬನವೆಷ್ಟು ನೋಡಿದೆಯಾ ?

ಹೀಗೆಂದು ಶರ್ಮಿಷ್ಠೆಯು ಮನದಲ್ಲಿಯೇ ಏನನ್ನೋ ಆಲೋಚಿಸಹತ್ತಿದಳು. ಶರ್ಮಿಷ್ಠೆಯೇನು ಕಡಿಮೆಯವಳಲ್ಲ ! ಕಲಿತವಳು. ತಿಳಿದವಳು. ಸ್ವಾಭಿಮಾನ ಸ್ವಕೀಯಾಭಿಮಾನಗಳ ಮೂರ್ತಿಯಾಗಿದ್ದಳು. ಆದರೂ ಅವಳು ಆಲೋಚಿಸಹತ್ತಿದ್ದನ್ನು ನೋಡಿ ಸಂಶಯದಿಂದ—

**ದಾಸಿ:**— ಒಡತಿಯೇ ಇವಕ್ಕಿಷ್ಟೇಕೆ ಆಲೋಚನೆ? ನಾನು ಪೂರ್ಣ ಹೇಳುವವನ್ನಾದರೂ ಕೇಳು. ದೇವಯಾನಿಗೆ ನೀನು ದಾಸಿಯಾಗಿರಬೇಕಂತೆ. ಒಂದು ಸಾವಿರ ದಾಸಿಯರನ್ನು ಕರೆದುಕೊಂಡು ಅವಳ ಕಡೆಗೆ ನೀನು ಹೋಗಬೇಕು. ಹೀಗೆ ದೇವಯಾನಿಯು ಹಟವನ್ನು ಹಿಡಿದಿದ್ದಾಳೆ. ಅದಕ್ಕೆ ಯಾಜ

ಮಾನರು “ ಹು ಹಾಗೇ ಆಗಲಿ; ನಿನ್ನ ಹೇಳಿಕೆಯಂತೆಯೇ ನಡೆಸುತ್ತೇನೆ ” ಎಂದೇ ಹೇಳಿದ್ದಾರೆ. ಎಂದಮೇಲೆ ಇನ್ನು ಆಲೋಚನೆಗೆ ಅವಕಾಶವೆಲ್ಲಿ ! ಮೇಲಾಗಿ ತಡಮಾಡಕೂಡದೆಂದೂ, ಬೇಗನೇ ಬರಬೇಕೆಂದೂ ಹೇಳಿದ್ದಾರೆ. ಆದ ದರಿಂದ ಹೊರಡು. ಯಜಮಾನರ ಮಾತನ್ನಂತೂ ನಡೆಸಲೇಬೇಕು. ಶುಕ್ರಾ ಚಾರ್ಯರ ಉಪಯೋಗವೆಷ್ಟಿದೆಯೆಂಬುದನ್ನು ನೀನು ತಿಳಿದಿರುವಿ. ನೀನು ಈ ಕಾರ್ಯವನ್ನು ಕೈಕೊಂಡರೆ ಎಲ್ಲ ರಾಕ್ಷಸಕುಲಕ್ಕೇ ಹಿತಮಾಡಿದಂತಾಗುವದು.

**उत्तिष्ठ भद्रे शर्मिष्ठे ज्ञातीनां सुखमावह ॥**

ಶುಕ್ರಾಚಾರ್ಯರ ಮನಸ್ತಾಪದಿಂದ ರಾಜ್ಯಕ್ಕೊದಗುವ ಸಂಕಟವನ್ನು ತಡೆಯುವದು, ತಂದೆಯು ಕೊಟ್ಟ ವಚನವನ್ನು ಮನ್ನಿಸುವದು, ಜ್ಞಾತಿಗಳ ಹಿತವನ್ನು ಸಾಧಿಸುವದು ಈ ಮೂರು ಮಾತುಗಳು ಶರ್ಮಿಷ್ಠೆಯ ಎದೆಯಲ್ಲಿ ಮೂಡಿದವು. ಕೂಡಲೆ ಅವಳು ಪ್ರತಿಯಾಗಿ ಏನನ್ನೂ ಮಾತನಾಡದೆ ತಂದೆಯ ಬಳಿಗೆ ಬಂದು, ಆನಂದದಿಂದ ಅಪ್ಪಣೆಪಡೆದು, ಗೊತ್ತಾದ ಮೇರೆಗೆ ಸಾವಿರ ದಾಸಿಯರೊಡನೆ ಊಳಿಗವನ್ನು ಮಾಡುವದಕ್ಕಾಗಿ ದೇವಯಾನಿಯ ಕಡೆಗೆ ಬಂದಳು.

**ಶರ್ಮಿಷ್ಠೆ**:— ದೇವಯಾನೀ, ಇಕೋ, ನಿನ್ನ ದಾಸಿಯು ಸಿದ್ಧಳಾಗಿ ಸಾನ್ನಿಧ್ಯಕ್ಕೆ ಬಂದಿದ್ದಾಳೆ. ಬೇಕಾದ ಸೇವೆಯನ್ನು ಮಾಡಿಸಿಕೊಳ್ಳಬಹುದು.

**ದೇವಯಾನಿ**:— ಅಲ್ಲೇ ಶರ್ಮಿಷ್ಠೇ, ನೀನು ಕುಬೇರನ ಕನ್ಯೆಯು ! ನಾನು ತಿರುಕರವನ ಮಗಳು ! ಹೀಗಿದ್ದು ನೀನು ನನ್ನ ತೊತ್ತು ಹೇಗಾಗುವೆ?

ಶರ್ಮಿಷ್ಠೆಯ ಮನದಲ್ಲಿ ರಾಷ್ಟ್ರಪ್ರೇಮವು ಉಕ್ಕಿ ಬಂತು.

**ಶರ್ಮಿಷ್ಠೆ**:— ಕೇಳು. ನನ್ನ ಜ್ಞಾತಿಗಳ ಹಿತಕ್ಕಾಗಿ ಬೇಕಾದುದನ್ನು ಮಾಡಲು ನಾನು ಎಂತಹ ಹೆಜ್ಜೆಯ ಮೇಲೆಯೇ ಸಿದ್ಧಳಿದ್ದೇನೆ.

**येन केनचिदार्तानां ज्ञातीनां सुखमावहेत् ।**

ಮೇಲಿನ ಉತ್ತರವನ್ನು ಕೇಳಿ ಸಹೃದಯೆಯಾದ ದೇವಯಾನಿಯ ಹೃದ ಯಸಾಗರದಲ್ಲಿ ಪ್ರೇಮತರಂಗಗಳೆದ್ದವು. ಉಕ್ಕಿ ಹೊರಸೂಸುವ ಪ್ರೇಮದಿಂದ ಅಡರಿಸಿ ಓಡಿ ಬಂದು ಗೆಳತಿಯನ್ನು ಬಿಗಿದಪ್ಪಿಕೊಂಡಳು ! ಇಬ್ಬರೂ ಪುಲಕಿತೆ ಯರಾದರು ! ಸ್ನೇಹರಸದಲ್ಲಿ ಓಲಾಡಿದರು! ಆ ಚಿತ್ರವನ್ನು ಓದುಗರೇ ತಮ್ಮ ಹೃತ್ಪಟಲದಲ್ಲಿ ಬರೆದುಕೊಳ್ಳಲಿ.

* * * *

ವಾಚಕರೇ,

ಬ್ರಹ್ಮತೇಜಸ್ಸಿನ ಕಿರಣವಾದ ದೇವಯಾನಿಯ ಸ್ವಾಭಿಮಾನವನ್ನು ನೋಡಿರಿ; ನೈಷ್ಠಿಕನಾದ ಶುಕ್ರಾಚಾರ್ಯನ ನಿಸ್ಪೃಹತೆಯನ್ನೂ ಯೋಗ್ಯತೆಯನ್ನೂ ನಿರೀಕ್ಷಿಸಿರಿ; ಕ್ಷತ್ರಿಯ ಬೀಜದ ಮರವಾದ ಶರ್ಮಿಷ್ಠೆಯ ಕೃತಿಯನ್ನು ಅವಲೋಕಿಸಿರಿ; ರಕ್ಕಸರ ಅರಸನಾದ ವೃಷಪರ್ವನ ಸ್ವರಾಜ್ಯ ಹಿತದಕ್ಷತೆಯನ್ನು ದೃಷ್ಟಿಸಿರಿ; ಮತ್ತು ಸ್ವಕೀಯರ ಹಿತವನ್ನು ಸಾಧಿಸುವ ದೃಷ್ಟಿಯುಳ್ಳ ದಾಸಿಯ ದೂರದರ್ಶಿತ್ವವನ್ನೂ ಕಂಡುಕೊಳ್ಳಿರಿ.

ಶರ್ಮಿಷ್ಠೆಯು ಸಮಾಜಸುಖವನ್ನು ಸಾಧಿಸುವದಕ್ಕಾಗಿ ಸ್ವಸುಖಕ್ಕೆ ಎರವಾದಳು; ಸ್ವಾಭಿಮಾನವನ್ನು ಬದಿಗೊತ್ತಿ ಸಮಾಜದ ಕಲ್ಯಾಣಕ್ಕಾಗಿ ಅವಮಾನವನ್ನು ಸ್ವಸಂತೋಷದಿಂದಲೇ ಸಹಿಸಿದಳು. ಸಮಾಜಕ್ಕೆ ಒಳಿತನ್ನುಂಟು ಮಾಡುವದಕ್ಕಾಗಿ ವ್ಯಕ್ತಿಮಾಹಾತ್ಮ್ಯಕ್ಕೆ ತಿಲಾಂಜಲಿಯನ್ನು ಕೊಡಬೇಕೆಂಬ ಪಾಠವನ್ನವಳು ಕಲಿತಿದ್ದಳು. ಸಮಾಜಹಿತಕ್ಕೆ ವ್ಯಕ್ತಿಹಿತವು ಪ್ರತಿಬಂಧಕವಾಗ ಬಾರದೆಂಬ ತತ್ವವನ್ನು ಆ ಸಣ್ಣ ಹುಡುಗೆಯರು ಆಕಲನಮಾಡಿಕೊಂಡಿದ್ದರು. ರಾಜಕಾರಣದೊಳಗಿನ ಮುಖ್ಯತತ್ವವನ್ನು ಶರ್ಮಿಷ್ಠೆಯು ತಿಳಿದಂತೆಯೇ, ನೀತಿಶಾಸ್ತ್ರದೊಳಗಿನ ಮುಖ್ಯತತ್ವವನ್ನು ದೇವಯಾನಿಯು ತಿಳಿದಿದ್ದಳು. ಶುಕ್ರಾಚಾರ್ಯರ ಆತ್ಮಶುದ್ಧಿವಾದವನ್ನು ಅವಳು ಚೆನ್ನಾಗಿ ಖಂಡಿಸಿದಳು. ಗುಣಗಳನ್ನು ಪರೀಕ್ಷಿಸಿ ಗ್ರಹಣಮಾಡಿ ಅಭಿನಂದಿಸುವ ಯೋಗ್ಯತೆಯಾಗಲಿ ಮನಸ್ಸಾಗಲಿ ಯಾರದಿರುವದಿಲ್ಲವೋ, ಅವರ ಮೇಲೆ ಗುಣಿಗಳು ಯಾವ ಪರಿಣಾಮವನ್ನು ಮಾಡಬಲ್ಲರು! ಇರಲಿ. ಆಗಿನ ಸಣ್ಣ ಹುಡುಗೆಯರಿಗೆ ತಿಳಿದಂತಹ ಈ ತತ್ವಗಳು ಈಗಿನ ದೊಡ್ಡ ವಿದ್ಯಾವಿಭೂಷಿತರಿಗೂ ತಿಳಿಯಲಾರದಂತಾಗಿವೆ ! ಇದರ ಕಾರಣವೇನಿರಬಹುದು ?





# ವೀರಪತ್ನಿ

## (೧)

ರಾಜಕುಮಾರಿಯಾದ ವೀರಮತಿಯ ಜನ್ಮವು ಟೊಕತೋಡದ ರಾಜನಾದ ನೃಪತಿಸಿಂಹನಲ್ಲಾಯಿತು. ರಾಜನಿಗೆ ವೀರಜನೆಂಬ ಕುಮಾರನೂ ಇದ್ದನು. ರಾಜಕುಮಾರ ಮತ್ತು ರಾಜಕುಮಾರಿಯರು ಬಾಲ್ಯಾವಸ್ಥೆಯಲ್ಲಿ ಶಿಕ್ಷಣಕ್ಕೆ ಯೋಗ್ಯರಾದ ಕೂಡಲೆ, ಅವರನ್ನು ಅರಸನು ಒಬ್ಬ ಕುಶಲನೂ ಯುದ್ಧವಿದ್ಯಾ ವಿಶಾರದನೂ ಆದ ಗುರುವಿನ ಸ್ವಾಧೀನಮಾಡಿದನು. ವೀರಮತಿಯು ತನ್ನ ಅಣ್ಣನ ಜೊತೆಗೆ ಯುದ್ಧಕಲೆಯನ್ನು ಕಲಿತು ಪಾರಂಗತಳಾದಳು. ಸ್ವಲ್ಪ ದಿವಸಗಳಲ್ಲಿಯೇ ಆಕೆಯು ಕುದುರೆಯ ಮೇಲೆ ಕೂಡ್ರುವದರಲ್ಲಿಯೂ, ದಾಂಡಪಟ್ಟೆಯನ್ನು ತಿರುವುವದರಲ್ಲಿಯೂ, ಭಾಲೆಯನ್ನು ಒಗೆಯುವದರಲ್ಲಿಯೂ ಇವೇ ಮೊದಲಾದ ಇತರ ಯುದ್ಧಕಲೆಗಳಲ್ಲಿಯೂ ಬಹಳ ಪ್ರವೀಣಳಾದಳು.

ವೀರಮತಿಯು ರಾಜನೀತಿಯಲ್ಲಿಯೂ ಉತ್ತಮಶಿಕ್ಷಣವನ್ನು ಪಡೆದು ಚೆನ್ನಾಗಿ ನಿಷ್ಣಾತಳಾದಳು. ಒಮ್ಮಿಂದೊಮ್ಮೆ ವೃದ್ಧನೃಪತಿಸಿಂಹನ ಕಣ್ಣುಗಳು ಹೋದದ್ದರಿಂದ ತನ್ನ ರಾಜ್ಯದ ಎಲ್ಲ ಕಾರ್ಯಭಾರವನ್ನು ವೀರಜನ ಸ್ವಾಧೀನ ಮಾಡಿದನು. ವೀರಮತಿಯು ತನ್ನ ಅಣ್ಣನಿಗೆ ರಾಜ್ಯಭಾರದಲ್ಲಿ ತುಂಬಾ ಸಾಹಾಯ್ಯಮಾಡುತ್ತಿದ್ದಳು. ಅಣ್ಣತಂಗಿಯರ ಆಡಳಿತವು ಮೊದಲಿಗಿಂತಲೂ ಒಳ್ಳೆಯ ರೀತಿಯಿಂದ ನಡೆಯುತ್ತಿರಲು, ವೀರಮತಿಯು ಯೌವನಾವಸ್ಥಳಾದಳು. ನೃಪತಿಸಿಂಹನು ಅವಳ ಸಲುವಾಗಿ ಅನುರೂಪವರನ ಶೋಧದ ಚಿಂತೆಯೆಂಬ ಕಡಲಲ್ಲಿ ಬಿದ್ದನು



( ೨ )

ಆ ಕಾಲಕ್ಕೆ ಮಾಳವಾದಲ್ಲಿ ಮಹಾರಾಜ ಉದಯಾದಿತ್ಯನೆಂಬ ಶೂರನು ರಾಜ್ಯವನ್ನಾಳುತ್ತಿದ್ದನು. ಧಾರಾನಗರವು ಅವನ ರಾಜಧಾನಿ. ಅವನಿಗೆ ವಸುಂಧರೆ, ಸುಲೋಚನೆ ಎಂಬ ಇಬ್ಬರು ರಾಣಿಯರಿದ್ದರು. ವಸುಂಧರೆಯಲ್ಲಿ ರಣದೇವ, ಸುಲೋಚನೆಯಲ್ಲಿ ಜಗದೇವ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಜ್ಯೇಷ್ಠಪುತ್ರನಾದದರಿಂದ ರಣದೇವನೇ ಯುವರಾಜನಾಗಿದ್ದನು. ಆದರೆ ಜಗದೇವನಲ್ಲಿದ್ದ ಧೈರ್ಯ, ಶೌರ್ಯ, ವಿದ್ಯೆ, ವಿನಯ ಇತ್ಯಾದಿ ಸದ್ಗುಣಗಳಲ್ಲಿ ಒಂದಾದರೂ ಅವನಲ್ಲಿದ್ದಿಲ್ಲ. ಜಗದೇವನ ಕೀರ್ತಿಯು ನಾಲ್ಕು ಕಡೆಗೂ ಹಬ್ಬಿತ್ತು. ಪ್ರಜೆಗಳ ಕಂಠದಲ್ಲಿ ರತ್ನವಂತೆ ಒಪ್ಪುತ್ತಿದ್ದನು. ಉದಯಾದಿತ್ಯನು ಬಹಳೇ ಪ್ರಸನ್ನಮನದಿಂದ ನೃಪತಿಸಿಂಹನ ಮಗಳಾದ ವೀರಮತಿಯನ್ನು ಜಗದೇವನ ವಧುವನ್ನಾಗಿ ನಿಶ್ಚಯಿಸಿ, ಮದುವೆಮಾಡಿ ಧನ್ಯನಾದನು. ವೀರಮತಿಯು ಜಗದೇವನ ಕೀರ್ತಿಯನ್ನು ಕೇಳಿದ್ದಳು. ಅದರಿಂದ, ಇಂಥ ಗಂಡನ ಸಂಯೋಗವನ್ನು ತಂದುಕೊಟ್ಟದ್ದಕ್ಕಾಗಿ ತನ್ನ ಕುಲಸ್ವಾಮಿಯಾದ ಶ್ರೀ ಭಾರತೇಶನಿಗೆ ಧನ್ಯವಾದವನ್ನಿತ್ತಳು.

ಉದಯಾದಿತ್ಯಮಹಾರಾಜನ ಪ್ರೇಮವು ಜಗದೇವನ ತಾಯಿಯಾದ ಸುಲೋಚನೆಯ ಮೇಲಿದ್ದಿಲ್ಲ. ವಸುಂಧರೆಯು ಸುಲೋಚನೆಯ ಮೇಲೆ ಸಪತ್ನೀ ಮತ್ಸರವನ್ನು ಕಾರುತ್ತಿದ್ದಳು; ಮತ್ತು ಜಗದೇವನನ್ನೂ ದ್ವೇಷಿಸುತ್ತಿದ್ದಳು. ಜಗದೇವಸುಲೋಚನೆಯರ ಸ್ಥಿತಿಯು ಬಹಳೇ ಹೀನತರದ್ದಿತ್ತು. ಜಗದೇವನನ್ನು ನೋಡಿದರೆ, ಇವನು ರಾಜಪುತ್ರನು ಅಹುದೋ ಅಲ್ಲೋ ಎಂಬ ಸಂಶಯ ಬರುವಷ್ಟು ಕಾಡುಸ್ಥಿತಿಯಲ್ಲಿದ್ದನು. ಒಂದು ದಿವಸ ರಾಜನಿಗೆ ಕರುಣೆ ಬಂದು ಜಗದೇವನಿಗೆ ವಸ್ತ್ರ, ಕತ್ತಿ, ಕುದುರೆ ಮೊದಲಾದ ವಸ್ತುಗಳನ್ನು ಕಳಿಸಿಕೊಟ್ಟನು. ಈ ಸಂಗತಿಯು ವಸುಂಧರೆಗೆ ತಿಳಿದ ಕೂಡಲೆ ಆಕೆಯ ಎಲ್ಲ ಅಂಗಗಳು ತಪ್ತವಾದವು. ಕೂಡಲೆ ಜಗದೇವನಿಗೆ ಕೊಟ್ಟ ಎಲ್ಲ ವಸ್ತುಗಳನ್ನು ತಿರುಗಿ ಇಸಕೊಳ್ಳಬೇಕೆಂದು ರಾಜನಿಗೆ ಸ್ಪಷ್ಟವಾಗಿ ಹೇಳಿದಳು. ರಾಜನು ಎಷ್ಟು ತಿಳಿಹೇಳಿದರೂ ಆ ಮಾರಿಯು ತನ್ನ ಹಟವನ್ನು ಬಿಡಲಿಲ್ಲ. ಕಡೆಗೆ ಅವನು ವಸುಂಧರೆಯ ಜಾಲದಲ್ಲಿ ಸಿಕ್ಕು, ಅವಳ ಮಾತಿಗೆ ಒಪ್ಪಿ, ಜಗದೇವನಿಗೆ ಕೊಟ್ಟ ಎಲ್ಲ ವಸ್ತುಗಳನ್ನು ತಿರುಗಿ ತರಲು ಸೇವಕನಿಗೆ ಆಜ್ಞಾಪಿಸಿದನು.

ರಾಜನು ಕೊಟ್ಟ ಎಲ್ಲ ವಸ್ತುಗಳನ್ನು ತೆಗೆದುಕೊಂಡು ಜಗದೇವನು ತಂದೆಯ ಬಳಿಗೆ ಬಂದು ಅವುಗಳನ್ನು ಇಟ್ಟು ನಮಸ್ಕರಿಸಿ —

ಜಗದೇವ:— ಪೂಜ್ಯ ತಂದೆಯವರೇ, ನಿಮ್ಮ ಮಮತೆಯು ಒಂದು ವೇಳೆ ಎನ್ನಮೇಲೆ ಇಲ್ಲದಿದ್ದರೂ ನಿಮ್ಮಿಂದ ನಾನು ಹುಟ್ಟಿದ್ದೇನೆ. ನಾನು ವೀರಕ್ಷತ್ರಿಯ ಪುತ್ರನಿದ್ದೇನೆ. ಇಂಥ ಅಪಮಾನವನ್ನು ಸಹಿಸಿಕೊಂಡು ಈ ರಾಜ್ಯದಲ್ಲಿರುವದು ಲಾಂಛನಾಸ್ಪದವು. ಎಲ್ಲಿಯಾದರೂ ಹೋಗಿ ಹೊಟ್ಟೆಹೊರಕೊಳ್ಳುತ್ತೇನೆ.

ರಾಜನು ಅವನಿಗೆ ಬಹಳೇ ತಿಳಿಹೇಳಿದನು. ಆಸ್ಥಾನದ ಜನರೂ ಅವನನ್ನು ಶಾಂತಪಡಿಸಲು ಪ್ರಯತ್ನಿಸಿದರು. ಆದರೂ ಯಾರ ಮಾತನ್ನೂ ಲೆಕ್ಕಿಸದೆ ಅವನು ಆಗಿಂದಾಗ ತಾಯಿಯ ನಿರೋಪವನ್ನು ತೆಗೆದುಕೊಳ್ಳಲು ಹೊರಟನು.

ಮಗನ ಮುಖದಿಂದ ಅಪ್ರಿಯವಾರ್ತೆಯನ್ನು ಕೇಳಿ ಸುಲೋಚನೆಗೆ ಬಹಳ ದುಃಖವಾಯಿತು. ಆದರೂ ಪುತ್ರನಿಗೆ ಧೈರ್ಯಕೊಟ್ಟು ಹೀಗೆಂದಳು.

ಸುಲೋಚನೆ:— ಪ್ರಿಯಕುವರಾ, ಈ ದುರ್ಭಾಗ್ಯಳ ಹೊಟ್ಟೆಯಲ್ಲಿ ನೀನು ಜನ್ಮವನ್ನು ಹೊಂದಿದ್ದರಿಂದಲೇ ಇಂಥ ಅಪಮಾನದ ಪ್ರಸಂಗವು ಬಂದೊದಗಿತು. ಇಂಥ ಅಪಮಾನವನ್ನು ನನಗೂ ತಡೆಯುವದಾಗುವದಿಲ್ಲ. ನಿನ್ನ ಪ್ರತಿಜ್ಞೆಯನ್ನು ಕೇಳಿ ನನಗೆ ಬಹಳೇ ಆನಂದವಾಯಿತು. ಹೋಗು. ಈ ರಾಜ್ಯವನ್ನು ತ್ಯಾಗಮಾಡಿ ಎರಡನೆಯ ದೇಶಕ್ಕೆ ಹೋಗಿ ಪ್ರಸಿದ್ಧನಾಗು. ದೈವಪರೀಕ್ಷೆಯನ್ನು ಅವಲಂಬಿಸು. ಆದರೆ ಈ ದುರ್ಭಾಗ್ಯಳಾದ ತಾಯಿಯನ್ನು ಮಾತ್ರ ಮರೆಯಬೇಡ. ಪರಮೇಶ್ವರನು ನಿನಗೆ ಸುಖಮಯವಾದ ದಿವಸಗಳನ್ನು ಕೊಡಲೆಂಬುದೇ ನನ್ನ ಆಶೀರ್ವಾದವು. ಆಯುಷ್ಮಂತನಾಗು.

ಸುಲೋಚನೆಯ ಕಣ್ಣುಗಳು ಅಶ್ರುಗಳಿಂದ ಭರಿತವಾದವು.

ಜಗದೇವನು ಪೂಜ್ಯಮಾತೆಯ ಪಾದಾರವಿಂದಗಳಿಗೆ ಪೊಡಮಟ್ಟು ಕುದುರೆಯನ್ನೇರಿದನು. ರಾಜಕುಮಾರನು ದೇಶತ್ಯಾಗಕ್ಕೆ ಸಜ್ಜಾದದ್ದನ್ನು ಕಂಡು ಎಲ್ಲ ಪ್ರಜೆಗಳು ದೊಡ್ಡ ದನಿಯಿಂದ ಆಕ್ರೋಶ ಮಾಡಹತ್ತಿದರು. ಆ ಹೊತ್ತು ವಸುಂಧರೆಯ ಮನೆಯಲ್ಲಿ ಮಾತ್ರ ಆನಂದೋತ್ಸವವು ನಡೆಯಿತು. ಜಗದೇವನು ಹೊರಟುಹೋದನು.

---

( ೩ )

ಆಗ ಗುಜಾರಥದಲ್ಲಿ ಸಿದ್ಧರಾಜನೆಂಬ ರಾಜನು ರಾಜ್ಯವನ್ನಾಳುತ್ತಿದ್ದನು. ಅವನ ರಾಜಧಾನಿಯು ಕಮಳನೇರವೆಂಬದಿತ್ತು. ಸಿದ್ಧರಾಜನು ಸದಾಚಾರ ಸಂಪನ್ನನೂ, ಗುಣಿಯೂ, ಉದಾರವಿಚಾರವವನೂ ಇದ್ದನು. ಜಗದೇವನು ಕಮಳನೇರಕ್ಕೆ ಹೋಗಬೇಕೆಂದು ನಿಶ್ಚಯಿಸಿದನು. ಆಗ ವೀರಮತಿಯು ತನ್ನ ತೌರಮನೆಯಲ್ಲಿದ್ದಳು. ಜಗದೇವನು ಮಾರ್ಗದಲ್ಲಿ ಹೀಗೆ ವಿಚಾರ ಮಾಡಿದನು. "ನಾನು ದೈವಪರೀಕ್ಷೆ ಮಾಡಬೇಕೆಂದು ದೂರದೇಶಕ್ಕೆ ಹೋಗುವ ಸಂಕಲ್ಪಮಾಡಿರುವೆನು; ಯಾವಾಗ ತಿರುಗಿ ಬರುವೆನೋ ನಿಯಮವಿಲ್ಲ. ಒಮ್ಮೆ ವೀರಮತಿಯ ಭೆಟ್ಟಿಯನ್ನು ತೆಗೆದುಕೊಂಡು ಮುಂದಿನ ಮಾರ್ಗವನ್ನು ಕ್ರಮಿಸುವ." ಹೀಗೆಂದು ನಿಶ್ಚಯಿಸಿ ಅತ್ತೆಯಮನೆಗೆ ಹೊರಟನು.

ರಾಜನೂ, ವೀರಜನೂ ಜಗದೇವನಿಗೆ ಚೆನ್ನಾಗಿ ಆದರಸತ್ಕಾರಮಾಡಿದರು. ಜಗದೇವನು ತನ್ನ ನಿಶ್ಚಯವನ್ನು ಅತ್ತೆಮಾವಂದಿರಿಗೆ ತಿಳಿಸಿದನು. ಅವರೆಲ್ಲರೂ ಇವನ ಮನದ ಸಂಕಲ್ಪವನ್ನು ತಿರುಗಿಸಲು ಬಹಳೇ ಪ್ರಯತ್ನಪಟ್ಟರು.

ರಾಜನು ಜಗದೇವನಿಗೆ:— ತಾವು ಆನಂದದಿಂದ ಇಲ್ಲಿಯೇ ಇರಬೇಕು. ಈ ಮನೆಯು ತಮ್ಮದೇ ಇರುವದು. ಯಾವ ಮಾತಿನ ಕೊರತೆಯೂ ತಮಗೆ ಉಂಟಾಗುವದಿಲ್ಲ. ಸ್ವದೇಶವನ್ನು ಬಿಟ್ಟು ಪರದೇಶಕ್ಕೆ ಹೋಗುವದು ಒಳಿತಲ್ಲ... ಎಂಬದಾಗಿ ಪರಿಪರಿಯಿಂದ ಹೇಳಿಕೊಂಡನು. ಆದರೆ ಜಗದೇವನು ಯಾವ ಮಾತನ್ನೂ ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ.

ವೀರಮತಿಯು ಪತಿಯ ಕೂಡ ಪರದೇಶಕ್ಕೆ ಹೋಗುವೆನೆಂದು ಹಟ ಹಿಡಿದಳು. ವೀರಮತಿಯ ದೃಢನಿಶ್ಚಯವು ತಿಳಿಯಲು ಅವಳ ತಾಯಿಯೂ ಆನಂದಭರಿತಳಾದಳು. ಧನ್ಯ! ಧನ್ಯ! ವೀರಪುತ್ರೀ, ಧನ್ಯ! ನಿನಗೆ ಕಲ್ಯಾಣವಾಗಲಿ. ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕೂ ಸಾರ್ಥಕವಾಯಿತು. ಪ್ರಿಯಪುತ್ರೀ, ನನ್ನ ಮನದಲ್ಲಿದ್ದ ಸದಿಚ್ಛೆಯನ್ನೇ ನೀನು ಪ್ರಕಟಮಾಡಿದೆ. ಎಂತಹ ಪ್ರಸಂಗದಲ್ಲಿ ಯಾದರೂ ಪತಿಯ ಸೇವೆ ಮಾಡುವದೇ ನಿಜವಾದ ಪತಿವ್ರತೆಯರ ಧರ್ಮವು. ಇಂತಹಳೇ ನಿಜವಾದ ಗೃಹಿಣಿಯು. ಆಕೆಯೇ ನಿಜವಾದ ವೀರಮಾತೆಯು. ಈಶ್ವರನು ನಿಮ್ಮ ಮನೋರಥವನ್ನು ಪೂರ್ಣಮಾಡಲಿ; ಇದೇ ನನ್ನ ಆಶೀ

ವಾರ್ಗದ್ದವು. ಹೀಗೆಂದು ಅಳಿಯನ ಪ್ರವಾಸದ ಎಲ್ಲ ಸಿದ್ಧತೆಯನ್ನು ಮಾಡಲು ಸೇವಕರಿಗೆ ವೀರಮತಿಯು ತಾಯಿಯು ಆಜ್ಞಾಪಿಸಿದಳು.

ಮಹಾಶಯರಾದ ಓದುಗರೇ, ಇದೇ ಅಲ್ಲವೇ ನಿಜವಾದ ಸ್ತ್ರೀಶಿಕ್ಷಣವು? ಧನ್ಯಳು! ವೀರಮತಿಯೇ, ನೀನು ಧನ್ಯಳು! ಇಂಥ ವೀರಮಾತೆಯಲ್ಲಿ ಜನ್ಮಹೊಂದಿದ್ದಕ್ಕೆ ನೀನು ಧನ್ಯಳೇ! ವೀರಮತಿಯ ದೃಢನಿಶ್ಚಯುವು ಜಗದೇವನಿಗೆ ತಿಳಿಯಲು, ಅವನು ವೀರಮತಿಯೆಡಗೆ ಬಂದು ಬಹಳೇ ಪ್ರೇಮದಿಂದ:–ಪ್ರಿಯೇ, ವೀರಮತೀ, ನೀನು ಇಲ್ಲಿಯೇ ಸುಖದಿಂದಿರು. ಪರದೇಶದಲ್ಲಿ ನನ್ನ ಸಂಗಡವಿದ್ದರೆ ಅದು ನೆಟ್ಟಗಲ್ಲ. ಯಾವ ಪ್ರಸಂಗದಲ್ಲಿ ಎಂಥ ಸಂಕಟಗಳು ಬರುವವೋ ನಿಯಮವಿಲ್ಲ. ನೀನು ನನ್ನ ಬಳಿಯಲ್ಲಿದ್ದರೆ ತೊಂದರೆಯಾಗುವದು. ನನ್ನ ಚಿಂತೆಯು ಮತ್ತಿಷ್ಟು ಹೆಚ್ಚುವದು. ಆದರಿಂದ ನನ್ನನ್ನು ಈಗ ಹೋಗಗೊಡು. ಅಲ್ಲಿ ಎಲ್ಲ ವ್ಯವಸ್ಥೆಯಾದ ಕೂಡಲೆ ನಿನ್ನನ್ನು ಕರೆದುಕೊಂಡು ಹೋಗುವೆನು. ನಿನ್ನ ಹಟವನ್ನು ಬಿಡು.

ವೀರಮತಿ:–ನೀವು ನನಗೆ ಎಷ್ಟು ಬುದ್ಧಿವಾದವನ್ನು ಹೇಳಿದರೂ ನನ್ನ ಮೇಲೆ ಅದರಿಂದ ಯಾವ ಪರಿಣಾಮವೂ ಆಗುವದಿಲ್ಲ. ಬೋರಗಲ್ಲಮೇಲೆ ಮಳೆ ಸುರಿದಂತಾಗುತ್ತದೆ. ನೀವು ಪರದೇಶದಲ್ಲಿರುವಾಗಲೇ ನನ್ನ ಆವಶ್ಯಕತೆಯು ನಿಮಗೆ ಬಹಳವಿದೆ. ಆಗ ನಿಮ್ಮ ಸೇವೆಮಾಡುವದು ನನ್ನ ಆದ್ಯಕರ್ತವ್ಯ. ಪೂಜ್ಯರೇ ಈ ದೇಹವು ನನ್ನ ಸುಖಕ್ಕಾಗಿಯಲ್ಲ; ತಮ್ಮ ಸುಖಕ್ಕಾಗಿ. ನೀವು ಹೇಗೆ ವೀರ ಕ್ಷತ್ರಿಯ ಪುತ್ರರಿರುವಿರೋ, ಹಾಗೆಯೇ ನಾನೂ ವೀರಕ್ಷತ್ರಿಯಪುತ್ರಿಯೂ, ವೀರ ಪತ್ನಿಯೂ ಇದ್ದೇನೆ. ಮುಂದಿನ ಸಂಕಟದ ಭೀತಿಯಿಂದ ಸತೀಧರ್ಮಕ್ಕೆ ನಾನು ಎಳ್ಳಷ್ಟಾದರೂ ಕುಂದುತರಗೊಡುವವಳಲ್ಲ.

ಧನ್ಯ! ಜಗದೇವನೇ, ನೀನೇ ಧನ್ಯ! ನಿನ್ನ ಪೂರ್ವಜನ್ಮದ ಸುಕೃತಫಲದಿಂದಲೇ ಇಂಥ ಸಾಧ್ವೀಶಿರೋಮಣಿಯನ್ನು ಪಾಣಿಗ್ರಹಣಮಾಡಿರುವೆ.



( ೪ )

ಜಗದೇವನು ಕಟ್ಟಕಡೆಗೆ ಹೆಂಡತಿಗೆ ಸಂಗಡ ಬರಲು ಸಮ್ಮತಿಯನ್ನು ಕೊಟ್ಟನು. ಎಲ್ಲ ಗುರುಹಿರಿಯರ ಆಶೀರ್ವಾದವನ್ನೂ ನಿರೋಪವನ್ನೂ ತೆಗೆದು ಕೊಂಡು ಇಬ್ಬರೂ ಕುದರೆಯನ್ನೇರಿ ಕಮಳನೇರದ ಕಡೆಗೆ ಪ್ರಯಾಣಬೆಳಸಿದರು. ಐದಾರು ಮೈಲುಗಳ ಹಾದಿಯು ನಡೆದ ಮೇಲೆ ಎರಡು ದಾರಿಗಳುಒಡೆದವು. ಒಂದು ಮಾರ್ಗದಿಂದ ಕಮಳನೇರಕ್ಕೆ ತೀವ್ರವಾಗಿ ಮುಟ್ಟಲು ಬರುತ್ತಿತ್ತು. ಮತ್ತೊಂದ ರಿಂದ ಹೋದರೆ ಬಹಳ ವೇಳೆ ಹತ್ತುತ್ತಿತ್ತು. ಆದರೆ ಸಮೀಪದ ಹಾದಿಯು ಸ್ವಲ್ಪ ಭೀತಿದಾಯಕವಾಗಿತ್ತು. ಹುಲಿ, ಸಿಂಹ ಮೊದಲಾದ ಹಿಂಸ್ರಪಶುಗಳು ಅತ್ತಕಡೆಗೆ ಮನೆಮಾಡಿಕೊಂಡು ಇರುತ್ತಿದ್ದವು. ವೀರಮತಿಯು ಸಮ್ಮತಿಯಿಂದ ಜಗದೇವನು ಸಮೀಪದ ಹಾದಿಯಿಂದಲೇ ಹೊರಟನು. ಕುದರೆಯು ಇನ್ನೂ ದೂರ ಹೋಗಿ ದ್ದಿಲ್ಲ; ಅಷ್ಟರಲ್ಲಿಯೇ ಹುಲಿಯು ಭಯಂಕರವಾದ ಗರ್ಜನೆಯು ಕೇಳಬಂತು. ದಂಪತಿಗಳೀರ್ವರು ಭಾವೀಸಂಕಟದ ಪರಿಹಾರಕ್ಕಾಗಿ ಸಜ್ಜಾದರು. ಇಷ್ಟರ ಲ್ಲಿಯೇ ಒಂದು ಹೆಣ್ಣು ಹುಲಿಯು ಗರ್ಜನೆಮಾಡುತ್ತ ಮಾಡುತ್ತ ಸಮೀಪಕ್ಕೆ ಬಂದಿತು. ಜಗದೇವನು ತನ್ನ ಕತ್ತಿಯನ್ನು ಒರೆಯಿಂದ ತೆಗೆಯುವಷ್ಟರಲ್ಲಿಯೆ ವೀರಮತಿಯು ತನ್ನ ಬತ್ತಳಿಕೆಯಿಂದ ಬಾಣವನ್ನು ತೆಗೆದು ಗುರಿಯಿಟ್ಟು ಹುಲಿಯು ಮೇಲೆ ಬಿಟ್ಟಳು. ಹುಲಿಯು ಚೀತ್ಕಾರಮಾಡುತ್ತ ನೆಲದಮೇಲೆ ಬಿದ್ದಿತು. ವೀರಮತಿಯ ಶೌರ್ಯವನ್ನು ಕಂಡು ಜಗದೇವನ ಅಂತಃಕರಣವು ತುಂಬಿಬಂತು! ಅವನು:—"ಭಾಪು! ಭಾಪು! ವೀರಮತೀ, ಭಾಪು! ನಿನ್ನ ಶೌರ್ಯಕ್ಕೆ ಬೆಲೆಯೇ ಇಲ್ಲ. ನೀನು ಈದಿನ ನನ್ನಖಡ್ಗವನ್ನು ಕೆಳಗಿಡುವ ಪ್ರಸಂಗತಂದೆ."ಈ ರೀತಿ ವೀರಮತಿಯ ಶೌರ್ಯವನ್ನು ಕೊಂಡಾಡುತ್ತ ಮುಂದೆ ಸಾಗುವಷ್ಟರ ಲ್ಲಿಯೇ ಮತ್ತೊಂದು ಭಯಂಕರವಾದ ಗಂಡುಹುಲಿಯು ಕಂಟಿಯೊಳಗಿಂದ ಹೊರಗೆ ಬಂದಿತು. ಮತ್ತು ಜಗದೇವನ ಗಂಟಲಕ್ಕೆ ಜಿಗಿಯುವದಕ್ಕೆ ಹವಣಿ ಸಿತು. ಅಷ್ಟರಲ್ಲಿ ಜಗದೇವನು ಖಡ್ಗವನ್ನು ಹುಲಿಯು ಗಂಟಲಿಗೆ ಎಸೆದನು. ಅದಕ್ಕೆ ಅರಗಾಯವಾದದರಿಂದ ಮತ್ತಿಷ್ಟು ಸಿಟ್ಟಿನಿಂದ ಜಗದೇವನ ಮೇಲೆ ಏರಿ ಬಂತು. ಕೂಡಲೆ ವೀರಮತಿಯು ಬಾಣವನ್ನೆಸೆದು ಆ ಕ್ರೂರ ಪ್ರಾಣಿಯ ಪ್ರಾಣ ವನ್ನು ಹೀರಿದಳು. ವೀರಮತಿಯು ಬಾಣವನ್ನು ಬಿಡದೆ ಇದ್ದರೆ, ಜಗದೇವನ ಪ್ರಾಣದ ಮೇಲೆ ಭಯಂಕರವಾದ ಅನಿಷ್ಟಪ್ರಸಂಗವು ಒದಗುತ್ತಿತ್ತು. ಜಗದೇ

ವನು ವೀರಮತಿಗೆ ಮತ್ತೆ ಧನ್ಯವಾದಗಳನ್ನಿತ್ತನು. ಇಬ್ಬರೂ ಮುಂದೆ ಮಾರ್ಗಕ್ರಮಣಮಾಡುತ್ತ ಸುಖರೂಪವಾಗಿ ಕಮಳನೇರಿಗೆ ತಲ್ಪಿದರು. ಮತ್ತು ಪಟ್ಟಣದ ಹೊರಗೆ ಇದ್ದ ಒಂದು ಸರೋವರದಮೇಲೆ ಇಳಕೊಂಡರು. ಸ್ವಲ್ಪ ಹೊತ್ತು ವಿಶ್ರಾಂತಿಪಡೆದು ವೀರಮತಿಯನ್ನು ಅಲ್ಲಿಯೇ ಕೂಡ್ರಿಸಿ ಮುಂದಿನ ವ್ಯವಸ್ಥೆಯ ಸಲುವಾಗಿ ಜಗದೇವನು ರಾಜಧಾನಿಯೊಳಗೆ ಹೋದನು.

ಆ ಕಾಲಕ್ಕೆ ಕಮಳನೇರದಲ್ಲಿ ಕಮಲೆ ಎಂಬ ಒಬ್ಬ ಅತ್ಯಂತ ರೂಪವತಿಯಾದ ವೇಶ್ಯೆಯು ಇರುತ್ತಿದ್ದಳು. ಕಮಳನೇರದಲ್ಲಿದ್ದ ದೊಡ್ಡ ದೊಡ್ಡ ರಾಜ್ಯಕಾರ್ಯಭಾರಿಗಳು, ಸೆಟ್ಟಿಸಾವಕಾರರು ಕಮಲೆಯ ದಾಸಾನುದಾಸರಾಗಿದ್ದರು. ಅವಳು ದೊಡ್ಡ ಹರ್ಮ್ಯದಲ್ಲಿರುತ್ತಿದ್ದಳು. ರಾಜ್ಯಕಾರ್ಯಭಾರಿಗಳನ್ನು ಸಂತೋಷಗೊಳಿಸುವದಕ್ಕಾಗಿ ಆಕೆಯು ಎಷ್ಟೋ ಕುಲೀನ ಸ್ತ್ರೀಯರನ್ನು ಭ್ರಷ್ಟಮಾಡಿದ್ದಳು. ಕರ್ಣಸಿಂಗನೆಂಬ ನರಪಿಶಾಚಿಯು ಕಮಳನೇರದಲ್ಲಿ ಕೊತವಾಲನಿದ್ದನು. ಅವನಿಗೆ ಭೀಮಸಿಂಗನೆಂಬ ಒಬ್ಬ ಮಗನಿದ್ದನು. ಅವನು ಯಾವಾಗಲೂ ಕಮಲೆಯ ಮನೆಯಲ್ಲಿ ಇರುತ್ತಿದ್ದನು. ಭೀಮಸಿಂಗನಿಂದ ಕಮಲೆಗೆ ಒಳ್ಳೇ ಪ್ರಾಪ್ತಿಯಿತ್ತು. ಅವನ ತಂದೆಯ ದರ್ಪವು ರಾಜಧಾನಿಯಲ್ಲಿ ಚೆನ್ನಾಗಿ ಇದ್ದವರಿಂದ ಕಮಲೆಯು ಭೀಮಸಿಂಗನಿಗೆ ಅಂಜುತ್ತಿದ್ದಳು. ಅವನನ್ನು ಸಂತೋಷಪಡಿಸುವದಕ್ಕೋಸ್ಕರ, ಅವಳು ಯಾವಾಗಲೂ ಒಬ್ಬ ಕುಲೀನಸ್ತ್ರೀಯನ್ನು ತಕ್ಕಿಸಿ, ಅವನ ಕಾಮವಾಸನೆಯನ್ನು ತೃಪ್ತಿಗೊಳಿಸುತ್ತಿದ್ದಳು. ಕಮಲೆಯು ತನ್ನ ಕಾರ್ಯದ ಸಲುವಾಗಿ ಎಷ್ಟೋ ದಾಸಿಯರನ್ನಿಟ್ಟಿದ್ದಳು. ವೀರಮತಿಯು ಯಾವ ಕಾಲಕ್ಕೆ ಸರೋವರದ ದಂಡೆಯಮೇಲೆ ಕುಳಿತಿದ್ದಳೋ, ಅದೇವೇಳೆಗೆ ಕಮಲೆಯ ದಾಸಿಯೊಬ್ಬಳು ಅತ್ತಕಡೆಗೆ ಬಂದಿದ್ದಳು. ವೀರಮತಿಯನ್ನು ಕಂಡು ಆಕೆಯ ಬಾಯಲ್ಲಿ ನೀರೊಡೆದವು. ಈ ಹೊತ್ತು ಯಾವ ಪುರುಷನ ಭಾಗ್ಯವು ತೆರೆದಿರುವದೋ! ಈ ಸುಂದರಿಯನ್ನು ಯಾವನು ಹೊಂದುವನೋ ! ಎಂದು ತನ್ನಲ್ಲಿಯೇ ಅಂದುಕೊಂಡಳು !

ಆ ದಾಸಿಯು ವೀರಮತಿಯ ಬಳಿಯಲ್ಲಿ ಹೋಗಿ ಸವಿ ಸವಿ ಮಾತನಾಡಿ ಆಕೆಯ ಮನವನ್ನೆಳೆದುಕೊಂಡು, ಕೂಡಲೆ ಈ ಆನಂದದ ಸಂಗತಿಯನ್ನು ತಿಳಿಸಲು ಲಗುಬಗೆಯಿಂದ ಕಮಲೆಯಿದ್ದೆಡೆಗೆ ಹೋದಳು. ತುಸು ಹೊತ್ತಿಗೆ ಕಮಲೆಯು ರಥವನ್ನೇರಿ ಎಲ್ಲ ದಾಸಿಯರನ್ನೊಡಗೂಡಿ ವೀರಮತಿಯಿದ್ದಲ್ಲಿ ಬಂದು

ಹೀಗೆಂದಳು. "ವತ್ಸೇ, ನೀನು ಬಂದ ಸಂಗತಿಯು ನನ್ನ ದಾಸಿಯಿಂದ ಇದೇ ಈಗ ಗೊತ್ತಾಯಿತು. ನಾನು ನಿನ್ನ ಮಾವನಾದ ಉದಯಾದಿತ್ಯನ ತಂಗಿಯೂ, ಕಮಳ ನೇರದಧಿಪತಿಯ ಪಟ್ಟದ ರಾಣಿಯೂ ಆಗಿದ್ದೇನೆ. ಜಗದೇವನು ಆಸ್ಥಾನಕ್ಕೆ ಹೋಗಿದ್ದಾನೆ. ಅದರಿಂದ ಬರಲು ಸ್ವಲ್ಪ ತಡವಾಗುವದೆಂದು ಹೇಳಿಕಳಿಸಿರುವನು. ಅವನು ಮಹಾರಾಜರ ಸಂಗಡ ಕ್ಷೇಮಸಮಾಚಾರದ ಸುದ್ದಿಗಳನ್ನು ಮಾತನಾಡುತ್ತ ಕುಳಿತಿದ್ದಾನೆ. ಆದದರಿಂದ ನಿನ್ನನ್ನು ಕರೆದುಕೊಂಡು ಹೋಗಲು ನಾನು ಬಂದಿದ್ದೇನೆ." ನಿಷ್ಕಪಟದ ಆ ವೀರಮತಿಗೆ ಈ ವೇಶ್ಯೆಯ ಕಪಟನಾಟಕವು ಹೇಗೆ ತಿಳಿಯಬೇಕು? ಯಾವಸಂಶಯವನ್ನೂ ಮನದಲ್ಲಿ ತಾರದೆ ಅವಳ ಸಂಗಡ ಹೋದಳು. ಕಮಲೆಯು ವೀರಮತಿಯನ್ನು ದಿವಾಣಖಾನೆಯಲ್ಲಿ ಕುಳ್ಳಿರಿಸಿ ಹೀಗೆಂದಳು. "ವತ್ಸೇ, ವೀರಮತೀ, ಜಗದೇವನು ಮಹಾರಾಜರ ಕೂಡ ಭೋಜನ ಮಾಡಿ ಮತ್ತೆ ಆಸ್ಥಾನದಲ್ಲಿ ಕುಳಿತಿದ್ದಾನೆ. ರಾತ್ರಿ ಒಂಬತ್ತು ಘಂಟೆಯ ವರೆಗೆ ಮಹಾರಾಜರು ಓಲಗ ಬಿಟ್ಟು ಏಳುವದಿಲ್ಲ. ಅಲ್ಲಿಯವರೆಗೆ ಅವನು ಮಹಾರಾಜರನ್ನು ಬಿಟ್ಟು ಬರುವಹಾಗಿಲ್ಲ. ಆದದರಿಂದ ನೀನು ಭೋಜನ ಮಾಡಲು ಏಳು."

ವೀರಮತಿಗೆ ಆಕೆಯ ಮಾತು ನಿಜವೆಂದೆನಿಸಿತು. ಪ್ರಸನ್ನಮನದಿಂದ ಊಟಮಾಡಿದಳು. ರಾತ್ರಿ ಎಂಟು ಗಂಟೆಗೆ ಮತ್ತೆ ಕಮಲೆಯು ಹೀಗೆಂದಳು. "ಕುವರೀ, ನಿಮ್ಮ ಮಲಗುವ ವ್ಯವಸ್ಥೆಯನ್ನು ಮೇಲಿನ ಅಂತಸ್ತಿನಲ್ಲಿ ಮಾಡಿರುತ್ತದೆ. ಅಲ್ಲಿ ಹೋಗಿ ವಿಶ್ರಾಂತಿಯನ್ನು ತೆಗೆದುಕೊ. ಜಗದೇವನು ಬಂದಕೂಡಲೆ ಕಳಿಸುವೆನು." ಪತಿಯ ದರ್ಶನದ ಉತ್ಸುಕತೆಯಿಂದ ವೀರಮತಿಯು ಮೇಲೆ ಹೋದಳು. ಅಟ್ಟದಮೇಲಿನ ಶಿಸ್ತು ಬಹಳೇ ಸೊಬಗಿನದಾಗಿತ್ತು. ಗೋಡೆಗೆ ಅಲ್ಲಲ್ಲಿ ನಿಲುವುಗನ್ನಡಿಗಳನ್ನು ತೂಗಬಿಟ್ಟಿತ್ತು; ಮತ್ತು ಅಲ್ಲಲ್ಲಿ ಚಿತ್ರವಿಚಿತ್ರವಾದ ಗೊಂಬೆಗಳನ್ನೂ ಬರೆದಿತ್ತು. ಒಂದು ಬಂಗಾರದ ಗಿಲಿಟಿನ ಮಂಚದ ಮೇಲೆ ಕುತ್ತನಿಯ ಗಾದಿಯನ್ನು ಹಾಸಿತ್ತು. ಅಲ್ಲಿಯೇ ಒಂದು ಮೇಜಿನ ಮೇಲೆ ಮದ್ಯದಿಂದ ತುಂಬಿದ ಒಂದು ಕುಪ್ಪಿಯನ್ನಿಟ್ಟಿತ್ತು. ವೀರಮತಿಯು ಅಟ್ಟದ ಮೇಲೆ ಹೋಗಿ ಇದನ್ನೆಲ್ಲ ನೋಡಿ ಬೆಪ್ಪಾಗಿ ಮಂಚದ ಹತ್ತರ ನಿಂತಳು. ಇಷ್ಟರಲ್ಲಿಯೇ ಭೀಮಸಿಂಗನು ಅಲ್ಲಿ ಬಂದನು. ಅಲ್ಲಿ ಪರಪುರುಷನು ಬಂದದ್ದನ್ನು ಕಂಡು ವೀರಮತಿಯ ಕಣ್ಣುಗಳು ಕೆಂಡದಂತಾದವು. ತಾನು ಮೋಸಹೋದೆನೆಂದು ಅಂದುಕೊಂಡಳು. ಭೀಮಸಿಂಗನು ಹತ್ತರ ಹತ್ತರ ಬರಹತ್ತಲು, ವೀರ

ಮತಿಯು ಸಿಂಹದಂತೆ ಗರ್ಜಿಸಿ, ಅವನ ಮೇಲೆಬಿದ್ದು, ಅವನನ್ನು ಕೆಳಗೆ ಕೆಡವಿ ಎದೆಯ ಮೇಲೆ ಕುಳಿತು, ಸೆರಗಿನಲ್ಲಿ ಬಚ್ಚಿಟ್ಟ ಕಿರುಗತ್ತಿಯನ್ನು ಹೊರಗೆ ತೆಗೆದಳು. ಭೀಮಸಿಂಹನ ಮೋರೆಯು ಕಪ್ಪಿಟ್ಟಿತು. ವೀರಮತಿಯ ಪ್ರಾರ್ಥನೆಮಾಡಿ ಅವಳ ಕ್ಷಮೆ ಬೇಡಿಕೊಂಡನು. ವೀರಮತಿಯು ನಿರ್ಮಲಾಂತಃಕರಣದಲ್ಲಿ ದಯೆಹುಟ್ಟಿ ಅವನನ್ನು ಬಿಟ್ಟುಕೊಟ್ಟಳು. ಆದರೆ ಅವನು ಎದ್ದು ಅಷ್ಟರಲ್ಲಿಯೇ ಸಾವರಿಸಿಕೊಂಡು ವೀರಮತಿಯ ಕೈಯಲ್ಲಿದ್ದ ಕಿರುಗತ್ತಿಯನ್ನು ಕಸಕೊಂಡನು. ಮತ್ತೆ ಹುಲಿಯಂತಾದನು. ಭೀಮಸಿಂಗನ ಕೈಯಲ್ಲಿಕಿರುಗತ್ತಿಯು ಹೋದಕೂಡಲೆ ವೀರಮತಿಯು ಬೆದರಿದಳು. ಆದರೆ ಕೂಡಲೆ ಅವಳಿಗೆ ಒಂದು ಹಂಚಿಕೆಯು ತೋರಿತು. ಅವಳು ಭೀಮಸಿಂಗನ ಕೂಡ ಸವಿಸವಿ ಮಾತನಾಡಿ, ಮದ್ಯದಿಂದ ತುಂಬಿದ ಒಂದು ಬಟ್ಟಲವನ್ನು ಅವನಿಗೆ ಕುಡಿಯಲು ಕೊಟ್ಟಳು. ಸಂತೋಷಿಸಿ ಭೀಮಸಿಂಗನು ಅದನ್ನು ಕುಡಿದನು. ಅವನಿಗೆ ಪೂರ್ಣವಾಗಿ ಅಮಲೇರಿತು. ಆಗ ಅವನ ಕೈಯಲ್ಲಿದ್ದ ಕತ್ತಿಯನ್ನು ಕಸಿದುಕೊಂಡು ಅವನ ಎದೆಗೆ ತಿವಿದಳು. ಕೂಡಲೆ ಭೀಮಸಿಂಗನು ಗತಪ್ರಾಣನಾದನು. ಅಲ್ಲಿಂದ ಅವನ ಹೆಣವನ್ನು ತುಂಡು ತುಂಡುಮಾಡಿ ಒಂದು ಗಂಟಿನಲ್ಲಿ ಕಟ್ಟಿ ಕಿಡಿಕೆಯೊಳಗಿಂದ ಓಣಿಯಲ್ಲಿ ಎಸೆದಳು. ಆಮೇಲೆ ವೀರಮತಿಯು ಇದೆಲ್ಲ ಆದ ಸಂಗತಿಯ ವಿಚಾರಮಾಡುತ್ತ ಸ್ವಸ್ಥ ಕುಳಿತಳು.



( ೫ )

ರಾತ್ರಿ ಹನ್ನೆರಡು ಗಂಟೆಯ ಸುಮಾರಕ್ಕೆ ಪೋಲೀಸ ಜವಾನನು ಗಸ್ತಿಯನ್ನು ಒದರುತ್ತ ಒದರುತ್ತ ಕಮಲೆಯ ಮನೆಯಹತ್ತರ ಬರುವಾಗ, ಅವನಿಗೆ ವೀರಮತಿಯು ಒಗೆದಿದ್ದ ಗಂಟು ಸಿಕ್ಕಿತು. ಆಗಿಂದಾಗ ಅದನ್ನು ಕೊತವಾಲನ ಕಡೆಗೆ ಮುಟ್ಟಿಸಿದನು. ಮರುದಿನ ಮುಂಜಾವಿನಲ್ಲಿ ಗಂಟನ್ನು ಬಿಚ್ಚೆಂದು ಕೊತವಾಲನು ಸಿಪಾಯಿಗೆ ಹೇಳಿದನು. ಬಿಚ್ಚಿ ನೋಡಲು ಅದರಲ್ಲಿ ಭೀಮಸಿಂಗನ ಶವವು ಕಾಣಿಸಿತು. ಅದನ್ನು ನೋಡಿ ಕೊತವಾಲನ ಸಿಟ್ಟು ಮೇರೆದಪ್ಪಿತು. ಭೀಮಸಿಂಗ ಮತ್ತು ಕಮಲೆಯರ ಸಂಬಂಧವು ಅವನಿಗೆ ಗೊತ್ತಿತ್ತು. ಆಗಲೇ ಅವನು ಸಿಪಾಯರ ಗುಂಪನ್ನು ತೆಗೆದುಕೊಂಡು ಕಮಲೆಯ ಮನೆಯನ್ನು ಮುತ್ತಿ ತನ್ನ ಮಗನ ಶೋಧಮಾಡಹತ್ತಿದನು. ಆಗ ಕಮಲೆಯು ಕೊತವಾಲನನ್ನುದ್ದೇಶಿಸಿ:—ಸರಕಾರ, ತಮ್ಮ ಮಗನು ಅಟ್ಟದ ಮೇಲೆ ವಿರಾಮವನ್ನು ಹೊಂದುತ್ತಿದ್ದಾನೆ. ಅವನ ಚಿಂತೆಯನ್ನು ಮಾಡಬೇಡಿರಿ. ಎಂದಳು. ಅಷ್ಟರಲ್ಲಿ ಸಿಪಾಯಿಯು ಮೇಲೆ ಹೋಗಿ ವೀರಮತಿಯಿದ್ದ ಕೋಣೆಯ ಬಾಗಿಲ ಬಳಿಯಲ್ಲಿ ನಿಂತು ಭೀಮಸಿಂಗನವಿಷಯವಾಗಿ ಪ್ರಶ್ನ ಮಾಡಹತ್ತಿದನು. ವೀರಮತಿಯು ಸಿಂಹದಂತೆ ಗರ್ಜಿಸಿ ಅವನ ಪ್ರಶ್ನೆಗೆ ಹೀಗೆ ಉತ್ತರವಿತ್ತಳು "ಆ ಪಾಪಿಷ್ಠನು ನನ್ನ ಸತೀತ್ವನ್ನು ಕೆಡಿಸಲು ಪ್ರಯತ್ನಮಾಡಹತ್ತಿದನು. ಆದದರಿಂದ ಅವನನ್ನು ಕೊಂದು ನನ್ನ ಸತೀತ್ವವನ್ನು ಕಾಯ್ದುಕೊಂಡೆನು. ಆ ಚಾಂಡಾಲಿಯು ನನ್ನನ್ನು ಮೋಸಗೊಳಿಸಿ ಇಂಥ ಗಂಡಾಂತರಕ್ಕೀಡುಮಾಡಿದಳು. ಅವಳೂ ತೀವ್ರವಾಗಿ ತನ್ನ ಪಾಪದ ಫಲವನ್ನುಣ್ಣುವಳು. ನನ್ನ ಮಾನರಕ್ಷಣೆಯ ಸಲುವಾಗಿ ಯಾವಾಗಲೂ ಹತ್ತರ ಕಿರುಗತ್ತಿಯನ್ನು ಇಡುತ್ತೇನೆ. ಇದಿಲ್ಲದೆ ನಾನು ಎಂದೂ ಇರುವದಿಲ್ಲ." ವೀರಮತಿಯ ಇದೆಲ್ಲ ರಾಮಾಯಣವನ್ನು ಕೇಳಿ ಕೊತವಾಲನು ಕ್ಷುಬ್ಧನಾದನು. ಕಿಡಿಕೆಯಿಂದ ಕೋಣೆಯೊಳಗೆ ನುಗ್ಗಿ ವೀರಮತಿಯನ್ನು ಹೆಡಮುರಿಗೆ ಕಟ್ಟಿ ಶರಲಿಕ್ಕೆ ಅಪ್ಪಣೆ ಮಾಡಿದನು. ಒಬ್ಬ ಸಿಪಾಯಿಯು ಕಿಡಿಕೆಯ ಹತ್ತರ ಹೋದನು. ಆಗಲೇ ಅವನನ್ನು ವೀರಮತಿಯು ಕತ್ತಿಯಿಂದ ಇರಿದು ಯಮಸದನಕ್ಕೆ ಕಳಿಸಿದಳು! ಇದರಂತೆಯೇ ೧೫ ಮಂದಿ ಸಿಪಾಯರ ಗತಿಯಾಯಿತು ! ಊರಲ್ಲಿ ಗಡಬಿಡಿಯೆದ್ದಿತು. ಕಮಲೆಯ ಮನೆಯ ಹತ್ತರ ಬಹಳ ಜನ ನೆರೆಯಿತು. ಸಿದ್ಧರಾಜನಿಗೆ ಈ ಸುದ್ದಿ ಗೊತ್ತಾಗಿ ಅವನೂ ಆ ಸ್ಥಳಕ್ಕೆ ಬಂದನು. ಸಿದ್ಧ-

ರಾಜನು ವೀರಮತಿಯನ್ನುದ್ದೇಶಿಸಿ ಆದ ಸಂಗತಿಯನ್ನೆಲ್ಲ ಕೇಳಿದನು. ತಾನಿದ್ದಲ್ಲಿಯೇ ಇದ್ದು ವೀರಮತಿಯುಂ ರಾಜನಿಗೆ ಎಲ್ಲ ಸಂಗತಿಯನ್ನು ಅರುಹಿದಳು. ಇದನ್ನೆಲ್ಲ ಕೇಳಿ ರಾಜನು:—ವೀರಮತೀ, ಯಾವ ಚಿಂತೆಯನ್ನೂ ಮಾಡಬೇಡ. ನಿನ್ನ ಈ ಶೌರ್ಯಸಾಹಸಗಳನ್ನು ಕೇಳಿ ಮತ್ತು ನೋಡಿ ನಾನು ಬಹಳೇ ಸಂತುಷ್ಟನಾಗಿದ್ದೇನೆ. ನಿನಗೆ ನಾನು ಅಭಯುವನ್ನು ಕೊಡುತ್ತೇನೆ. ಯಾವ ಅಂಜಿಕೆಯೂ ಇಲ್ಲದೆ ಹೊರಗೆ ಬಾ! ವೀರಮತಿ: — ಮಹಾರಾಜರೇ ಕ್ಷಮಿಸಿರಿ. ನನ್ನ ಪತಿದೇವನು ಇಲ್ಲಿಗೆ ಬರುವವರೆಗೆ ನಾನು ಹೊರಗೆ ಬರುವದಿಲ್ಲ!

ಜಗದೇವನು ವೀರಮತಿಯನ್ನು ಸರೋವರದ ದಂಡೆಯಮೇಲೆ ಕೂಡ್ರಿಸಿ ಬಿಡಾರ ಹುಡಕಲು ಪಟ್ಟಣವಲ್ಲಿ ಹೋಗಿದ್ದನಷ್ಟೇ ? ತುಸು ಹೊತ್ತಿಗೆ ತಿರುಗಿ ಬಂದು ನೋಡುತ್ತಾನೆ! ವೀರಮತಿಯಿಲ್ಲ! ದೊಡ್ಡ ಸಂಕಟದಲ್ಲಿ ಬಿದ್ದನು. ಆಹೊತ್ತಿನ ರಾತ್ರಿಯನ್ನು ತಳಮಳಿಸುತ್ತ ಕಳೆದನು. ಸೂರ್ಯೋದಯವಾಗುವದೊಂದೇ ತಡ. ವೀರಮತಿಯನ್ನು ಹುಡುಕಲು ನಗರದಲ್ಲಿ ಬಂದನು. ಅಷ್ಟರಲ್ಲಿ ಪಟ್ಟಣದಲ್ಲಿ ನಡೆದ ಗಡಬಿಡಿಯನ್ನು ಕೇಳಿ, ಅವನೂ ಜನರ ಸಂಗಡ ಕಮಲೆಯ ಮನೆಯ ಹತ್ತರ ಬಂದನು. ಮೇಲಿನಂತೆ ರಾಜನನ್ನುದ್ದೇಶಿಸಿ ವೀರಮತಿಯಾಡಿದ ಶಬ್ದಗಳನ್ನು ಗುರುತಿಸಿ ಒದರಿ ಹೀಗೆಂದನು. "ವೀರಮತೀ, ಇಗೋ ನಾನು ಬಂದೆನು. ಇನ್ನೇನೂ ನೀನು ಭಯಪಡಬೇಡ. ಆನಂದದಿಂದ ಹೊರಗೆ ಬಾ."

ಪತಿಯ ಶಬ್ದಗಳನ್ನು ಕೇಳಿ ವೀರಮತಿಯು ಕೋಣೆಯೊಳಗಿಂದ ಹೊರಗೆ ಬಂದಳು.

ಸಿದ್ಧರಾಜನು ಜಗದೇವನ ಸಂಬಂಧಿಕನಿದ್ದನು. ಅವನು ಜಗದೇವನಿಗೆ ಬಹುಸನ್ಮಾನ ಮಾಡಿದನು. ಮತ್ತು ವೀರಮತಿಗೂ ಅತ್ಯಂತ ಸನ್ಮಾನ ಮಾಡಿ ಸಂಭ್ರಮದಿಂದ ಅರಮನೆಗೆ ಕರೆದುಕೊಂಡು ಹೋದನು. ಕರ್ಣಸಿಂಗ ಮತ್ತು ಕಮಲೆ ಇವರಿಬ್ಬರಿಗೂ ಭಯಂಕರವಾದ ಶಿಕ್ಷೆಯನ್ನು ವಿಧಿಸಿದನು.

ಸಿದ್ಧರಾಜನು ಜಗದೇವನಿಗೆ ಅವನ ಯೋಗ್ಯತೆಗನುಸರಿಸಿ ಆಸ್ಥಾನದಲ್ಲಿ ಉಚ್ಚಪ್ರತಿಯ ಸ್ಥಾನವನ್ನು ಕೊಟ್ಟನು. ಆ ದಂಪತಿಗಳ ದಿವಸಗಳು ಆನಂದದಿಂದ ಹೋಗಹತ್ತಿದವು. ಜಗದೇವನು ಸಿದ್ಧರಾಜನ ಸೇವೆಯನ್ನು ಎಷ್ಟೋ ವರ್ಷಗಳವರೆಗೆ ನಿಷ್ಠೆಯಿಂದ ಮಾಡಿದನು. ಆದರೆ ಕಟ್ಟಕಡೆಗೆ ಯಾವದೋ

ಒಂದು ಕಾರಣದಿಂದ ಅವನು ತಿರುಗಿ ತನ್ನ ತಂದೆಯ ರಾಜ್ಯಕ್ಕೆ ಬಂದನು. ಆಗ ರಣದೇವನು ತೀರಿಹೋದದರಿಂದ ವಸುಂಧರೆಯು ಗರ್ವವು ಇಲ್ಲದಂತಾಗಿತ್ತು. ನೃಪತಿಸಿಂಹನು ಒಳ್ಳೇ ಸಡಗರದಿಂದ ಜಗದೇವನ ಸ್ವಾಗತಮಾಡಿದನು. ಜಗದೇವನು ತನ್ನ ತಾಯಿತಂದೆಗಳ ದರ್ಶನ ತೆಗೆದುಕೊಂಡು, ಮಲತಾಯಿಯ ಭೆಟ್ಟಿಗೆ ಹೋದನು. ಅವನು ವಸುಂಧರೆಯ ಚರಣದಲ್ಲಿ ತನ್ನ ಮಸ್ತಕವನ್ನಿಟ್ಟು:—ಪೂಜ್ಯ ತಾಯಿಯವರೇ, ತಮ್ಮ ಆಶೀರ್ವಾದದಿಂದ ಎಲ್ಲವೂ ಒಳಿತಾಗಿದೆ; ಮತ್ತು ದಿವ್ಯದಿವಸಗಳನ್ನು ನೋಡುತ್ತಿದ್ದೇನೆ. ನನ್ನ ಕಡೆಯಿಂದ ಯಾವ ಅಪರಾಧವಾಗಿದ್ದರೂ ಕ್ಷಮಿಸಿರಿ.

ವಸುಂಧರೆಯ ಆಶೀರ್ವಾದವನ್ನೂ, ನಿರೋಪವನ್ನೂ ಪಡೆದು ಜಗದೇವನು ತನ್ನಬಿಡಾರಕ್ಕೆ ಹೋದನು.

ಆಮೇಲೆ ಉದಯಾದಿತ್ಯನು ಜಗದೇವನಿಗೆ ಪಟ್ಟಗಟ್ಟಿ ಪಾರಮಾರ್ಥದಲ್ಲಿ ಕಾಲಕಳೆಯಹತ್ತಿದನು. ವೀರಮತಿಯು ರಾಜ್ಞೀಪದವನ್ನು ಪಡೆದಳು. ಅವಳು ತನ್ನ ಆಯುಷ್ಯದಲ್ಲಿ ಎಷ್ಟೋ ವೀರಕೃತ್ಯಗಳನ್ನು ಮಾಡಿದಳು. ಜಗದೇವನು ಎಷ್ಟೋ ವರ್ಷಗಳ ವರೆಗೆ ಸುಖದಿಂದ ರಾಜ್ಯವಾಳಿ ತನ್ನ ಆಯುಷ್ಯದ ೫೦ನೆಯ ವರ್ಷದಲ್ಲಿ ಸ್ವರ್ಗಸ್ಥನಾದನು. ವೀರಮತಿಯು ಪತಿಯ ಚಿತೆಯೊಡನೆ ಸಹಗಮನ ಮಾಡಿದಳು. ವೀರಮತಿಯು ಕೀರ್ತಿಯು ಈಹೊತ್ತಿಗೂ ಇತಿಹಾಸದಲ್ಲಿ ಅಜರಾಮರವಾಗಿದೆ !

ವಾಚಕಮಹಾಶಯರೇ, ಇವಳೇ ಅಲ್ಲವೇ ವೀರಪತ್ನಿಯು? ವೀರಪತ್ನಿಯೇ, ನೀನೇ ಧನ್ಯಳು ! ಅಂತೆಯೇ ನೀನು ವೀರಪತ್ನಿಯೂ, ವೀರಪುತ್ರಿಯೂ ಎಂದಂದುಕೊಂಡಿಲ್ಲವೇ? ಬಂಧುಗಳೇ, ನೀವು ಜಗದೇವನಂತೆ ಏಕಪತ್ನೀವ್ರತಸ್ಥರೂ, ತಂದೆತಾಯಿಗಳಲ್ಲಿ ನಿಸ್ಸೀಮಭಕ್ತಿಯುಳ್ಳವರೂ, ಶೂರರೂ, ದೇಶಾಭಿಮಾನಿಗಳೂ ಆಗಿರಿ. ಭಗಿನಿಯರೇ, ನೀವು ವೀರಮತಿಯಂತೆ ಪತಿಭಕ್ತಿಪರಾಯಣೆಯರೂ ಎಂಥ ಗಂಡಾಂತರಕ್ಕೀಡಾದರೂ ಸತೀಧರ್ಮವನ್ನು ಬಿಡದವರೂ, ಅತ್ತೆಮಾವಂದಿರಲ್ಲಿ ಭಕ್ತಿಯುಳ್ಳವರೂ ಆಗಿರಿ. ನಮ್ಮ ಪವಿತ್ರ ಹಿಂದೂಧರ್ಮವಾದರೂ ಇದನ್ನೇ ಹೇಳುವದಿಲ್ಲವೇ ?

---

# ಗೃಹಲಕ್ಷ್ಮಿ

## (೧)

ಮಾಧವರಾಯನು ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಕಲಿತು ಬೀ. ಏ. ಆಗಿದ್ದನು. ಅವನು ರಾಮಪುರದ ಇನಾಮದಾರನು. ಅವನ ತಂದೆಯಾದ ಗೋವಿಂದರಾಯನು ಬಹುದಿನಗಳಿಂದ ಗದಗಿನಲ್ಲಿಯೇ ವಾಸಮಾಡಿಕೊಂಡು ಇರುತ್ತಿದ್ದನು. ಗೋವಿಂದರಾಯನ ಮಗನು ಬೀ. ಏ. ವರ್ಗದಲ್ಲಿದ್ದಾಗಲೇ ಸಾವಿರಾರುರೂಪಾಯಿ ವರದಕ್ಷಿಣೆಯನ್ನು ತೆಗೆದುಕೊಂಡು ಆತನ ಮದುವೆ ಮಾಡಿಬಿಟ್ಟಿದ್ದನು. ಮಾಧವರಾಯನ ಹೆಂಡತಿಯು ಹತ್ತುಮಂದಿ ಹೆಣ್ಣುಮಕ್ಕಳಲ್ಲಿ ಒಡೆದು ಕಾಣುವಷ್ಟು ಸುಂದರಿಯಿದ್ದರೂ, ಈ ವಿವಾಹದಿಂದ ಆತನಿಗೆ ಮಾತ್ರ ಸುಖವೆನಿಸಿದ್ದಿಲ್ಲ. ತನ್ನಂತೆಯೇ ಕಾಲೇಜದಲ್ಲಿ ವಿದ್ಯಾಭ್ಯಾಸ ಮಾಡಿದ ಪದವೀಧರಳಾದ ಸುಶಿಕ್ಷಿತ ಪತ್ನಿಯು ಆತನಿಗೆ ಬೇಕಾಗಿದ್ದಳು. ಈ ವಿವಾಹವು ಧರ್ಮವಿವಾಹವಾಗಿದ್ದರೂ, ಪ್ರೇಮ(?) ವಿವಾಹವಾಗಿದ್ದಿಲ್ಲ. ಮಾಧವರಾಯನಿಗೆ ಗೃಹವ್ಯವಸ್ಥೆಯನ್ನು ಚೆನ್ನಾಗಿ ನೋಡಿಕೊಂಡು ಹೋಗುವ ಗೃಹಿಣಿಯಷ್ಟೇ ಲಭಿಸುವದು ಬೇಕಾಗಿದ್ದಿಲ್ಲ. ಆತನಿಗೆ ರಾಷ್ಟ್ರಾಭಿಮಾನದಿಂದ ಪ್ರೇರಿತಳಾದ, ರಾಷ್ಟ್ರೋನ್ನತಿಯನ್ನು ಮಾಡುವ, ರಾಷ್ಟ್ರಭಕ್ತಳು ಬೇಕಾಗಿದ್ದಳು. ಪತಿಯು ಮನೆಗೆ ಬಂದೊಡನೆಯೇ ಬಾಗಿಲದ ಮರೆಯಲ್ಲಿ ನಿಂತು ಪತಿಮುಖವನ್ನು ನೋಡಿ ಮನಸ್ಸಿನಲ್ಲಿಯೇ ಹಿಗ್ಗುತ್ತಿರುವ ಸಾಧ್ವಿಯು ಆತನಿಗೆ ಸೇರುತ್ತಿದ್ದಿಲ್ಲ. ಆದರೆ ಪತಿಯು ಮನೆಗೆ ಬಂದೊಡನೆಯೇ ಎದುರಿಗೆ ಹೋಗಿ ಹಸ್ತಾಂದೋಲನ ಮಾಡಿ ಚಹಾವನ್ನು ಕೊಟ್ಟು ಕೈಯಲ್ಲಿ ಕೈ ಹಾಕಿಕೊಂಡು ಹೂದೋಟದ ಕಡೆಗೆ ತಿರುಗಾಡಲಿಕ್ಕೆ ಹೋಗಲಿಚ್ಛಿಸುವ ಪ್ರಮದೆಯು ಬೇಕಾಗಿದ್ದಳು.

ಪಾಪ! ಸುಶೀಲೆಯು ಗೃಹವ್ಯವಸ್ಥೆಯನ್ನು ನೋಡಿಕೊಂಡು ಹೋಗಲಿಕ್ಕೆ ತಕ್ಕವಳಿದ್ದಳು. ಅವಳು ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿ ಪದವೀಧರೆಯೆನಿಸಿಕೊಳ್ಳದಿದ್ದರೂ, ಜೈಮಿನಿಭಾರತ, ತೊರವೆ ರಾಮಾಯಣ, ಮೊದಲಾದ ಕನ್ನಡ ಕಾವ್ಯಗಳನ್ನು ಓದಿ ತಿಳಿದುಕೊಳ್ಳುವಷ್ಟು ಶಿಕ್ಷಣವನ್ನು ಹೊಂದಿದ್ದಳು. ಆದರೆ

ಇಂಗ್ಲಿಷಭಾಷಾಜ್ಞಾನವಿಹೀನರ ಜನ್ಮವು ನಿರರ್ಥಕವಾದದ್ದೆಂದೆಣಿಸುವ-ಮಾಧವ ರಾಯನು, ತನಗೆ ಸುಶೀಲೆಯು ಪತ್ನಿಯಾದದ್ದನ್ನು ನೋಡಿ ದೈವವನ್ನು ನಿಂದಿಸುತ್ತ ತನ್ನ ಆಯುಷ್ಯವೇ ವ್ಯರ್ಥವಾಯಿತೆಂದು ತಿಳಿದು ಹೇಗೋ ಕಾಲಹರಣ ಮಾಡಹತ್ತಿದನು!

( ೨ )

ಮೇಲಿನ ಮಾತಿಗೆ ಈಗ ನಾಲ್ಕೈದು ವರ್ಷಗಳು ಕಳೆದು ಹೋಗಿವೆ. ಗೋವಿಂದರಾಯನು ತೀರಿಕೊಂಡು ಎರಡು ವರ್ಷಗಳಾಗಿವೆ. ಮನೆಯಲ್ಲಿ ನಡೆನುಡಿಯುವದರ ಸಲುವಾಗಿ ಸುಶೀಲೆಯು ಬಂದು ಒಂದು ವರ್ಷವಾಗಿರ ಬಹುದು. ಗೋವಿಂದರಾಯನ ಉತ್ಪನ್ನವು ಏಳೆಂಟುನೂರು ರೂಪಾಯಿಗಳದಿದ್ದರೂ, ಈಗಿನ ಅನಾವೃಷ್ಟಿಯ ಕಾಲದಲ್ಲಿ ಲಾವಣಿಯ ಹಣವು ಸರಿಯಾಗಿ ಬಾರದ್ದರಿಂದಲೂ, ನೀರಿನಂತೆ ದುಡ್ಡು ವೆಚ್ಚಮಾಡಿ ಮಗನಿಗೆ ವಿದ್ಯೆಗಲಿಸಿದುದರಿಂದಲೂ, ಒಬ್ಬನೇ ಒಬ್ಬ ಮಗನಾದ ಮಾಧವರಾಯನ ವಿವಾಹವನ್ನು ಬಹು ವಿಜೃಂಭಣೆಯಿಂದ ಮಾಡಿದುದರಿಂದಲೂ, ಆ ಹೊಲಗಳ ಮೇಲೆ ನಾಲ್ಕೈದು ಸಾವಿರದ ಸಾಲವಾಗಿ ಅವು ಸಾವುಕಾರರ ದವಡೆಯಲ್ಲಿ ಸಿಕ್ಕಿದ್ದವು. ಇನ್ನೂ ಎಂಟು ವರ್ಷಗಳ ವರೆಗೆ ಅವು ಮಾಧವರಾಯನ ಸ್ವಾಧೀನಕ್ಕೆ ಬರುವಂತೆ ಇದ್ದಿಲ್ಲ. ಮನೆಯು ಮಾತ್ರ ಆತನ ವಶದಲ್ಲಿತ್ತು. ಗೋವಿಂದರಾಯನು ಇರುವ ವರೆಗೆ ಇದಾವುದನ್ನೂ ಯಾರ ಲಕ್ಷ್ಯಕ್ಕೂ ತಾರಗೊಡದೆ, ಮನೆತನವನ್ನು ಹೇಗೋ ಸಾಗಿಸಿಕೊಂಡು ಹೋಗಿದ್ದನು. ಆದರೆ ಮಾಧವರಾಯನ ಕಡೆಗೆ ಮನೆತನದ ಚಾಲಕತ್ವವು ಬಂದಬಳಿಕ ಅವನಿಗೆ ಈ ಸ್ಥಿತಿಯೆಲ್ಲ ಗೊತ್ತಾಯಿತು. ಮನೆಯಲ್ಲಿ ಹೆಂಡತಿ, ಮುಪ್ಪಿನ ತಾಯಿ, ವಿಧವೆಯಾದ ಅಕ್ಕ ಮತ್ತು ತಾನು ಹೀಗೆ ನಾಲ್ಕುಜನರ ಸಂಸಾರವನ್ನು ಈಗಿನ ತುಟ್ಟಿಯ ಕಾಲದಲ್ಲಿ ಹೇಗೆ ಸಾಗಿಸಿಕೊಂಡು ಹೋದೇನೆಂದು ಆತನು ಎದೆಗುಂದಿದನು! ಮೊದಲೇ ವಿವಾಹಕ್ಕಾಗಿ ನೊಂದು ಹೋದ ಆತನ ಹೃದಯವು ಸಂಸಾರದ ಭಾರದಿಂದ ತಲ್ಲಣಿಸಹತ್ತಿತು. ಹೇಗಿದ್ದರೂ ಸಂಸಾರವನ್ನು ಸಾಗಿಸಿಕೊಂಡು ಹೋದ ಹೊರತು ಗತ್ಯಂತರವಿದ್ದಿಲ್ಲ. ಆದುದರಿಂದ ಉಪಜೀವನದ ಸಲುವಾಗಿ ನೌಕರಿಯನ್ನು ಹುಡುಕಹತ್ತಿದನು. ಆತನ ಲಕ್ಷ್ಯವೆಲ್ಲ ವರ್ತಮಾನಪತ್ರಗಳಲ್ಲಿರುವ " Wanted " ( ಬೇಕು )

ಎಂಬ ಪ್ರಕಟನೆಗಳ ಕಡೆಗೇ ಇತ್ತು! ಅವುಗಳಲ್ಲಿ ಬಹಳ ನೌಕರಿಗಳು ಮುಂಬಯಿ, ಪುಣೆ, ಮೊದಲಾದ ದೊಡ್ಡ ಊರುಗಳಲ್ಲಿಯೇ ಇದ್ದುದರಿಂದ ಅಷ್ಟು ದೂರ ಹೋಗುವದು ಸುಲಭಸಾಧ್ಯವಾಗಿದ್ದಿಲ್ಲ. ಆದರೂ ಹತ್ತು ಹನ್ನೆರಡು ಕಡೆಗೆ ಒಂದೆರಡು ರೂಪಾಯಿ ವೆಚ್ಚಮಾಡಿ ಅರ್ಜಿಗಳನ್ನು ಕಳಿಸಿದರೂ, ಎರಡು ಮೂರು ಕಡೆಗಳಿಂದ ಮಾತ್ರ ನಕಾರಾರ್ಥಕ ಉತ್ತರಗಳು ಬಂದವು. ಉಳಿದವುಗಳಿಗೆ ಉತ್ತರವೂ ಇಲ್ಲ! ಇದರಿಂದಂತೂ ಮಾಧವರಾಯನು ಹೌಹಾರಿ ಹೋದನು.

ಮಾಧವರಾಯನ ಈ ಸ್ಥಿತಿಯು ಮನೆಯೊಳಗಿರುವ ಎಲ್ಲರಿಗೂ ಗೊತ್ತಾಗಿತ್ತು, ಮಗನು ಸಂಸಾರದ ಭಾರದಿಂದ ಕೊರಗಹತ್ತಿದ್ದನ್ನು ನೋಡಿ ಮುದುಕಿಯು ಪೇಚಾಡಹತ್ತಿದಳು!



( ೩ )

ಒಂದು ದಿನ ಇಳಿಹೊತ್ತಿನ ಸಮಯ. ಮಾಧವರಾಯನು ನೌಕರಿಯ ಶೋಧದ ಸಲುವಾಗಿ ಹೊರಗೆ ಹೋಗಿದ್ದನು. ಮೂವರೂ ಹೆಂಗಸರು ಮಾತಾಡುತ್ತ ಕುಳಿತಾಗ ಮುದಿಕೆಯು ಸೊಸೆಯನ್ನು ಕುರಿತು-"ತಂಗೀ! ಸುಶೀಲೇ! ನೀನು ನಮ್ಮ ಮನೆಗೆ ಬಂದು ಏನು ಸುಖಬಟ್ಟೆವ್ವಾ? ನಿಮ್ಮ ಮನೆಯಲ್ಲಿ ಬೇಕಾದಷ್ಟು ಶ್ರೀಮಂತಿಕೆಯಿದೆ. ನೀನು ಇಲ್ಲಿ ಇಷ್ಟು ಕಷ್ಟಪಡುತ್ತಿದ್ದರೂ ಮಾಧವನು ನಿನ್ನನ್ನು ಸೇರುವದೇ ಇಲ್ಲ. ನಿನ್ನನ್ನು ನೋಡಿ ನನ್ನ ಜೀವವು ತಳಮಳಿಸುತ್ತಿದೆ. ನಮ್ಮ ಮನೆಗೆ ಬಂದು ನೀನು ಸುಖಬಡಲಿಲ್ಲವ್ವಾ!" ಎಂದು ಕಣ್ಣೀರು ಸುರಿಸಹತ್ತಿದಳು. ಇದನ್ನು ನೋಡಿ ಸುಶೀಲೆಯ ಕಣ್ಣುಗಳು ನೀರಿನಿಂದ ತುಂಬಿದವು! ಅವಳಿಗೆ ಗಂಡನು ತನ್ನನ್ನು ಪ್ರೀತಿಸುವದಿಲ್ಲವೆಂಬುದು ತಿಳಿದಿದ್ದರೂ, ಆ ವಿಷಯದಲ್ಲಿ ಅವಳು ಒಬ್ಬರ ಮುಂದೂ ಒಂದು ತುಟಿ ಎರಡು ಮಾಡಿದ್ದಿಲ್ಲ. ತನ್ನ ಮಾತೃಸದೃಳಾದ ಅತ್ತೆಯು ತನ್ನ ಸಲುವಾಗಿ ಮರಗುವದನ್ನು ನೋಡಿ ಅವಳ ಹೃದಯವು ದುಃಖದಿಂದಲೂ ಭಕ್ತಿಯಿಂದಲೂ ತುಂಬಿತು! ಆಗ ಅವಳು ದುಃಖವನ್ನು ನುಂಗಿಕೊಂಡು "ಅತ್ತೆಯವರೇ, ನೀವು ಹೀಗೇಕೆ ಮಾತಾಡುವಿರಿ? ತಮ್ಮ ಮತ್ತು ಅತ್ತಿಗೆಯವರ ಬಳಿಯಲ್ಲಿದ್ದ ನನಗೆ ನಿಶ್ಚಯವಾಗಿಯೂ ಹಡೆದತಾಯಿಯ ನೆನಪು ಕೂಡ ಆಗಿರುವದಿಲ್ಲ! ಇನ್ನು ಅವರಾದರೂ ನನ್ನನ್ನು ಪ್ರೀತಿಸುವದೇ ಹೊರತು, ಒಂದು ದಿವಸವೂ ಸಿಟ್ಟಿನ ಎರಡು ಮಾತುಗಳನ್ನೂ ಆಡಿಲ್ಲ. ಹೀಗಿದ್ದರೂ ನನಗೇ ಬಹಳ ಕಷ್ಟವಿದೆಯೆಂದು ತಾವು ಮರಗುವದನ್ನು ನೋಡಿ ದುಃಖವಾಗುತ್ತದೆ! ಇನ್ನು ಈಗಿನ ತುಟ್ಟಿಯ ಕಾಲದಲ್ಲಿ ಸಂಸಾರವನ್ನು ಸಾಗಿಸುವದಕ್ಕೆ ಅವರು ಮಾತ್ರ ಒಂದೇ ಸವನೇ ಕೊರಗಹತ್ತಿರುವರು! ಇಂಥ ಸ್ಥಿತಿಯಲ್ಲಿ ನಾವು ನಮ್ಮ ಗಂಡಸರಿಗೆ ತುಸುವಾದರೂ ನೆರವಾಗದಿದ್ದರೆ ಸಂಸಾರವು ಹೇಗೆ ಸಾಗಬೇಕು ?"

"ತಂಗೀ! ನಾವು ಏನು ನೆರವಾಗೋಣ? ನಮಗೆ-ಹೆಂಗಸರಿಗೆ-ಎರಡನೆಯವರ ಮನೆಯಲ್ಲಿದ್ದು ನೀರು ಹೊರುವದು ಇಲ್ಲವೆ ಅಡಿಗೆಮಾಡುವದು ಇವುಗಳ ಹೊರತು ಏನು ಬರುವದು!" ಎಂದು ಸುಶೀಲೆಯ ಅತ್ತಿಗೆಯು ಅಂದಳು.

**ಸುಶೀಲೆ:**-ಛೀ! ಅತ್ತಿಗೇ! ಅಂಥ ಉದ್ಯೋಗಗಳನ್ನು ಮಾಡುವದೇ ತಪ್ಪು, ನೀವು ನಮ್ಮ ಮನೆಯ ಹತ್ತರಿದ್ದ ಚೆನ್ನವ್ವನನ್ನು ನೋಡಿಲ್ಲವೇ? ಆಕೆಯು ರೇಶಿಮೆ

ಯನ್ನು ವ್ಯಾಪಾರಸ್ಥರಲ್ಲಿ ತಂದು, ಅದನ್ನು ಸುತ್ತಿ ಅವರಿಗೇ ಕೊಟ್ಟು, ವಾರಕ್ಕೆ ಮೂರುರೂಪಾಯಿಗಳನ್ನು ಗಳಿಸುವಳು. ಆಕೆಯ ಗಂಡನಾದ ಶಿವರುದ್ರಪ್ಪನಾದರೂ ಮಗ್ಗವನ್ನು ಹಾಕಿರುವದರಿಂದ ದಿನಕ್ಕೊಂದು ರೂಪಾಯಿಯಂತೆ ಗಳಿಸುವನಂತೆ! ನಾನೂ ನೀವೂ ಇಬ್ಬರೂ ಆ ಚೆನ್ನವ್ವನಂತೆ ರೀತಿಯ ಕೆಲಸವನ್ನು ಮಾಡಿದರೆ ವಾರಕ್ಕೆ ಆರೇಳು ರೂಪಾಯಿಗಳು ಸಿಗಬಹುದಲ್ಲವೇ ?

**ಅತ್ತಿಗೆ**:–ಅಹುದು. ಆದರೆ ಆ ಕೆಲಸವು ನಮಗೆ ಬಂದೀತೇ? ಆ ಕೆಲಸ ಮಾಡಲಿಕ್ಕೆ ಮನೆಯ ಕೆಲಸ ಬೊಗಸೆಗಳನ್ನು ಮಾಡಿಕೊಂಡ ಬಳಿಕ ವೇಳೆ ಉಳಿಯುವದಾದರೂ ಎಲ್ಲಿ?

**ಸುಶೀಲೆ**:–ಇಕೋ ನೋಡಿರಿ! ನಮ್ಮ ಹುಚ್ಚುತನವಿರುವದು ಇಲ್ಲಿಯೆ! ಆ ಕೆಲಸವೇನು ಬ್ರಹ್ಮವಿದ್ಯೆಯೇ ? ಮನಸ್ಸುಗೊಟ್ಟು ಮಾಡಹತ್ತಿದರೆ ಮನುಷ್ಯನಿಗೆ ಯಾವದು ಅಸಾಧ್ಯವು? ಇನ್ನು ನೀವು ಕೇಳುವ ಎರಡನೆಯ ಪ್ರಶ್ನೆಯಂತೂ ಬಹು ವಿಲಕ್ಷಣವಾಗಿದೆ. ಹೌದೇ ಸರಿ. ನಾವು ದಿನದಿನಕ್ಕೆ ನಾಲಿಗೆಯ ಸವಿಗೆ ಬೀಳುತ್ತ ಅಡಿಗೆಯಲ್ಲಿಯೇ ಹೆಚ್ಚು ಹೆಚ್ಚು ಸುಧಾರಣೆಮಾಡುತ್ತ ಹೋದರೆ, ಅದಕ್ಕೆ ಹಗಲಿನ ಹನ್ನೆರಡೇ ತಾಸುಗಳು ಸಾಲದೆ ಇನ್ನೆರಡು ತಾಸುಗಳು ಹೆಚ್ಚಿಗೆ ಬೇಕಾಗಬಹುದೆಂದು ನನಗೆ ಅನಿಸುತ್ತದೆ. ನೀವೇ ನೋಡಿರಿ. ಹಬ್ಬ ಹುಣ್ಣಿವೆಗಳು ಬಂದ ಕೂಡಲೇ ಇಪ್ಪತ್ತೆಂಟು ಪದಾರ್ಥಗಳನ್ನು ಮಾಡುವದರಲ್ಲಿಯೂ, ಕಸಮುಸುರೆಗಳನ್ನು ತೆಗೆಯುವದರಲ್ಲಿಯೂ ಎಲ್ಲ ದಿನವನ್ನೇ ನಾವು ಕಳೆದುಬಿಡುವದಿಲ್ಲವೇ? ನಮ್ಮ ಗಂಡಸರಾದರೂ ಸವಿ ಸವಿ ಪದಾರ್ಥಗಳನ್ನು ಬಹಳವಾಗಿ ಮಾಡಿ ಹಾಕುವ ಸ್ತ್ರೀಯರನ್ನೇ ವರ್ಣಿಸುತ್ತ, ಅಡಿಗೆಯನ್ನು ಮಾಡುವದೊಂದೇ ಸ್ತ್ರೀಯರ ಇತಿಕರ್ತವ್ಯವೆಂದೂ ಪರಮಾರ್ಥವೆಂದೂ ದೃಢವಾದ ಭಾವನೆಯಾಗುವಂತೆ ಮಾಡಹತ್ತಿದ್ದಾರೆ. ಇದರಿಂದ ಮನೆತನದ ತೊಂದರೆಯ ವೇಳೆಯಲ್ಲಿ ಗಂಡಸರಿಗೆ ನೆರವಾಗುವ ಭಾವನೆಯೇ ಸ್ತ್ರೀಯರಲ್ಲಿ ಹುಟ್ಟದಂತಾಗಿದೆ- ಇದರಮೇಲಿಂದ ಹೆಂಗಸರು ಅಡಿಗೆಯನ್ನು ಮಾಡಲೇಬಾರದೆಂದು ನಾನು ಹೇಳಿದೆನೆಂದು ಭಾವಿಸಬೇಡಿರಿ! ಮನುಷ್ಯನಿಗೆ ಊಟವು ನಾಲಿಗೆಯ ರುಚಿಯ ಸಲುವಾಗಿ ಇರುವದಿಲ್ಲ. ಶರೀರವನ್ನು ಪೋಷಿಸುವದಕ್ಕಾಗಿ ಇರುತ್ತದೆ. ಇದನ್ನು ಲಕ್ಷ್ಯದಲ್ಲಿ ತರಬೇಕು. ಇನ್ನೊಂದೇನಂದರೆ,ಶರೀರವನ್ನು ಪೋಷಿಸತಕ್ಕ ಸಾದಾ ಅಡಿಗೆಯನ್ನು ಮಾಡಲಿಕ್ಕೆ

ವೇಳೆಯೂ ತುಸು ಹಿಡಿಯುವದಲ್ಲದೆ ವೆಚ್ಚವೂ ಹೆಚ್ಚಾಗಲಾರದು. ಹಾಲಿನಲ್ಲಿ ಶರೀರವನ್ನು ಪೋಷಿಸತಕ್ಕ ಎಲ್ಲ ಪದಾರ್ಥಗಳಿವೆ. ಅಂದಬಳಿಕ ನಾವು ಹಾಲನ್ನು ಹೆಚ್ಚಿಗೆ ತೆಗೆದುಕೊಂಡು ಸಾದಾ ಅಡಿಗೆಯನ್ನು ಮಾಡಿಕೊಂಡು ಉಂಡರೆ ವೇಳೆಯೂ ದುಡ್ಡೂ ಉಳಿಯುವದಲ್ಲದೆ ಆರೋಗ್ಯವೂ ಲಭಿಸುವದು! ಇನ್ನು ಎರಡನೆಯ ವಿಷಯವು ಪುರಾಣಪುಣ್ಯಕಥೆಗಳದು. ಇವಾದರೂ ಈಗ ನಮ್ಮ ಭಗಿನಿಯರನ್ನು ನಿರುದ್ಯೋಗಿಗಳನ್ನಾಗಿ ಮಾಡುವ ಸಾಧನಗಳಾಗಿವೆ. ಬಡವರಾದ ನಾವು ಹಗಲಿನಂತಹ ಮಹತ್ವದ ವೇಳೆಯನ್ನು, ಪುರಾಪುಣ್ಯಕಥೆಗಳನ್ನು ಕೇಳುವದರಲ್ಲಿಯೇ ಕಳೆಯುವದಕ್ಕಿಂತ ರಾಟಿಯನ್ನಿಟ್ಟುಕೊಂಡು ನೂಲು ತೆಗೆದಾಗಲಿ ರೇಶಿಮೆಯ ಕೆಲಸವನ್ನು ಮಾಡಿಯಾಗಲಿ ನಾಲ್ಕು ದುಡ್ಡು ದೊರಕಿಸಿದರೆ, ಹಿಟ್ಟಿನಲ್ಲಿ ಉಪ್ಪು ಬೆರಸಿದಂತೆ ಗಂಡಸರಿಗೆ ತುಸುವಾದರೂ ಸಹಾಯ್ಯವಾಗುವದು. ಇದನ್ನುಬಿಟ್ಟು ಪುರಾಣಶ್ರವಣದ ನೆವದಿಂದ ಹೋಗಿ ಕುಳಿತು ನೆರೆಮನೆಯವರ ಹುಳುಕುಗಳನ್ನು ಹೊರಡಿಸಿ ಟೀಕಿಸುತ್ತ ಕಾಲಕಳೆಯುವ ನಮ್ಮ ಭಗಿನಿಯರಿಗೆ ದೇವರು ಯಾವ ನರಕವನ್ನು ಹೊಸದಾಗಿ ಸಿದ್ಧಬಡಿಸಹತ್ತಿರುವನೆಂಬದು ನನಗಂತೂ ತಿಳಿಯದು! ಹಗಲುಹೊತ್ತಿನಲ್ಲಿ ಉದ್ಯೋಗಮಾಡಿ ರಾತ್ರಿಯ ವೇಳೆಯಲ್ಲಿ ತಮ್ಮ ಮನೆಯ ಗಂಡಸರಿಂದ ರಾಮಾಯಣ ಮಹಾಭಾರತಾದಿಗಳನ್ನು ಓದಿಸಿ ಯಾಕೆ ಕೇಳಬಾರದು ! ಅತ್ತೆಯವರೇ! ತಾವು ನನ್ನನ್ನು ಹಡೆದ ತಾಯಿಗಿಂತ ಹೆಚ್ಚು ಪ್ರೀತಿಸುತ್ತಿರುವದರಿಂದ ನನಗೆ ತಿಳಿದ ಎರಡು ಮಾತುಗಳನ್ನು ತಮ್ಮ ಮುಂದೆ ಆಡಿದೆನು. ತಾವು ಹಿರಿಯರಿರುವಿರಿ. ನಾನೂ ಅತ್ತೆಗೆಯವರೂ ರೇಶಿಮೆಯನ್ನು ತೋಡುವ ಕೆಲಸವನ್ನು ಮಾಡೋಣವೇ? ನೀವು 'ಹೂ' ಎಂದರೆ ಚೆನ್ನವ್ವನು ರೇಶಿಮೆಯನ್ನು ತಂದು ಕೊಡುವದಲ್ಲದೆ, ತೋಡಲಿಕ್ಕೂ ಕಲಿಸುವೆನೆಂದು ಹೇಳಿದ್ದಾಳೆ. ನಾವು ಈ ಕೆಲಸ ಮಾಡಲಿಕ್ಕೆ ನಿಮ್ಮ ಒಪ್ಪಿಗೆಯುಂಟೇ?

ಸುಶೀಲೆಯು ಅತ್ತೆಯ ಮುಖವನ್ನು ನೋಡಹತ್ತಿದಳು.



( ೪ )

“ಈ ಮಾತುಗಳನ್ನು ಎಲ್ಲರೂ ಒಪ್ಪಲಿಕ್ಕೇಬೇಕು.” ಎಂದು ಅನ್ನುತ್ತ ಯಾರೋ ಬಾಗಿಲದೊಳಗೆ ಕಾಲಿಡಹತ್ತಲು, ಹೊರಳಿ ನೋಡಿ ಮಾಧವರಾಯ ನೆಂಬುದನ್ನು ತಿಳಿದು ಸುಶೀಲೆಯು ನಾಚಿಕೊಂಡು ಮುಗುಳುನಗೆಯಿಂದ ಪತಿ ಮುಖವನ್ನು ನೋಡುತ್ತ ಹತ್ತರದಲ್ಲಿದ್ದ ಕಂಬಕ್ಕೆ ಅಡ್ಡವಾಗಿನಿಂತಳು. ಸುಶೀಲೆಯ ಸಾದ್ಯಂತಭಾಷಣವನ್ನೆಲ್ಲ ಮಾಧವರಾಯನು ಹೊರಗೆ ಕಟ್ಟೆಯ ಮೇಲೆ ಕುಳಿತು ಕೇಳಿದ್ದನು. ಆತನಿಗೆ ತನ್ನ ಪತ್ನಿಯು ಇಷ್ಟು ವಿಚಾರವತಿಯಾಗಿರುವ ಳೆಂಬುದು ಕನಸುಮನಸಿನಲ್ಲಿ ಕೂಡ ತಿಳಿದಿದ್ದಿಲ್ಲ. ಇಂಥ ಸಾಧ್ವಿಯ ಸಂಗಡ ತಾನು ಇಷ್ಟು ದಿನಗಳವರೆಗೆ ಒಂದು ಪ್ರೇಮದ ಮಾತನ್ನು ಕೂಡ ಆಡದಿದ್ದದ್ದ ಕ್ಕಾಗಿ ಆತನು ಪಶ್ಚಾತ್ತಾಪಪಡಹತ್ತಿದನು. ಆಗ ಆತನು ಕ್ಷಮಾಯಾಚನೆಯ ದನಿ ಯಿಂದ:—ಸುಶೀಲೇ! ನೀನು ಆರ್ಯ ಸ್ತ್ರೀರತ್ನವು! ಗೃಹಲಕ್ಷ್ಮಿಯು!! ನಿಜ ವಾದ ಸುಶಿಕ್ಷಿತೆಯು!!! ಇಂಥ ನೀನು ದೈವಯೋಗದಿಂದ ದೊರೆತಿರಲು. ಹತ ಭಾಗ್ಯನಾದ ನಾನು ರತ್ನವನ್ನು ಕಲ್ಲೆಂದು ಭಾವಿಸಿದೆನಲ್ಲ! ಇದಕ್ಕಾಗಿ ನನ್ನನ್ನು ಕ್ಷಮಿಸುವೆಯಾ ?

**ಸುಶೀಲೆ:—** (ಅಧೋವದನನಾಗಿ ಎದುರಿಗೆ ನಿಂತಿರುವ ಪತಿಯನ್ನು ನೋಡಿ) ಛೀ ಇದೇನು? ಹಿರಿಯರ ಎದುರಿಗೆ ಹೀಗೆ ಮಾತಾಡುತ್ತಿರುವದು ನೆಟ್ಟಗಲ್ಲ !

ಹೀಗೆಂದವಳೇ ಸುಶೀಲೆಯು ತನ್ನ ಕೋಣೆಯಲ್ಲಿ ಹೋಗಿ ನಿಂತಳು. ಬಳಿಕ ಮಾಧವರಾಯನು ತಾಯಿಯ ಕಡೆಗೆ ನೋಡುತ್ತ “ಅವ್ವಾ! ಈ ಸುಶೀಲೆಯು ಕರ್ತವ್ಯವಿಹೀನನಾದ ನನ್ನ ಕಣ್ಣುಗಳಲ್ಲಿ ಒಳ್ಳೆಯ ಅಂಜನ ವನ್ನು ಹಾಕಿದಳು. ಅಕ್ಕಾ! ನೀನೂ ಅವಳೂ ಕೂಡಿಕೊಂಡೇ ರೇಶಿಮೆಯ ಕೆಲಸವನ್ನು ಮಾಡಿರಿ. ಶಿವರುದ್ರಪ್ಪನೂ ನಾನೂ ಬಾಲ್ಯಸ್ನೇಹಿತರು. ಆತನಲ್ಲಿ ನೇಯುವದನ್ನು ಕಲಿತು ಮನೆಯಲ್ಲಿ ಮಗ್ಗವನ್ನು ಹಾಕುವೆನು. ಆತನು ಈಗ ಮಗ್ಗದಿಂದ ದಿನಾಲು ೧ ರೂಪಾಯಿ ಗಳಿಸುವನಲ್ಲವೇ! ಇನ್ನು ತಿಂಗಳೊಪ್ಪತ್ತಿನ ಲ್ಲಿಯೇ ನಾನಾದರೂ ಆ ಕೆಲಸದಲ್ಲಿ ಜಾಣನಾಗಬಹುದೆಂಬ ಬಲವಾದ ನಂಬಿಗೆ ಯಿದೆ. ಮತ್ತು ಪ್ರತಿದಿವಸ ಸಂಜೆಯ ಊಟವಾದ ಬಳಿಕ ನಾನೇ ನಿಮ್ಮೆಲ್ಲರಿಗೆ

ರಾಮಾಯಣ ಭಾರತಗಳಲ್ಲಿಯ ಕಥೆಗಳನ್ನು ಓದಿ ಹೇಳುವ ಕ್ರಮವನ್ನಿಡುವೆನು. **ಶಾರದೆ**ಯಂತಹ ಮಾಸಪತ್ರಿಕೆಯೊಳಗಿನ ಕಥೆಗಳನ್ನೂ ಲೇಖಗಳನ್ನೂ ಕೂಡಿದಾಗ ಓದಿ ಹೇಳುವೆನು." ಎಂದು ಮಾತನಾಡಿ ತನ್ನ ಮೈಮೇಲಿನ ಅರಿವೆಗಳನ್ನು ತೆಗೆದಿಡುವವಕ್ಕಾಗಿ ಕೋಣೆಗೆ ಹೋಗಿ ಸುಶೀಲೆಯನ್ನು ಗಟ್ಟಿಯಾಗಿ ಅಪ್ಪಿಕೊಂಡು "ಸುಶೀಲೇ! ನೌಕರಿ ಸಿಗದೆ ನಿರಾಶನಾಗಿ ಪಣ ವಣ ತಿರುಗಾಡುತ್ತಿದ್ದ ನನಗೆ ನಿಶ್ಚಯವಾಗಿಯೂ ನೀನು ಒಳ್ಳೆಯ ಮಾರ್ಗವನ್ನು ತೋರಿಸಿಕೊಟ್ಟೆ. ನಿನ್ನ ಉಪದೇಶವಂತೆ ನಡೆದರೆ ನಿರುದ್ಯೋಗಿಗಳಾಗಿ ತಿರುಗಾಡುವ ಬಡಮನೆತನದಲ್ಲಿಯ ಪುರುಷಸ್ತ್ರೀಯರಿಬ್ಬರಿಗೂ ಬಹಳ ಉಪಯೋಗವಾಗುವದರಲ್ಲಿ ಸಂದೇಹವಿಲ್ಲ! ನೀನು ನನ್ನ ಗೃಹಲಕ್ಷ್ಮಿಯು." ಎಂದನು.

ಪತಿಯ ಬಾಹುಪಾಶವಲ್ಲಿ ಬದ್ಧಳಾದ ಸುಶೀಲೆಯು ತೀವ್ರವೇ ಹೇಗೋ ಬಿಡುಗಡೆ ಹೊಂದಿ ಹೊರಗೆ ಬಂದಳು !

ವಾಚಕರೇ ! ಸುಶೀಲಾಮಾಧವರ ಸಂಸಾರವು ತುಸು ದಿವಸಗಳಲ್ಲಿಯೇ ಸುಖಮಯವಾಯಿತೆಂದು ಬೇರೆ ಹೇಳಬೇಕೇ!



# ಮೂರ್ತಿಪೂಜೆ

## (೧)

ಸಹ್ಯಪರ್ವತದ ಒಂದು ತುದಿಯು ಸಮುದ್ರದ ದಂಡೆಯ ವರೆಗೆ ಹೋಗಿತ್ತು. ಗುಡ್ಡದ ಮೇಲೆ ಗಿಡಗಳು ದಟ್ಟವಾಗಿ ಬೆಳೆದಿದ್ದವು. ವನಸ್ಪತಿಗಳ ಜಟಿಲತೆಯಿಂದಲೂ ನೆರಳಿನ ಸಾಂದ್ರತೆಯಿಂದಲೂ ತಗ್ಗುದಿನ್ನೆಗಳೊಂದೂ ಕಾಣದಂತಾಗಿದ್ದವು. ಹಸುರಾದ ಜಮಖಾನಿಯನ್ನು ಹಾಸಿಧ ಆಸನದಂತೆ ಸಾಗರತೀರದ ಗುಡ್ಡದ ತುದಿಯು ಅಂದವಾಗಿ ತೋರುತ್ತಿತ್ತು. ಹರಯಕ್ಕೆ ಬಂದ ಪೆಣ್ಮಣಿಯು ಅಲಂಕೃತೆಯಾದಂತೆ ಬನಸಿರಿಯ ಬೆಡಗು ಬಲು ಸೊಗ ಸಿನದಾಗಿತ್ತು. ನೀಲವಾದ ಸಾಗರಜಲದಲ್ಲಿ ಶುಭ್ರವಾದ ತರಂಗಗಳು ಲೋಲಾ ಡುತ್ತಿದ್ದವು; ನೀಲವಾದ ಅಂತರಿಕ್ಷದಲ್ಲಿ ಶ್ವೇತವಾದ ತಾರಕೆಗಳು ಮಿಂಚುತ್ತಿ ದ್ದವು; ನೀಲವಾದ ಮರಳಿನಲ್ಲಿ ಸ್ವಚ್ಛವಾದ ಸಿಂಪುಗಳು ಒಪ್ಪುತ್ತಿದ್ದವು. ಇದರಿಂದ ಬನಸಿರಿಯು ತುಸು ಲಜ್ಜಿತೆಯಾದಳು. ಗಿಡಬಳ್ಳಿಗಳೊಳಗಿನ ಬಣ್ಣ ಬಣ್ಣದ ಹೂವುಗಳು ಗಾಳಿಯ ತೀಡುಪಿಕೆಯಿಂದ ಹಚ್ಚಹಸುರನ್ನ ಜಮ ಖಾನಿಯ ಮೇಲೆ ಹರಡಿದವು. ಅವುಗಳ ಕಂಪು ಎಲ್ಲ ಕಡೆಯಲ್ಲಿಯೂ ಇಡುಗಿತು.

ಆ ಗುಡ್ಡದ ತುದಿಯಲ್ಲಿ ಒಂದು ಎಲೆವನೆಯಿತ್ತು. ಅದರ ಮೇಲೆ ಹಸು ರಾದ ಬಳ್ಳಿಗಳು ದಟ್ಟವಾಗಿ ಹಬ್ಬಿ ಹೆಣೆದಂತಾಗಿದ್ದವು. ಆದರೆ ಎಲ್ಲಕಡೆಗೂ ಹಸುರೇ ಹಸುರಾದದರಿಂದ ಅದು ಒಡೆದು ಕಾಣುವಂತಿದ್ದಿಲ್ಲ. ಈ ಸಮಯ ದಲ್ಲಿ ಅದರೊಳಗಿಂದ ಒಬ್ಬ ಹರಯದ ಹುಡುಗನೂ ಹುಡುಗೆಯೂ ಹೊರ ಬಿದ್ದರು. ಅಲ್ಲಿಯ ಸುಗಂಧದ ಆಘ್ರಾಣದಿಂದ ಪ್ರಸನ್ನಚಿತ್ತಳಾದ ಹುಡು ಗೆಯು ಹುಡುಗನನ್ನು ಕುರಿತು:—

ಹುಡುಗೆ:— ಅಣ್ಣಾ ಈ ನೋಟವನ್ನು ನೋಡಿದೆಯಾ ? ಎತ್ತಕಡೆಗೆ ದಿಟ್ಟಿಯನ್ನು ಚಲ್ಲಿದರೂ ಮನಸ್ಸು ಅರಳುವದು. ಹೀಗಿದ್ದರೂ ನಿನ್ನ ಬಗೆಯ ದುಗುಡವೇ ದೂರಾಗುವದಿಲ್ಲವಲ್ಲ ? ಇಲ್ಲಿ ನಮಗೆ ಯಾತರ ಕೊರತೆಯಿದೆ ?

ಹುಡುಗ:— ತಂಗೀ, ಯಾಕೋ ಏನೋ! ಅಪ್ಪನು ಹೋಗಿ, ಇಂದಿಗೆ ಮೂರು ವರುಷಗಳಾದವು; ಅಂದಿನಿಂದ ನನ್ನ ಮನಸ್ಸಿಗೆ ಸೊಗಸೇ ಇಲ್ಲ! ಅಪ್ಪನು ತೀರಿದಾಗ ನಾನು ಹತ್ತುವರುಷದವನಿದ್ದೆನು. ಆದರೆ ಅಪ್ಪನ ಅಕ್ಕರೆಯಿಂದ ನನಗೆ ದುಃಖದ ಅರಿವೇ ಆಗಿಲ್ಲ! **जातस्य मरणं ध्रुवम्** । ಎಂಬ ತತ್ತ್ವವನ್ನು ಪರಮಪೂಜ್ಯರಾದ ಪರಶುರಾಮ ಮಹರ್ಷಿಗಳು ಪ್ರತಿದಿನವೂ ನನಗೆ ಬೋಧಿಸುತ್ತಾರೆ. ಅದು ನನಗೆ ಚೆನ್ನಾಗಿ ತಿಳಿಯುತ್ತದೆ; ಮನವರಿಕೆಯೂ ಗಿದೆ. ನನಗೆ ತಿಳಿಯಲಿಕ್ಕೆ ಹತ್ತಿದಾಗಿನಿಂದ ಇಂತಹ ಎಷ್ಟೋ ಉದಾಹರಣೆಗಳನ್ನು ನಾನು ಕಣ್ಣಾರೆ ಕಾಣುತ್ತಲಿದ್ದೇನೆ. ಈ ಸೃಷ್ಟಿಸೌಂದರ್ಯವನ್ನು ಅವಲೋಕಿಸಿ ನಾನು ನಿತ್ಯವೂ ಪುಲಕಿತನಾಗುತ್ತೇನೆ. ಮೇರೆದಪ್ಪಿದ ಈ ವಾರಿನಿಧಿಯನ್ನು ನಿರೀಕ್ಷಿಸಿದ ಕೂಡಲೆ, ಮಾನವಜೀವನದ ಅಮರ್ಯಾದಿತ್ವವು ನನ್ನ ಕಣ್ಣೆದುರಿಗೆ ಕಟ್ಟುತ್ತದೆ. ಆದರೇನ ಮಾಡಲಿ? ಮನಸ್ಸಿಗೆ ಮಾತ್ರ ಶಾಂತತೆಯಿಲ್ಲ! ಸ್ಥಿರತೆಯಿಲ್ಲ! ಎಲ್ಲವೂ ತಿಳಿಯುತ್ತದೆ. ಆದರೆ ಏನು ಫಲ? ತಿಳಿದಂತೆ ಹೊಳೆಯಲೊಲ್ಲದು! ಯಾವತರದ ಕೊರತೆಯೂ ಇಲ್ಲ. ಎಲ್ಲ ತರದ ಅನುಕೂಲತೆಯೂ ಇದೆ! ಕಕ್ಕುಲತೆಯಿಂದ ನೋಡುವ ಕಳಕಳಿಯ ತಂಗಿಯೂ ಇರುತ್ತೀ! ಪರಶುರಾಮಮಹರ್ಷಿಗಳು ಸರ್ವಸಿದ್ಧಿಪ್ರದಾಯಕವಾದ ಉಪದೇಶವನ್ನು ಮಾಡಲು ಸಿದ್ಧರಿದ್ದಾರೆ! ಇಷ್ಟೆಲ್ಲ ಇದ್ದರೂ ಪ್ರಯೋಜನವೇನು? ನನಗಂತೂ ಏನೋ ಮರೆಮರೆತಂತೆ ಆಗಿದೆ! ಹಿಡಿದೂ ಬಿಟ್ಟೊ ಹಿಡಿದೂ ಬಿಟ್ಟೊ ಎನಿಸುತ್ತದೆ!

ಹುಡುಗೆ:— ಅಣ್ಣಾ, ನೀನು ತಪಸ್ವಿಯುಲ್ಲವೇ? ತಿಳಿದವನಲ್ಲವೇ? ಹೀಗಿದ್ದು ಯಾತರ ಚಿಂತೆಯು ಮನಸ್ಸಿಗೆ ಚುಚ್ಚುತ್ತಿದೆಯೆಂಬುದು ನಿನಗೇಕೆ ತಿಳಿಯಬಾರದು? ಸ್ವರ್ಗೀಯವಾದ ಈ ಸೌಖ್ಯವು ನಿನ್ನ ಮನಸ್ಸಿಗೆ ಸಮಾಧಾನವನ್ನು ಯಾಕೆ ಕೊಡುವದಿಲ್ಲ? ಮನಸ್ಸಿನ ಔದಾಸೀನ್ಯವನ್ನು ಕಳೆದುಕೊಳ್ಳಲು ಒಂದೂ ಉಪಾಯುವು ನಿನಗೆ ತೋಚುವದಿಲ್ಲವೇ?

ಹುಡುಗ:— ತಂಗೀ, ಏನ ಹೇಳಲಿ! ಒಡಹುಟ್ಟಿದ ಅಕ್ಕರೆಯ ತಂಗಿಯಾದ ನಿನ್ನ ಮುಂದೆ ಬಿಚ್ಚಿಹೇಳದೆ ಇನ್ನಾರಿಗೆ ಹೇಳಲಿ? ಪ್ರೇಮಾಭಾವದ ಮೂಲಕವಾಗಿ ನನ್ನ ಮನಸ್ಸು ಉದಾಸವಾಗಿದೆ! ನೀನು ಅಮಿತವಾಗಿ ನನ್ನನ್ನು

ಪ್ರೀತಿಸುತ್ತೀಯೆಂಬುದನ್ನು ಚೆನ್ನಾಗಿ ಬಲ್ಲೆನು. ನಿನ್ನ ಮೇಲೆ ನನ್ನ ಮಮತೆಯೂ ದರೂ ಪೂರ್ಣವಾಗಿದೆ. ಆದರೆ ಅವ್ವನು ಸತ್ತ ಬಳಿಕ ನನ್ನ ಹೃದಯವು ತೆರವಾಗಿದೆ. ಅದು ಇನ್ನೂ ತುಂಬಿಲ್ಲ ! ತಂಗೀ, ಸಿಟ್ಟಾಗಬೇಡ. ನೀನಿನ್ನೂ ಚಿಕ್ಕವಳು. ಇಪರ ಇಂಗಿತವು ಈಗಲೇ ನಿನಗೆ ಹೇಗೆ ತಿಳಿಯಬೇಕು ? ನನ್ನ ಅಂತಃಕರಣಸಾಗರದ ತರಂಗಗಳನ್ನೂ, ವಿಚಾರಪ್ರವಾಹದ ಅಲ್ಲೋಲಕಲ್ಲೋಲಗಳನ್ನೂ ಮಾತುಗಳಿಂದ ಬಣ್ಣಿಸಲಾರೆನು !

ಆ ತರುಣನು ನಿಟ್ಟುಸಿರ ಬಿಟ್ಟನು. ಪರಶುರಾಮ ಮಹರ್ಷಿಯ ಪೂಜಾಸಾಹಿತ್ಯಗಳನ್ನು ತರುವ ವೇಳೆಯು ಸಮೀಪಿಸಿತ್ತು. ಆದುದರಿಂದ ಆ ಮಾತನ್ನು ಅಷ್ಟಕ್ಕೇ ಮುಗಿಸಬೇಕಾಯಿತು. ಹುಡುಗನು ಆಶ್ರಮವನ್ನು ಹೊಕ್ಕನು. ಹುಡುಗೆಯು ಮುಂದಿನ ಕೆಲಸಕ್ಕೆ ತೊಡಗಿದಳು.



( ೨ )

ಪರಶುರಾಮ ಮಹರ್ಷಿಗಳ ಆಶ್ರಮವು. ಪರ್ಣಶಾಲೆಯ ಸುತ್ತು ಮುತ್ತಲೂ ಶಿಷ್ಯರು ಹಲವು ಬಗೆಯ ಹರಟೆಗಳನ್ನು ಹೊಡೆಯುತ್ತಿದ್ದರು. ಗುಡ್ಡದಲ್ಲೊಂದು ಗವಿಯಿತ್ತು. ಆ ಗವಿಯಲ್ಲಿ ದೇವಾಧಿದೇವನಾದ ಶ್ರೀವಿಷ್ಣುವಿನ ಮೂರ್ತಿಯಿತ್ತು. ಆ ಶ್ರೀವಿಷ್ಣುವಿನ ಪಾದಗಳ ಮೇಲೆ ನೆತ್ತರದ ಹನಿಗಳನ್ನು ಕೆಡವಿದವನ ಬೇಡಿಕೆಗಳೆಲ್ಲವೂ ಕೈಗೂಡುವವೆಂದು ಒಬ್ಬ ಶಿಷ್ಯನು ಹೇಳಿದನು. ಅವನು ಜನರ ಬಾಯಿಂದ ಈ ಕಥೆಯನ್ನು ಕೇಳಿದ್ದನಂತೆ. ಉಳಿದ ಶಿಷ್ಯರಿಗೆ ಈ ಮಾತು ದಿಟವೆನಿಸಲಿಲ್ಲ. 'ಇಷ್ಟರಿಂದಲೇ ಇಷ್ಟಗಳೆಲ್ಲ ಪೂರ್ಣವಾಗುತ್ತಿದ್ದರೆ, ಅನೇಕ ಅನರ್ಥಗಳು ಒದಗಬಹುದು; ಸ್ವಾರ್ಥಗಳನ್ನು ಸಾಧಿಸುವದಕ್ಕಾಗಿ ಇಷ್ಟು ಅತ್ಯಾಚಾರವನ್ನು ಮಾಡಲು ಯಾರೂ ಹಿಂದೆ ಮುಂದೆ ನೋಡಲಿಕ್ಕಿಲ್ಲ ! ಎಂದು ಮುಂತಾಗಿ ಅವರು ವಾದಿಸಿದರು. ಹೀಗೆ ಈ ಹಾಕಾಟವು ಒಳ್ಳೆಯ ಹುರುಪಿನಿಂದ ನಡೆದಿತ್ತು.

ಪರಶುರಾಮ ಮಹರ್ಷಿಗಳು ಹೊರಗೆ ಬಂದರು. ವಾದವಿವಾದದ ಕಾರಣವನ್ನು ಬೆಸಗೊಂಡರು. ಎರಡೂ ಪಕ್ಷಗಳನ್ನು ಶಾಂತರೀತಿಯಿಂದ ಕೇಳಿಕೊಂಡು ಹೀಗೆ ಅಪ್ಪಣೆಕೊಡಿಸಿದರು.

ಪರಶುರಾಮ:—ಬಾಲಕಲೇ, ಕೇಳಿರಿ. ದೇವರು ಸರ್ವವ್ಯಾಪಿಯು. ನೀವು ನೋಡುವ ಎಲ್ಲಕಡೆಯಲ್ಲಿಯೂ ಅವನಿದ್ದಾನೆ. ಆದರೆ ಅವನನ್ನು ಕಾಣುವದು ಮಾತ್ರ ನಿಮ್ಮ ಯೋಗ್ಯತೆಯನ್ನವಲಂಬಿಸಿದೆ. ನಾವು ಮೂರ್ತಿಯನ್ನು ಯಾಕೆ ಪೂಜಿಸಬೇಕು? ಅದು ಕೇವಲ ಕಲ್ಲೆಂದು ತಿಳಿಯುತ್ತಿದ್ದರೆ ನಿಮ್ಮ ಪಾಲಿಗೆ ಅದು ಕಲ್ಲೇ ! ಶುದ್ಧಭಾವನೆಯಿಂದ ನೀವು ಅಲ್ಲಿ ದೇವತ್ವವನ್ನು ಆವಾಹಿಸಿದರೆ, ಅವನು ಅಲ್ಲಿಯೇ ನಿಮಗೆ ಸಿಗುವನು. ಈ ಭಾವನೆಯನ್ನು ತಂದುಕೊಳ್ಳಲು ಮೂರ್ತಿಯು ಸಾಧಕವು. ತಿಳಿದವರಿಗೂ ತಿಳಿಯದವರಿಗೂ ಮೂರ್ತಿಪೂಜೆಯು ಸರಿಯಾಗಿಯೇ ಸನ್ಮಾರ್ಗಬೋಧಕವು. ಆದರೆ ಮೂರ್ತಿಪೂಜೆಯನ್ನು ಮಾಡುವಾಗ ಸಂಕುಚಿತಭಾವನೆಯು ಸರಿಯಾದದ್ದಲ್ಲ. ಅದನ್ನು ಬಿಟ್ಟು ಇತರತ್ರ ದೇವರಿಲ್ಲವೆಂದು ತಿಳಿಯುವದು ತಪ್ಪು. ಸಂಸಾರ ನಿರ್ವಹಣದ ಹಲವು ಬಗೆಯ ಹೋರೆಗಳನ್ನು ಮಾಡುವಂತೆ, ನಿಯಮಿತಕಾಲದಲ್ಲಿ ನಿಯಮಿತ ಸ್ಥಳದಲ್ಲಿ ನಿಯಮಿತರೀತಿಯಿಂದ ಪೂಜೆಯನ್ನು ಪೂರಯಿಸಿ, ಮಿಕ್ಕೆಡೆಗಳಲ್ಲಿ

ಸಿಕ್ಕಂತೆ .ನಡೆಯುವವರನ್ನು ಯಾವ ವರ್ಗದಲ್ಲಿ ಎಣಿಸಬೇಕೇ ತಿಳಿಯದು. ಪ್ರತಿಯೊಂದು ಕಾರ್ಯವನ್ನು ಮಾಡುವಾಗಲೂ ದೇವರ ನೆನಪಿರಬೇಕು. ಇದನ್ನು ಸಾಧಿಸುವವಕ್ಕಾಗಿಯೇ ಮೂರ್ತಿಪೂಜೆಯು ಬೇಕು. ಅದನ್ನು ಮೇಲೆ ಹೇಳಿದಂತೆ ಮಾಡಬೇಕು. ಇರಲಿ. ಇದು ದೊಡ್ಡ ವಿಷಯ. ಸಂದೇಹಗಳನ್ನೆಲ್ಲ ಸಾಧಾರಣವಾಗಿ ದೂರಮಾಡಬಲ್ಲೆನು. ಆದರೂ ಪ್ರಕೃತ ವಿಷಯದ ಅವಗಾಹನೆಗೆ ಇಷ್ಟು ತಿಳಿವಳಿಕೆಯು ಸಾಕು.

ದೇವರು ತ್ಯಾಗದಿಂದ ಸಂತುಷ್ಟನಾಗುತ್ತಾನೆ. ಪವಿತ್ರವಾದ ಮನೋರಥಗಳನ್ನು ಸಾಧಿಸುವದಕ್ಕಾಗಿ ಮಾಡುವ ತ್ಯಾಗದ ಬೆಲೆಯು ಬಲು ಹೆಚ್ಚಿನದು. ಈಗಿನ ಜನರಿಗೆ ಸ್ವಾರ್ಥದ ಅರ್ಥವೇ ತಿಳಿಯದು. ನಿಜವಾದ ಸ್ವಾರ್ಥವೇ ಮನುಷ್ಯನ ಧ್ಯೇಯವಾಗಿರಬೇಕು. ಆದರೆ ಈಗ ಸ್ವಾರ್ಥದ ಅರ್ಥವೇ ಕೆಟ್ಟು ಹೋಗಿದೆ. ಲೋಭಾದಿಗಳಿಂದ ಮಾಡುವ ತ್ಯಾಗವು ತ್ಯಾಗವಲ್ಲ. ನಾನು ಹೇಳಿದಂತೆ ನಿಜವಾದ ಸ್ವಾರ್ಥಕ್ಕಾಗಿ ತ್ಯಾಗವನ್ನು ಮಾಡಬೇಕು; ಇಲ್ಲವೆ ಪರಾರ್ಥಕ್ಕಾಗಿ ತ್ಯಾಗವನ್ನು ಮಾಡಬೇಕು. ಅತ್ಯಂತ ಸೂಕ್ಷ್ಮರೀತಿಯಿಂದ ವಿಚಾರಮಾಡಿದರೆ ಪರಾರ್ಥವೂ ಸ್ವಾರ್ಥವೇ. ಈಗ ಸ್ವಾರ್ಥದ ಅರ್ಥವೇ ಕೆಟ್ಟುಹೋಗಿರುವದರಿಂದ ' ನಿಜವಾದ ಸ್ವಾರ್ಥ ' ವೆಂಬ ಶಬ್ದವನ್ನು ಉಪಯೋಗಿಸಬೇಕಾಯಿತು. ಇರಲಿ. ಇಂತಹ ತ್ಯಾಗವೇ ಶ್ರೇಷ್ಠವು. ಆ ಗವಿಯೊಳಗಿನ ಶ್ರೀವಿಷ್ಣುವೇ ಏಕೆ ? ಈ ತ್ಯಾಗಭಾವನೆಯಿಂದ ನೀವು ಯಾವ ಕಲ್ಲಿಗೆ ನಡಕೊಂಡರೂ ನಿಮ್ಮ ಇಚ್ಛಿತಗಳು ನೆರವೇರುವದರಲ್ಲಿ ಸಂದೇಹವೇ ಇಲ್ಲ. ಪವಿತ್ರವಾದ ಉದ್ದೇಶದಿಂದ ಆತ್ಮತ್ಯಾಗವನ್ನು ಮಾಡುವವನ ಬಯಕೆಗಳನ್ನು ಈಡೇರಿಸಲು ಪರಮಾತ್ಮನು ಯಾವಾಗಲೂ ಸಿದ್ಧನಿರುತ್ತಾನೆ. ಇದನ್ನು ಕಲಿಯುವದೂ ಸಾಧಿಸುವದೂ ಮೂರ್ತಿಪೂಜೆಯ ಇಂಗಿತವು.

ಮಹರ್ಷಿಗಳ ವಚನಾಮೃತವನ್ನು ಸುರಿದು ಎಲ್ಲರೂ ಆನಂದಿತರಾದರು. ಆ ಶಿಷ್ಯಸಮೂಹದಲ್ಲಿ ನಮ್ಮ ಬಾಲಿಕೆಯೂ ಇದ್ದಳು. ಅಣ್ಣನ ಔದಾಸೀನ್ಯದಿಂದ ಅವಳಿಗೆ ಅಸಮಾಧಾನವಾಗಿತ್ತು. ಮೇಲಿನ ಗುರೂಪದೇಶದಿಂದ ಅವಳ ಮನಸ್ಸಿನಲ್ಲಿ ಯಾವದೋ ಒಂದು ಕಲ್ಪನೆಯು ನೆಲೆಯೂರಿತು. ಶುದ್ಧಮನಸ್ಸಿನಿಂದಲೂ ಉದಾತ್ತಕಲ್ಪನೆಯಿಂದಲೂ ಅವಳ ಕಣ್ಣುಗಳು ಹೊಳೆಯಹತ್ತಿದವು. ಹಂಚಿಕೆಯು ಹೊಳೆಯಿತೆಂಬ ಹರುಷದಿಂದ ಹುರುಪುಗೊಂಡು ಹೊರಹೊರಟಳು.

( ೩ )

ಸಂಧ್ಯಾಕಾಲವು ಮೀರಿತ್ತು. ಆಕಳುಗಳು ಮೇದು ಆಶ್ರಮಕ್ಕೆ ತಿರುಗಿ ಬಂದಿದ್ದವು. ಶಿಷ್ಯರು ತಮ್ಮ ತಮ್ಮ ಕೆಲಸಗಳಲ್ಲಿದ್ದರು. ಕರುಗಳು ಹಂಬಾ ಹಂಬಾ ಎಂದು ಒದರಿ ತಾಯಂದಿರಿಗೆ ಸ್ವಾಗತವನ್ನು ಮಾಡುತ್ತಿದ್ದವು. ಪರಶುರಾಮಮಹರ್ಷಿಗಳು ಸಮಾಧಿಸುಖದ ದಿವ್ಯಾನಂದವನ್ನು ಅನುಭವಿಸುತ್ತಿದ್ದರು. ಈ ಸಮಯದಲ್ಲಿ ಗುಡ್ಡದ ಓರೆಯೊಳಗಿನ ಗುಹೆಯಲ್ಲಿಯ ಶ್ರೀವಿಷ್ಣುವಿನ ಮೂರ್ತಿಯ ಮುಂದೆ ಬಾಲಿಕೆಯೊಬ್ಬಳು ನಿಂತುಕೊಂಡಿದ್ದಳು. ಕಣ್ಣುಗಳನ್ನು ಮುಚ್ಚಿದ್ದಳು; ಕೈಗಳನ್ನು ಜೋಡಿಸಿದ್ದಳು.

ಹುಡುಗಿ:—ದೇವಾಧಿದೇವಾ, ನಮ್ಮ ಅಣ್ಣನಿಗೆ ಸುಖವನ್ನು ಕೊಡು. ಅವನ ಮನಸ್ಸಿನೊಳಗಿನ ಚಿಂತೆಯನ್ನು ದೂರಮಾಡು. ಅವನ ಹೃದಯದೊಳಗಿನ ತೆರವಾದ ಸ್ಥಳವನ್ನು ಪ್ರೇಮದಿಂದ ತುಂಬು. ಇದಕ್ಕಾಗಿ ನನಗೆ ಬೇಕಾದಷ್ಟು ಕಷ್ಟನಷ್ಟಗಳು ಬಂದರೂ ಬರಲಿ. ನಮ್ಮ ಅಣ್ಣನ ಸೌಖ್ಯಕ್ಕಾಗಿ ಆತ್ಮತ್ಯಾಗವನ್ನು ಮಾಡಲು ನಾನು ಮನಃಪೂರ್ವಕವಾಗಿ ಸಿದ್ಧಳಿದ್ದೇನೆ.

ಇಷ್ಟು ಮಾತನಾಡಿ ಉಡಿಯೊಳಗಿಂದ ಚೂರಿಯೊಂದನ್ನು ಹೊರಗೆ ತೆಗೆದಳು. ಮತ್ತು ಎಡಗೈಯ ಕಿರಿಬೆರಳನ್ನು ಕತ್ತರಿಸಿ ಶ್ರೀವಿಷ್ಣುಪಾದಗಳ ಮೇಲೆ ರಕ್ತಬಿಂದುಗಳನ್ನು ಕೆಡವಿದಳು. ಕೂಡಲೆ ಗುಡುಗಿನ ಗದ್ದರಣೆಯಾಯಿತು ! ಕೋಲ್ಮಿಂಚಿನ ಸೆಳೆಯಂತೆ ತೇಜವು ಹರಡಿತು. ಕೈಯೊಳಗಿನ ಚೂರಿಯು ಕೆಳಗೆ ಬಿತ್ತು ! ನೆತ್ತರವು ಹರಿಯುವದು ಕಟ್ಟಾಯಿತು ! ಕಡಿದ ಬೆರಳು ಮೊದಲಿನಂತೆ ಸರಿಯಾಗಿಯೇ ಇತ್ತು ! ಮುಂದಿನ ಶಬ್ದಗಳು ಗವಿಯತುಂಬ ಪ್ರತಿಧ್ವನಿತವಾದವು ! " ವತ್ಸೇ, ನಿನ್ನ ಮನೋರಥವು ಪೂರ್ಣವಾಗುವದು. ಚಿಂತೆ ಮಾಡಬೇಡ. ನಿನ್ನ ಅಣ್ಣನು ಸಂಪೂರ್ಣ ಸುಖಿಯಾಗುವನು. "

ಬಾಲಿಕೆಯು ಕಣ್ದೆರೆದಳು. ಎಲ್ಲವೂ ಮೊದಲಿನಂತೆ ಇತ್ತು. ಮೊದಲಿದ್ದ ಸ್ಥಿತಿಯಲ್ಲಿ ಸ್ವಲ್ಪವೂ ಹೆಚ್ಚುಕಡಿಮೆ ಇದ್ದಿಲ್ಲ, ಆದರೆ ಆ ಅಶರೀರ ಶಬ್ದಗಳು ಮಾತ್ರ ಆಕೆಯ ಕಿವಿಯಲ್ಲಿಯೂ ಮನದಲ್ಲಿಯೂ ಗಂಟೆಯಂತೆ ಗಣಗಣಿಸುತ್ತಿದ್ದವು. ಆ ದೈವಿಕ ಸಂದೇಶದ ಮೇಲೆ ಅವಳ ನಂಬಿಗೆಯು ಪೂರ್ಣವಾಗಿತ್ತು. ಆ ಮಾತುಗಳು ಎಂದೂ ಸುಳ್ಳಾಗಲಾರವೆಂದು ಅವಳು ಖಂಡಿತವಾಗಿ

ತಿಳಿದಿದ್ದಳು. ಆದದರಿಂದ ಬಯಕೆಯು ಕೈಗೂಡಿತೆಂದು ಸಂತುಷ್ಟಳಾದಳು. ಉಲ್ಲಾಸದಿಂದ ಪರ್ಣಶಾಲೆಯ ಕಡೆಗೆ ನಡೆದಳು.

ಗುಡ್ಡದ ತುದಿಯ ಬುಡದಲ್ಲಿ ಬಂದಳು. ಇನ್ನು ಮೇಲೆ ಹತ್ತತಕ್ಕವಳು. ಇಷ್ಟರಲ್ಲಿ ಸಹಜವಾಗಿ ಕಡಲಿನ ಕಡೆಗೆ ನೋಡಿದಳು. ಹಿಟ್ಟು ಚಲ್ಲಿದಹಾಗೆ ಬೆಳದಿಂಗಳು ಬಿದ್ದಿತ್ತು. ಬಿಳಿಯ ತೆರೆಗಳು ಸುಳಿದಾಡುತ್ತಿದ್ದವು. ಆ ಅಲೆ ಪಗಳ ಮೇಲೆ ಅಲೆಯುತ್ತಲೂ ಒಲೆಯುತ್ತಲೂ ಒಂದು ಚಿಕ್ಕ ನೌಕೆಯು ತೇಲಾಡುತ್ತ ಸಾಗಿತ್ತು. ಅದು ದಂಡೆಯ ಕಡೆಯಿಂದ ದೂರ ದೂರ ಸಾಗಿತ್ತು. ಆ ಡೋಣೆಯಲ್ಲಿ ಸುಂದರರಾದ ತರುಣತರುಣಿಯರಿಬ್ಬರು ಕುಳಿತಿದ್ದರು. ಯುವಕನು ಯುವತಿಯ ಹೆಗಲ ಮೇಲೆ ಕೈಹಾಕಿದ್ದನು. ಈ ಹುಡುಗಿಯು ದಿಟ್ಟಿಸಿ ನೋಡಹತ್ತಿದಳು. ನೌಕೆಯೊಳಗಿನ ತರುಣಿಯು ಅಂತ್ಯಂತ ಸುಂದರಿ ಯಾಗಿದ್ದಳು. ಆದರೆ ಈ ಹುಡುಗಿಗೆ ಅವಳ ಗುರುತು ಹತ್ತಲಿಲ್ಲ. ಯುವಕನು ಸಹಜವಾಗಿಯೇ ಹಿಂದಿರುಗಿ ನೋಡಿದನು. ಕೂಡಲೆ ಈ ಹುಡುಗಿಯು ಅವ ನನ್ನು ಗುರುತಿಸಿದಳು. ಅವನು ಅವಳ ಅಣ್ಣನೇ ಆಗಿದ್ದನು.

ದೊಡ್ಡ ದನಿಯಿಂದ ಬಿಕ್ಕಿ ಬಿಕ್ಕಿ ಅಳುತ್ತಲೇ ಹುಡುಗಿಯು ಆಲ್ಪರೆದಳು. " ಅಣ್ಣಾ, ನನ್ನನ್ನು ಒಬ್ಬಳನ್ನೇ ಇಲ್ಲಿ ಬಿಟ್ಟು ಎಲ್ಲಿಗೆ ಹೋಗುತ್ತಿರುವೆ ! "

ಆದರೆ ಆ ದೋಣಿಯು ದೂರದಲ್ಲಿತ್ತು. ಆದದರಿಂದ ಹುಡುಗಿಯ ಆರ್ತ ಸ್ವರವು ಆ ಹುಡುಗನಿಗೆ ಕೇಳಲಿಲ್ಲ. ಅವಳ ಕಣ್ಣೊಳಗಿಂದ ಅಶ್ರುಗಳು ಸುರಿಯ ಹತ್ತಿದವು ; ಚಿತ್ತವು ವ್ಯಾಕುಲಿತವಾಯಿತು.

"ಹಾಯ! ಹಾಯ! ದೇವಾ!" ಎಂದು ಚೀರುತ್ತಲೇ ಉಸುಬಿನಮೇಲೆ ಬಿದ್ದು ಕೊಂಡಳು. ಪರಶುರಾಮಮಹರ್ಷಿಗಳು ಅಲ್ಲಿಯೇ ಪ್ರಕಟವಾದರು ! ವಾತ್ಸಲ್ಯ ದಿಂದ ಹುಡುಗಿಯ ಬೆನ್ನಮೇಲೆ ಕೈಯಾಡಿಸುತ್ತ ಅವರು ಹೀಗೆ ಮಾತನಾಡಿ ದರು. "ಮಗೂ, ಹೀಗೇಕೆ ಹುಚ್ಚಿಯಹಾಗೆ ಮಾಡುತ್ತೀ? ನಿನ್ನ ಅಣ್ಣನು ಪೂರ್ಣ ಸುಖಿಯಾಗಿದ್ದಾನೆ. ಪತ್ನಿಪ್ರೇಮವು ಅವನಿಗೆ ದೊರೆತಿದೆ. ಅವನ ಹೃದಯದಲ್ಲಿ ತೆರವಾದ ಸ್ಥಳವು ಈಗ ತುಂಬಿದೆ. ಅವನ ಸುಖಕ್ಕಾಗಿ ನೀನು ಆತ್ಮತ್ಯಾಗ ವನ್ನು ಮಾಡಲು ಸಿದ್ಧಳಿರುತ್ತೀಯಲ್ಲವೇ ? ಏಳು ಹಾಗಾದರೆ ! ಮನಸ್ಸಿನ ಚಾಂಚಲ್ಯವನ್ನು ಬಿಡು. ಇದೇ ಆತ್ಮತ್ಯಾಗವು."

ಪ್ರೇಮಪೂರ್ಣವಾದ ಈ ಶಬ್ದಗಳಿಂದ ಹುಡುಗೆಯ ಮನಸ್ಸುಹಗುರ್ವಾಯಿತು. ಎದ್ದಳು. ಮೇಲಕ್ಕೆ ನೋಡಿದಳು. ತಾರಕೆಗಳು ಪ್ರೇಮದಿಂದ ಕುಣಿಯುತ್ತಿದ್ದವು. ಸಮುದ್ರದ ಕಡೆಗೆ ಮೊಗದಿರುವಿದಳು. ತರಂಗಗಳು ಪ್ರೇಮದಿಂದ ಕ್ರೀಡಿಸುತ್ತಿದ್ದವು. ನೌಕೆಯು ದೂರಹೋಗಿತ್ತು. ಆದರೂ ಯುವಕನು ಪ್ರೇಮದಿಂದ ಯುವತಿಯನ್ನು ಬಾಹುಪಾಶದಿಂದ ಬಿಗಿದಪ್ಪಿಕೊಂಡದ್ದು ಸ್ಪಷ್ಟವಾಗಿ ಕಾಣುತ್ತಿತ್ತು. ಗುಡ್ಡದ ತುದಿಯನ್ನು ನೋಡಿದಳು. ವೃಕ್ಷಲತೆಗಳ ಪ್ರೇಮಲೀಲೆಯು ನಡೆದಿತ್ತು. ಪುಷ್ಪಗಳು ಪ್ರೇಮದಿಂದ ನರುಗಂಪನ್ನು ಬೀರುತ್ತಿದ್ದವು. ಆ ಸುಗಂಧವನ್ನು ವಾಯುವು ಪ್ರೇಮದಿಂದ ಎಲ್ಲರಿಗೂ ಅರ್ಪಿಸುತ್ತಿದ್ದನು. ಕೊನೆಯಲ್ಲಿ ಅವಳು ತನ್ನ ಹೃದಯವನ್ನೇ ನೋಡಿಕೊಂಡಳು. ಅದು ಶೂನ್ಯವಾಗಿತ್ತು. ಅಲ್ಲಿ ಅವಳಿಗೆ ಏನೂಕಾಣಿಸಲಿಲ್ಲ !

ಆಮೇಲೆ ಸಜಲನಯನಗಳಿಂದ ಮಹರ್ಷಿಯ ಮೊಗವನ್ನು ನೋಡಿದಳು. ಅದು ಶಾಂತಿ ಮತ್ತು ಸಹಾನುಭೂತಿಗಳ ಆಗರವಾಗಿತ್ತು. ಭಕ್ತಿಭಾವದಿಂದ ಅಭಿವಂದಿಸಿ ಮಾತನಾಡಿದಳು. “ಭಗವನ್, ತ್ಯಾಗದ ನಿಜಾರ್ಥವು ತಿಳಿಯಿತು. ಮೂರ್ತಿಪೂಜೆಯ ಗುಟ್ಟು ಗೊತ್ತಾಯಿತು.”



# ಯೋಗ್ಯಪ್ರತಿಫಲ

( ೧ )

"ನೀನು ಎಷ್ಟು ಹೇಳಿದರೂ ನನ್ನ ಮನಸ್ಸಿಗೆ ಬರುವದಿಲ್ಲ." ಸ್ವಲ್ಪ ನಿಶ್ಚಯಪೂರ್ವಕ ಧ್ವನಿಯಿಂದ ನಾರಾಯಣರಾಯನಂದನು.

"ನನ್ನ ಮನದ ಇಚ್ಛೆಯನ್ನು ತಿರುಗಿಸಲು ಆಗ್ರಹಮಾಡಬೇಡಿರಿ ಕಂಡಿರ್ಯಾ. ನನಗೆ ಹೊಳೆದಂತೆ ನಾನು ನಡೆಯುವೆ. ನನ್ನಿಷ್ಟಕ್ಕೆ ನಾನು ಸ್ವತಂತ್ರಳು."

"ಲಕ್ಷ್ಮೀದೇವೀ," ಸ್ವಲ್ಪ ಮಮತಾಯುಕ್ತ ಸ್ವರದಿಂದ ನಾರಾಯಣರಾಯನು–"ತಾಯಿಗೆ ಬಹಳೇ ಜಡ್ಡಾಗಿದೆಯೆಂದು ಪತ್ರಬಂದಿದೆ; ಕಾರಣ ಅವಳ ಔಷಧೋಪಚಾರ ಮೊದಲಾದ ಶುಶ್ರೂಷೆಯನ್ನು ಮಾಡುವದರ ಸಲುವಾಗಿ, ಮಗನೆಂದು ಅನ್ನಿಸಿಕೊಳ್ಳುವ ನಾನು ಹೋಗದಿದ್ದರೆ ಚಂದಕಾಣುವದೇ?"

"ಅವರಿಗೆ ಇಲ್ಲಿಯೇ ಬಂದಿರಲು ಬೇಡಾರೆನ್ನುವರು. ಉಣ್ಣತಿನ್ನಲು ಕಡಿಮೆಯೇ ಇಲ್ಲಿ ?" ಸ್ವಲ್ಪ ಕರ್ಕಶ ಸ್ವರದಿಂದ ಲಕ್ಷ್ಮೀದೇವಿಯಂದಳು.

"ಅವರು ಹಳೆ ತರಹದ ಮನುಷ್ಯರು; ಸ್ವಲ್ಪ ದಾಕ್ಷಿಣ್ಯದ ಸ್ವಭಾವದವರು. ಈಗಿನ ನವನಾಗರಿಕತೆಯು ಅವರಿಗೆ ಸೇರುವದಿಲ್ಲ. ಇಲ್ಲಿ ಬರುವದಕ್ಕೆ ಅವ್ವನು ಒಲ್ಲೆನೆಂದರೆ ಏನು ಮಾಡುವದು? ಒಳ್ಳೆಯದು. ನೀನು ನನ್ನ ಸಂಗಡ ಬರುವಿಯೋ? ಅಂದರೆ ಅವ್ವನಿಗೆ ಬಹಳೇ ಆನಂದವಾಗುವದು. ನಮ್ಮಿಬ್ಬರನ್ನು ಕಂಡು……"

"ಹು. ಹೀಗೇನು ? ನನ್ನನ್ನು ಕಂಡು ಅವರಿಗೆ ಆನಂದವಾಗುತ್ತಿದ್ದರೆ ಇಲ್ಲಿಯೇ ಬಂದು ಬಿಡಬೇಕು ? ಅಪ್ಪನು ಅವರಿಗೆ ಬರಬೇಕೆಂದು ತಿಳಿಸಿದರೂ ಬರುವದಿಲ್ಲವೇ ?"

"ಆದರೆ ನೀನು ಬರುವಿಯೋ ಇಲ್ಲವೋ ?"

"ಎಂದಿಗೂ ಬರುವದಿಲ್ಲ. ನಮ್ಮ ಸುಖದ ಜೀವವನ್ನು ದುಃಖಕ್ಕೆ ಈಡಾಗುವಂತೆ ಮಾಡುವದಾಗಿ ಕಾಣುತ್ತದೆ. ನಾನು ನಿಶ್ಚಯವಾಗಿ ಬರುವದಿಲ್ಲ. ನಿನ್ನಿನ ದಿವಸ ಅಪ್ಪನು ಹೇಳಿದ ಮಾತು ರುಚಿಸಲಿಲ್ಲವೋ ? ಇಲ್ಲಿಯವರೆಗೆ ಕಲಿಸಿದ್ದಕ್ಕೆ ಇದೇ ಏನು ನಿಮ್ಮ ಪ್ರತಿಫಲ ? ಇಷ್ಟೆಲ್ಲ ನಿಮಗೆ ಮಾಡಿದ್ದು ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತಾಯಿತು!—"

" ಹೌದು. ರಾಮರಾಯರು ನನ್ನನ್ನು ಜೋಪಾನ ಮಾಡಿ ಶಿಕ್ಷಣ ಕೊಟ್ಟು ದೊಡ್ಡವನನ್ನಾಗಿ ಮಾಡಿದ್ದಾರೆ. ನನ್ನ ಸಲುವಾಗಿ ದುಡ್ಡು ಖರ್ಚು ಮಾಡಿದ್ದಾರೆ; ಇದಕ್ಕೆ ನಾನು ಅವರಿಗೆ ಪೂರ್ಣಕೃತಜ್ಞನಾಗಿದ್ದೇನೆ. ಅವರ ಉಪಕಾರವು ಎನ್ನ ಮೇಲೆ ಬಹಳವಾಗಿದೆ. ಆದರೆ ನನ್ನ ತಾಯಿಯು ಜಡ್ಡಿನಿಂದ ಮಲಗಿರಲು, ನನಗೆ ಅವರು ಅಲ್ಲಿಗೆ ಹೋಗಬೇಡನ್ನುವರೇ ? ನಾನಿಲ್ಲಿ ಚಕ್ಕಂದ ದಿಂದಿರಬೇಕೇ ? " ನಾರಾಯಣರಾಯನು ಶಾಂತತೆಯಿಂದ ಮಾತನಾಡಿದನು.

" ಬಹಳೇ ಒಳ್ಳೆಯದು ! ಹೋಗಿರಿ, ನಿಮ್ಮ ಹಾದಿಯು ಸರಳವಾಗಿದೆ. ಭಿಕ್ಷೆ ಬೇಡಿದ ಪದಾರ್ಥವು ಎಂದಾದರೂ ನೆಲುವಿನ ಮೇಲೆ ಇಡಲು ಬಂದೀತೇ?"

ರಾತ್ರಿ ೯–೧೦ ಘಂಟೆಯ ಸುಮಾರಕ್ಕೆ ರಾಮರಾಯರ ಭವ್ಯ ಮಂದಿರದ ಒಂದು ಸುಂದರವಾದ ಕೋಣೆಯಲ್ಲಿ, ಈ ಸಂವಾದವು ಮೇಲಿನ ದಂಪತಿಗಳಲ್ಲಿ ನಡೆದಿತ್ತು.

ಹೀಗೆ ಲಕ್ಷ್ಮೀದೇವಿಯು ತುಚ್ಛತೆಯಿಂದ ನಾರಾಯಣರಾಯನ ಮನಕ್ಕೆ ನಡುವಂತೆ ಮಾತನಾಡಿದರೂ, ಅವನ ಮೇಲೆ ಅದರಿಂದ ಯಾವ ತರದ ಪರಿಣಾಮವೂ ಆಗಲಿಲ್ಲ. ಎಂದಮೇಲೆ ಶಾಂತಿಯ ಮೂರ್ತಿಯಲ್ಲವೇ ಅವನು ? ಇರಲಿ. ಅವನು ತನ್ನ ಕೋಣೆಗೆ ಹೋಗಿ ಮಂಚದಮೇಲೆ ಸ್ವಸ್ಥವಾಗಿ ಮಲಗಿಕೊಂಡನು.

( ೨ )

ನಾಯಕರ ರಾಮರಾಯರು ಮೊದಲು ಬಡತನದ ಸ್ಥಿತಿಯಲ್ಲಿದ್ದವರು. ಬುದ್ಧಿಪರಾಕ್ರಮದಿಂದಲೂ, ಉದ್ಯೋಗಕುಶಲತೆಯಿಂದಲೂ ಈಗ ಲಕ್ಷಾಧೀಶರಾಗಿದ್ದರು. ಅವರ ವಯಸ್ಸು ಸುಮಾರು ೬೦ಕ್ಕೆ ಬಂದಿತ್ತು. ಲಕ್ಷ್ಮೀದೇವಿಯು ತಾಯಿಯು ಇವರ ಮೂರನೆಯ ಹೆಂಡತಿಯು. ಲಕ್ಷ್ಮೀದೇವಿಗೆ ಅಣ್ಣತಮ್ಮಂದಿರಾರೂ ಇದ್ದಿಲ್ಲ. ಸುಂದರಿ ಎಂಬ ತಂಗಿಯೊಬ್ಬಳಿದ್ದಳು; ಅವಳ ಮದುವೆ ಇನ್ನೂ ಆಗಿದ್ದಿಲ್ಲ.

ಮನೆಯಲ್ಲಿ ಗಂಡುಹುಡುಗರು ಇಲ್ಲದ್ದನ್ನು ಕಂಡು, ರಾಮರಾಯರು ತಮ್ಮ ದೂರಿನ ಸೋದರತ್ತೆಯ ಮಗನಾದ ನಾರಾಯಣನೆಂಬ ಹುಡುಗನನ್ನು

ಮನೆಯಲ್ಲಿ ತಂದಿಟ್ಟುಕೊಂಡಿದ್ದರು. ಅವನ ತಂದೆ ಇದ್ದಿಲ್ಲ; ತಾಯಿ ಮಾತ್ರ ಇದ್ದಳು. ನಾರಾಯಣನು ಬಹಳೇ ಶಾಂತಸ್ವಭಾವದವನೂ, ಚುರುಕುಬುದ್ಧಿಯುಳ್ಳವನೂ, ಸದಾಚಾರಸಂಪನ್ನನೂ ಇದ್ದು, ರಾಮರಾಯರ ಒಲವನ್ನು ಸಂಪಾದಿಸಿ, ತನ್ನ ಶಿಕ್ಷಣವನ್ನು ಪೂರ್ತಿಗೊಳಿಸಿದ್ದನು. ಈಗ ಅವನು ಎಲ್‌ಎಲ್. ಬೀ. ಪರೀಕ್ಷೆಯ ಅಭ್ಯಾಸವನ್ನು ಮಾಡುತ್ತಿದ್ದನು.

ತಮ್ಮ ಮುಪ್ಪಿನಕಾಲಕ್ಕೆ ಇಬ್ಬರೂ ಹೆಣ್ಣುಮಕ್ಕಳು ತಮ್ಮನ್ನು ಬಿಟ್ಟು ದೂರಿರಬಾರದೆಂದು, ಲಕ್ಷ್ಮೀದೇವಿಯು ತಾಯಿತಂದೆಗಳ ಮನಸ್ಸಿನಲ್ಲಿ ಇರುವದು ಸಹಜವು. ಈಗ ಎರಡು ವರ್ಷಗಳ ಹಿಂದೆಯೇ ರಾಮರಾಯರು ಲಕ್ಷ್ಮೀದೇವಿಯನ್ನು ನಾರಾಯಣರಾಯರಿಗೆ ಕೊಟ್ಟು ಮದುವೆಮಾಡಿದ್ದರು. ಲಕ್ಷ್ಮೀದೇವಿಯು ಶ್ರೀಮಂತರ ಮನೆಯಲ್ಲಿ ಹುಟ್ಟಿ ಬೆಳೆದವಳು. ಅವಳು ಹೆಚ್ಚಿನ ಮಾನಿಷ್ಠಳೂ, ಹಟಮಾರಿಸ್ವಭಾವದವಳೂ ಇದ್ದದ್ದು ನಾರಾಯಣರಾಯನ ಅನುಭವಕ್ಕೆ ಬಂದಿತ್ತು. ಆಗರೆ ಮಾಡುವದೇನು? ಸಾವಿರವರ್ಷದ ಸಂಬಂಧ !

ರಾಮರಾಯರು ಶ್ರೀಮಂತರಿದ್ದರೆಂದು ಹಿಂದೆ ಹೇಳಿದೆಯಷ್ಟೇ ? ಬಡತನದಿಂದ ಸ್ವಲ್ಪ ಕಷ್ಟಪಟ್ಟು ಯಾರಾದರೂ ಊರ್ಜಿತಾವಸ್ಥೆಗೆ ಒಂದುವೇಳೆ ಬಂದರೆ, ಕೂಡಲೆ ಸೊಕ್ಕು ಬಂದು ಅವರ ಕಣ್ಣುಗಳು ನೆತ್ತಿಯ ಮೇಲೆ ಹೋಗುತ್ತವೆ. ಆದರೆ ನಮ್ಮ ರಾಮರಾಯರು ಇದಕ್ಕೆ ಅಪವಾದವಾಗಿದ್ದರು. ಅವರು ತಮ್ಮ ಬಡವರಾದ ಬಂಧು-ಬಳಗದವರ ಕಡೆಗೂ, ಆಳುಹೋಳುಗಳ ಕಡೆಗೂ ಎಂದೂ ಕಾಕದೃಷ್ಟಿಯಿಂದ ನೋಡುತ್ತಿದ್ದಿಲ್ಲ. ನಾರಾಯಣರಾಯನ ಯೋಗ್ಯತೆಯೂ ದರೂ ಇವರಂತೆಯೇ ಇದ್ದಿತು. ಜಗತ್ತಿನ ದೃಷ್ಟಿಯಿಂದ ನಾರಾಯಣರಾಯನು ಅತ್ಯಂತಭಾಗ್ಯವಂತನೂ, ಸುಖಿಯೂ ಎಂಬುವ ಹಾಗೆ ಕಾಣುತ್ತಿದ್ದನು. ಆದರೆ ನಿಜವಾಗಿ ನೋಡಿದರೆ ಅವನು ಅತ್ಯಂತದುಃಖಿತನಾಗಿದ್ದನು.

---

( ೩ )

ಮರುದಿನ ಮುಂಜಾವಿನಲ್ಲಿ ಲಕ್ಷ್ಮೀದೇವಿಯು ಹಾಸಿಗೆಯಿಂದ ಎದ್ದ ಕೂಡಲೆ ದಾಸಿಯು ಅವಳ ಕೈಯ್ಯಲ್ಲಿ, ಒಂದು ಪತ್ರವನ್ನು ಕೊಟ್ಟಳು. ಅದರಲ್ಲಿಯ ವರ್ತಮಾನವು ಕೆಳಗೆ ಬರೆದಂತೆ ಇತ್ತು,

“ನಾನು ತಾಯಿಯ ಬಳಿಗೆ ಊರಿಗೆ ಹೋಗುತ್ತೇನೆ. ಅಲ್ಲಿಂದ ನಾನು ಎಲ್ಲಿಯಾದರೂ ನೌಕರೀ ಹುಡುಕಲು ಎರಡನೆಯ ಯಾವದಾದರೊಂದು ಪಟ್ಟಣಕ್ಕೆ ಹೋಗುವೆನು. ಕಾರಣ ನನ್ನನ್ನು ಹುಡುಕುವ ಗೋಜಿಗೆ ಬೀಳಬೇಡಿರಿ.
—ನಾರಾಯಣರಾವ.”

ಲಕ್ಷ್ಮೀದೇವಿಯು ಆ ಪತ್ರವನ್ನೋದಿಕೊಂಡು, ಮಡಿಚಿ ಅದನ್ನು ರಾಮರಾಯರು ಕೂಡ್ರುತ್ತಿದ್ದ ಕೋಣೆಯಲ್ಲಿ, ಮೇಜಿನಮೇಲೆ ಒಯ್ದಿಟ್ಟಳು.

ಎಲ್ಲ ದಿವಸಗಳು ಒಂದೇ ಬಗೆಯಾಗಿ, ಒಂದೇರೀತಿಯಾಗಿ ಇರುವದಿಲ್ಲ; ಮತ್ತು ಅತ್ಯಂತ ಚಂಚಲಳಾದ ಲಕ್ಷ್ಮಿಯು ಒಬ್ಬರಲ್ಲಿಯೇ ಒಂದೇ ಸಮನಾಗಿ ಎಂದೂ ನಿಲ್ಲುವದಿಲ್ಲ.

ನಾರಾಯಣರಾಯನು ಹೊರಟುಹೋಗಿ ಸುಮಾರು ಎರಡು ವರ್ಷಗಳಾದವು. ಆದರೆ ಅವನು ಎಲ್ಲಿ ಹೊರಟುಹೋದನೆಂಬುದನ್ನು ಯಾರೂ ವಿಚಾರ ಮಾಡಲಿಲ್ಲ. ರಾಮರಾಯರಿಗೆ ತಮ್ಮ ವ್ಯವಹಾರದ ಗುಂಗು; ಲಕ್ಷ್ಮೀದೇವಿ ಮೊದಲಾದವರಿಗೆ ತಮ್ಮ ಐಶ್ವರ್ಯದ ಗುಂಗು; ಹೀಗಿದ್ದ ಮೇಲೆ ಪಾಪ! ಬಡ ನಾರಾಯಣನ ನೆನಪು ಯಾರಿಗಾಗಬೇಕು ?

ಕಾಲವು ತಿರುಗಿತು. ವಿಷಮಜ್ವರದಿಂದ ಪೀಡಿತಳಾಗಿ ಲಕ್ಷ್ಮೀದೇವಿಯ ತಾಯಿಯು ಸ್ವರ್ಗಸ್ಥಳಾದಳು ! ಇಷ್ಟರಲ್ಲಿಯೇ ಅವಿವೇಯ ವ್ಯಾಪಾರದಲ್ಲಿ ಭಯಂಕರ ಹಾನಿತಟ್ಟಿ ರಾಮರಾಯರು ದಿವಾಳಿಯನ್ನು ತೆಗೆದರು!

ರಾಮರಾಯರು ಧನವಂತರಿದ್ದಾಗ ಜನರು ಅವರನ್ನು ಅತ್ಯಂತ ಜಾಣರೂ ವ್ಯವಹಾರ ಕುಶಲರೂ, ಮುಂದಿನ ಧೋರಣೆಯುಳ್ಳವರೂ ಎಂದು ಅನ್ನುತ್ತಿದ್ದರು. ದಿವಾಳಿಯನ್ನು ತೆಗೆದಕೂಡಲೆ ದುಂದುಗಾರನೂ, ವ್ಯಾಪಾರದ ಜೂಜಾಡುವವನೂ ಇದ್ದದರಿಂದಲೇ ಹಾಗೆ ಇವನ ಅವಸ್ಥೆಯಾಯಿತು. ಯಾರೇನು ಮಾಡುವದು? ಮಾಡಿದ್ದುಣ್ಣೋ ಮಹಾರಾಯಾ! ಎಂಬಂತೆ ಅನುಭವಿಸಬೇಕು; ಎನ್ನಹತ್ತಿದರು. ರಾಮರಾಯರ ಶ್ರೀಮಂತಿಕೆಯ ಕಾಲಕ್ಕೆ, ಅವರ ಗೆಳೆಯರ ಗುಂಪು, ಇವರ ಸಲುವಾಗಿ ತುಂಬ ಕಳಕಳಿಯುಳ್ಳದ್ದಾಗಿತ್ತು. ಆದರೆ ಈಗ ಒಬ್ಬರೂ ಮನೆಯ ಕಡೆಗೆ ಹಾಯದಾದರು. ಎಷ್ಟೋ ಇವರ ಇಷ್ಟಮಿತ್ರರೆನಿಸಿದವರು ಇವನನ್ನು ಕಂಗಾಲನನ್ನಾಗಿ ಮಾಡಿದರು. ಹೆಂಡತಿಯು ಸತ್ತಳು;

ಸಂಪತ್ತು ಹೋಯಿತು, ಮಾನಹಾನಿಯಾಯಿತು. ಹೀಗೆ ಎಲ್ಲರೀತಿಯಾಗಿ ಅವ್ವ ಕ್ಕನು ಕೈಕೊಳೆದುಕೊಂಡು ರಾಮರಾಯರ ಬೆನ್ನುಹತ್ತಿದಳು. ಪಾಪ! ಈ ಸಣ್ಣ ಕಂದಮ್ಮಗಳಾದ ಲಕ್ಷ್ಮೀ ಸುಂದರಿಯರು ಏನೆಂತ ಹೇಳಬೇಕು ಸಮಾ ಧಾನವನ್ನು ಅಪ್ಪನಿಗೆ !

ಒಂದಾನೊಂದು ದಿವಸ ಮನೆಯಲ್ಲಿ ಎರಡೂ ಹುಡುಗರೂ ಇಲ್ಲದ್ದನ್ನು ಕಂಡು, ಎದೆಗೆ ಗುಂಡನ್ನು ಹಾಕಿಕೊಂಡು ರಾಮರಾಯರು ಪ್ರಾಣಬಿಟ್ಟರು; ಆಯಿತು. ಲಕ್ಷ್ಮೀದೇವಿ, ಸುಂದರೀದೇವಿ ಇವರಿಬ್ಬರೂ ಪೂರ್ಣನಿರಾಧಾರರಾ ದರು. ಕೊಡುಕೊಳ್ಳುವ ಸಾವುಕಾರರು ಮನೆಯಲ್ಲಿ ಇದ್ದಬಿದ್ದ ಸಣ್ಣ ಪುಟ್ಟ ವಸ್ತು ಒಡವೆಗಳನ್ನು ಜಪ್ತಿಮಾಡಿಸಿ ತೆಗೆದುಕೊಂಡು ಹೋದರು. ಬಂಧು ಬಳಗದವರು ವಿಚಾರಿಸದಂತಾದರು. ಹಾಗಾದರೆ ಯಾರು ಕೇಳಬೇಕು ನಿರಾ ಶ್ರಿತಲಲನೆಯರನ್ನು? ಈಗ ಮಾತ್ರ ಲಕ್ಷ್ಮೀದೇವಿಗೆ ನಾರಾಯಣರಾಯನ ನೆನಪಾಯಿತು. ಅವಳು ನಾರಾಯಣರಾಯನಿದ್ದ ಊರಿಗೆ– "ತೀವ್ರ ಹೊರಟು ಬರಬೇಕೆ"ಂದು ಒಂದು ಅಗತ್ಯದ ತಂತಿಯನ್ನು ಬಿಟ್ಟಳು. ಆದರೆ ಒಡೆಯನ ಶೋಧವಾಗದ್ದರಿಂದ ಅದು ತಿರುಗಿ ಬಂದಿತು.

ಈಗ ತನ್ನ ಮತ್ತು ಸುಂದರಿಯ ಹೊಟ್ಟೆಯನ್ನು ತುಂಬಿಕೊಳ್ಳುವದಕ್ಕೆ ನೌಕರಿಯ ಹೊರತು ಮತ್ತೊಂದು ಆಧಾರವಿಲ್ಲೆಂದು ಲಕ್ಷ್ಮೀದೇವಿಗೆ ಪೂರ್ಣ ಮನವರಿಕೆಯಾಯಿತು. ಸುತ್ತಲು ೨೦–೩೦ ಹರದಾರಿಯಲ್ಲಿ ರಾಮರಾಯರ ಕೀರ್ತಿಯು ಇದ್ದದರಿಂದ, ಲಕ್ಷ್ಮೀದೇವಿಗೆ ಒಂದು ದೊಡ್ಡ ಊರಲ್ಲಿ ಹೆಣ್ಣು ಮಕ್ಕಳ ಶಾಲೆಯಲ್ಲಿ ಶಿಕ್ಷಕಿಯ ಕೆಲಸವು ತೀವ್ರವಾಗಿಯೇ ಸಿಕ್ಕಿತು.

ಅಷ್ಟರಲ್ಲಿಯೇ ಸುಖ ಹಚ್ಚಿಕೊಂಡು ರಾಮರಾಮ ಎನ್ನುತ್ತ ಲಕ್ಷ್ಮೀ ಸುಂದರಿಯರು ಕಾಲವನ್ನು ಕಳೆಯುತ್ತಿದರು.

---

(೪)

ಡಾಕ್ಟರ ರಾಘವೇಂದ್ರರಾಯರು ಔಷಧಾಲಯದಿಂದ, ತಮ್ಮ ಮಂದಿ ರಕ್ಕೆ ಬಂದು, ಊಟ ತೀರಿಸಿಕೊಂಡು, ಬರೆಯುವ ಕೋಣೆಯಲ್ಲಿ ಆರಾಮ ಖುರ್ಚಿಯ ಮೇಲೆ ಬಿದ್ದುಕೊಂಡು ಇದೇ ಬಂದ ಹೊಸ "ಶಾರದೆ" ಯನ್ನು ಓದುತ್ತಿದ್ದರು.

ಇಷ್ಟರಲ್ಲಿ ಆಳುಮಗನು " ಹೊರಗೆ ಒಬ್ಬ ಹುಡುಗೆಯು ತಮ್ಮನು ಕಾಣಲು ಬಂದಿರುವಳು. " ಎಂದು ತಿಳಿಸಿದನು. "ಒಳಗೆ ಬರಹೇಳು." ಎಂದು ಡಾಕ್ಟರರು ಅವನಿಗೆ ಹೇಳಿ ಮತ್ತೆ ಓದುವದರಲ್ಲಿ ಮಗ್ನರಾದರು. ಸ್ವಲ್ಪ ಹೊತ್ತಿನಲ್ಲಿಯೇ " ಡಾಕ್ಟರ ಸಾಹೇಬ " ಎಂಬ ಮಂಜುಲಸ್ವರವು ಅವರನ್ನು ಬಡಿದೆಬ್ಬಿಸಿದಂತೆ ಮಾಡಿತು. ಅತ್ಯಂತಲಾವಣ್ಯವತಿಯಾದ ೧೫–೧೬ ವರ್ಷದ ತರುಣಿಯು ತಮ್ಮೆದುರಿಗೆ ನಿಂತದ್ದನ್ನು ನೋಡಿ ಚಕಿತರಾಗಿ ಗಂಭೀರಸ್ವರದಿಂದ ಡಾಕ್ಟರರು ಆ ತರುಣಿಗೆ—" ನಿಮ್ಮದೇನು ಕೆಲಸವಿದೆ ನನ್ನಲ್ಲಿ!"

" ನನ್ನ ಅಕ್ಕನಿಗೆ ಬಹಳೇ ಜ್ವರಬಂದಿವೆ; ಮತ್ತು ಹುಚ್ಚರಂತೆ ಬಡಬಡಿಸ ಹತ್ತಿದ್ದಾಳೆ. ತಾವು ನಮ್ಮ ಮೇಲೆ ಕೃಪೆಮಾಡಿ ಈಗಲೇ ಬರುವದಾಗಬೇಕು. " ಮಂಜುಲಸ್ವರದಿಂದ ಆ ತರುಣಿಯೆಂದಳು.

ಡಾಕ್ಟರ ರಾಘವೇಂದ್ರರಾಯರು ಆಗಲೇ ಎದ್ದು ಉಡುಪುತೊಡಪುಗಳನ್ನು ಧರಿಸಿ ತಮ್ಮ ಹ್ಯಾಂಡಬ್ಯಾಗನ್ನು ಕೈಯಲ್ಲಿ ಹಿಡಿದುಕೊಂಡು "ನಡೆಯಿರಿ ಹಾಗಾದರೆ! " ಎಂದರು.

"ಆದರೆ–" ನಡುವೇ ಆ ಬಾಲೆಯು ಸಂಶಯಯುಕ್ತ ಧ್ವನಿಯಿಂದ ಮಾತನಾಡಿದಳು.

" ಹಾಗಾದರೆ ಏನನ್ನುವಿರಿ ನೀವು ? " ಡಾಕ್ಟರರು ಅವಳನ್ನು ಚಕಿತ ದೃಷ್ಟಿಯಿಂದ ನೋಡುತ್ತ ಪ್ರಶ್ನಮಾಡಿದರು.

" ಆದರೆ ನಮ್ಮ ಹತ್ತರ ನಿಮಗೆ ಫೀ ಕೊಡಲಿಕ್ಕೆ ದುಡ್ಡು ಇಲ್ಲ. " ಅತ್ಯಂತದೀನಮುದ್ರೆಯಿಂದ ಆ ತರುಣಿಯೆಂದಳು.

" ಆ ಇಷ್ಟೇ! ನಾನೆಲ್ಲಿ ಕೇಳಿದೆನು ನಿಮಗೆ ಈಗ ಫಿ ಕೊಡಿರೆಂದು? ಎನೂ ಚಿಂತೆ ಮಾಡಬೇಡಿರಿ; ತೀವ್ರ ನಡೆಯಿರಿ. " ಸ್ವಲ್ಪ ಮೆಲ್ಲಗಿನ ಸ್ವರದಿಂದ ಡಾಕ್ಟರರೆಂದರು.

ಸ್ವಲ್ಪ ಹೊತ್ತಿಗೆ ಡಾಕ್ಟರರನ್ನು ಒಂದು ಸಣ್ಣ ಕೋಣೆಯೊಳಗೆ ಆ ತರುಣಿಯು ಕರೆದುಕೊಂಡು ಒಳಹೊಕ್ಕಳು. ಕೋಣೆಯಲ್ಲಿ ಹೊಲಸು ಬಹಳ ವಿದ್ದಿತು. ಅಲ್ಲಿಯೇ ಒಂದು ಮಂಚದ ಮೇಲೆ ೨೦ ವರುಷದ ತರುಣಿಯೊರ್ವಳು

ನೆರಳುತ್ತ, ಬಳಲುತ್ತ ಮಲಗಿಕೊಂಡಿದ್ದಳು. ಆ ರೋಗಿಯ ಹತ್ತರ ನೆರೆಮನೆಯ ಒರ್ವ ಮುದುಕೆಯು ಕುಳಿತಿದ್ದಳು. ಡಾಕ್ಟರ ಸಾಹೇಬರನ್ನು ನೋಡಿದ ಕೂಡಲೆ ಆ ಮುದುಕೆಯು ಅಲ್ಲಿಂದ ಎದ್ದು ಹೋದಳು.

" ಅಯ್ಯೋ, ಇವರು ಬಹಳೇ ಘಾಸಿಯಾಗಿದ್ದಾರೆ. " ರೋಗಿಯನ್ನು ಪರೀಕ್ಷಿಸಿ ಡಾಕ್ಟರರಂದರು. " ಒಳ್ಳೆಯದು; ಎಷ್ಟು ದಿವಸಗಳಿಂದವು ಇವರಿಗೆ ಜ್ವರ ಬರಹತ್ತಿ ? "

" ಈ ಹೊತ್ತಿಗೆ ಸರಾಸರಿ ೧೦ ದಿವಸಗಳಾದವು. ಆದರೆ ನಿನ್ನಿನ ರಾತ್ರಿ ಮಾತ್ರ ಸ್ವಲ್ಪ ಸನ್ನೆ ಕೂಡಿದ ಹಾಗಿದೆ !"

" ನಿಮ್ಮ ಮನೆಯಲ್ಲಿ ಮತ್ತೆ ಯಾರು ಯಾರಿರುವಿರಿ? "

" ನಾನು ಮತ್ತು ನನ್ನ ಅಕ್ಕ ಈ ಲಕ್ಷ್ಮೀದೇವಿ ಹೀಗೆ ಇಬ್ಬರೇ ಇರುವೆವು." ಎಂದು ಖಿನ್ನವದನದಿಂದ ತರುಣಿಯೆಂದಳು.

" ಈ ಸ್ಥಳದಲ್ಲಿ ಇವರ ಶೂಶ್ರೂಷೆಯು ಚೆನ್ನಾಗಿ ಆಗುವಂತಿಲ್ಲ. ಈ ಸ್ಥಳವನ್ನು ಮೊದಲು ಬದಲು ಮಾಡಿರಿ. ಮತ್ತು ಇವರ ಹತ್ತರ ಅಹೋರಾತ್ರಿ ಇದ್ದು ಯೋಗ್ಯ ಕಾಲಕ್ಕೆ ಔಷಧ ಕೊಡಲಿಕ್ಕೆ ಬೇಕು. ಅಂದರೆ ಉಪಯೋಗ ವಾಗುವದು. ಒಳ್ಳೆಯದು. ನಿಮ್ಮ ಹೆಸರೇನು ?"

" ನನಗೆ ಸುಂದರಿ ಎಂಬು ಕರೆವರು. ನಮ್ಮ ಬಂಧುಬಳಗ ಎಲ್ಲವೂ ನಾವಿಬ್ಬರು ಅಕ್ಕತಂಗಿಯರೇ. ನಮ್ಮ ಹತ್ತರ ಔಷಧಕ್ಕೆ ಖರ್ಚು ಮಾಡುವದಕ್ಕೆ ಕೂಡ ಒಂದು ಕಾಸು ಇಲ್ಲದಾಗಿದೆ........"ಹೀಗೆ ಹೇಳಹೇಳುತ್ತ ಸುಂದ ರಿಯು ರೋದಿಸಹತ್ತಿದಳು—

"ಛೇ! ಛೇ! ಸುಂದರವ್ವನವರೇ, ನೀವು ಏನೂ ಗಾಬರಿಯಾಗಬೇಡಿರಿ." ಮಮ ತಾಯುಕ್ತ ಸ್ವರದಿಂದ ಡಾಕ್ಟರರಂದರು—"ನಾನು ಎಲ್ಲ ವ್ಯವಸ್ಥೆ ಮಾಡುವೆನು. ಧೈರ್ಯ ಬಿಡಬೇಡಿರಿ. ಈ ಹೊತ್ತಿನ ರಾತ್ರಿ ಈ ಔಷಧವನ್ನು ಮೂರುಮೂರು ತಾಸಿಗೊಮ್ಮೆ ನಾಲ್ಕು ಬಾರೆ ಕೊಡಿರಿ. ನಾಳಿನ ದಿವಸ ನಿಮಗೆ ಇರಲು, ಔಷ ಧಾಲಯದಲ್ಲಿಯೇ ವ್ಯವಸ್ಥೆ ಮಾಡುವೆನು. ಈ ಹೊತ್ತಿನ ರಾತ್ರಿ ಇಲ್ಲಿಗೆ ನಮ್ಮ ನರ್ಸಳನ್ನು ಕಳಿಸಿಕೊಡುವೆನು."

ಈ ಬಗೆಯಾಗಿ ಡಾಕ್ಟರರು ಹೇಳಿ ಹೊರಟು ಹೋದರು.

( ೫ )

ಡಾಕ್ಟರ ರಾಘವೇಂದ್ರರಾಯರು ತಮ್ಮ ಔಷಧಾಲಯದ ಹತ್ತರ ಒಂದು ಸಣ್ಣ ಮಾಟದ ಮನೆಯ ಅಟ್ಟದ ಮೇಲೆ, ಲಕ್ಷ್ಮೀದೇವಿಗೆ ಉಳಕೊಳ್ಳಲು ಬಿಡಾರವನ್ನು ಮಾಡಿಕೊಟ್ಟರು. ಬಹಳೇ ಪರಿಶ್ರಮದಿಂದ ಲಕ್ಷ್ಮೀದೇವಿಗೆ ಔಷಧ ಕೊಟ್ಟು ೮–೧೦ ದಿವಸಗಳಲ್ಲಿಯೇ ಗುಣಪಡಿಸಿದರು. ಅವಳಿಗೆ ಈಗೀಗ ಶಕ್ತಿ ಬರಹತ್ತಿತು. ಔಷಧಕ್ಕೆ ಬೇಕಾದ ಪದಾರ್ಥಗಳ ಎಲ್ಲ ಖರ್ಚನ್ನು ಸ್ವತಃ ಡಾಕ್ಟರರೇ ಮಾಡಿದರು. ಡಾಕ್ಟರರ ವಿಷಯಕ್ಕೆ ಸುಂದರಿಗೆ ಬಹಳೇ ಆದರಹುಟ್ಟಿತು. ಆ ಆದರವು ಪ್ರೀತಿಯನ್ನು ಒಡಗೂಡಿತು. ನಿರ್ಮಲಮನಸ್ಸಿನಿಂದ ಮತ್ತು ಸದಯಾಂತಃಕರಣದಿಂದ ಅವರ ಕೂಡ ಮಾತನಾಡಹತ್ತಿದಳು.

ಲಕ್ಷ್ಮೀದೇವಿ, ಸುಂದರೀದೇವಿಯರು ಡಾಕ್ಟರರ ಉಪಕಾರವನ್ನು ಹೇಗೆ ತೀರಿಸಬೇಕೆಂಬ ಆಲೋಚನೆಯಲ್ಲಿ ಮುಳುಗಿದರು.

ಲಕ್ಷ್ಮೀದೇವಿಗೆ ೨–೩ ದಿವಸಗಳಿಂದ ಏನೂ ಜ್ವರ ಬಂದಿದ್ದಿಲ್ಲ. ಅಶಕ್ತತೆ ಮಾತ್ರ ಪೂರ್ಣವಿತ್ತು.

ಮುಂಜಾವಿನಲ್ಲಿ ೮ ಘಂಟೆಗೆ ದಿನಾಲು ಬರುವಹಾಗೆ ಡಾಕ್ಟರರು ಲಕ್ಷ್ಮೀ ದೇವಿಯನ್ನು ನೋಡಲು ಬಂದರು. ಲಕ್ಷ್ಮೀದೇವಿಯು ನಿದ್ರಾದೇವಿಯನ್ನು ಪ್ರಸನ್ನೀಕರಿಸಿ ಆಲಿಂಗಿಸಿಕೊಂಡಿದ್ದಳು. ಎಚ್ಚರಾಗುವವರೆಗೆ, ಹೊರಗೆ ಬಂದು ಅಲ್ಲಿಯೇ ಇದ್ದ ಒಂದು ಖುರ್ಚಿಯ ಮೇಲೆ ಕುಳಿತುಕೊಂಡರು. ಸುಂದರಿಯು ಅಲ್ಲಿಯೇ ಬಾಗಿಲ ಹತ್ತರ ನಿಂತಿದ್ದಳು. ಸುಂದರಿಯನ್ನು ನೋಡುತ್ತ ಡಾಕ್ಟರರು "೫–೬ ದಿವಸಗಳಲ್ಲಿ ಪೂರ್ಣ ಗುಣವಾಗುತ್ತದೆ. ಈಗ ಯಾವ ಪ್ರಕಾರದ ಭೀತಿಯುಳಿದಿಲ್ಲ." ಎಂದರು.

"ಹೌದು, ಇದೆಲ್ಲ ತಮ್ಮ ಕೃಪಾಪ್ರಸಾದವು. ನಿಮ್ಮ ಉಪಕಾರವನ್ನು ಹೇಗೆ ತೀರಿಸಬೇಕೆಂದು ಮತ್ತೊಂದು ಚಿಂತೆಯುಂಟಾಗಿದೆ. ಈ ಚಿಂತಾ ರೋಗಕ್ಕೆ ಏನಾದರೂ ನಿಮ್ಮಲ್ಲಿ ಔಷಧವಿದೆಯೋ!" ಸ್ವಲ್ಪ ಲಜ್ಜಾಯುಕ್ತ ಸ್ವರದಿಂದ ಸುಂದರಿಯೆಂದಳು.

"ನಾನೇನು ಹೆಚ್ಚಿನದನ್ನು ಮಾಡಿದ್ದೇನೆ ? ಎಲ್ಲವನ್ನೂ ಮಾಡುವವನು ದೇವರು. ಇರಲಿ. ಆದರೆ ಈಗಲೇ ಏಕೆ ಆ ಉಪಕಾರದ ಮಾತು ? ನಿಮ್ಮಂತಹರ

ಉಪಯೋಗಕ್ಕೆ ಬಿದ್ದದರಿಂದ ನಿ ಶ್ಚಯವಾಗಿ ನಾನು ಭಾಗ್ಯವಂತನು." ಎಂದು ಡಾಕ್ಟರರು ವಿನೋದಪೂರ್ವಕವಾಗಿ ಅಂದರು.

ಡಾಕ್ಟರರಾಡಿದ ವಿನೋದದ ಮಾತು ಸುಂದರಿಯು ಲಕ್ಷ್ಯದಲ್ಲಿ ಬರಲಿಲ್ಲೆಂದು ತಿಳಿಯಬೇಡಿರಿ. ಅವಳು ತನ್ನ ಕೋಕಿಲ ಸ್ವರದಿಂದ–

" ಆದರೆ ನನ್ನ ದೈವವು ಕೆಟ್ಟದಿದೆ. ನಾನು ಕೇವಲ ಬಡವೆಯಾಗಿದ್ದೇನೆ."

" ನಾನೂ ನಿಮ್ಮಂತೆಯೇ ಇದ್ದೇನೆ." ನಡುವೆ ಡಾಕ್ಟರರಂದರು–"ಆದರೆ ನಿಮ್ಮ ಸಮ್ಮತಿ ಇಪ್ಪರೆ ಒಂದು ಮಾತನ್ನು ನಿಮಗೆ ತಿಳಿಸಬೇಕೆಂದಿರುವೆನು."

" ಅದಾವ ಮಾತು? "

" ಈ ರತ್ನವನ್ನು ನನ್ನ ಹೃದಯಮಂದಿರದಲ್ಲಿ ಧರಿಸಬೇಕೆಂದೆನ್ನಿಸಿದೆ. ಇದಕ್ಕೆ ಒಪ್ಪಿಗೆಯು ಮಾತ್ರ– "

" ನಾನು ದರಿದ್ರಳು. ನನ್ನನ್ನು ವರಿಸಿ ಏನು ಮಾಡುವಿರಿ? ನಿಮ್ಮ ಯೋಗ್ಯತೆಗೆ ನಾನೆಷ್ಟೂ ಒಪ್ಪುವದಿಲ್ಲ! "

" ನನ್ನ ಯೋಗ್ಯತೆಗೆ ನೀನು ತಕ್ಕವಳಲ್ಲವೇ ! ಹಾಗೆಂದಿಗೂ ಅನ್ನಕೂಡದು. ನಿನ್ನಂಥ ರತ್ನದ ಸಲುವಾಗಿ ಈ ಜಗತ್ತಿನಲ್ಲಿಯ ಎಲ್ಲ ಸುಖಕ್ಕೂ ತಿಲಾಂಜಲಿಯನ್ನು ಬಿಡಲು ಸಿದ್ಧನಿದ್ದೇನೆ. ನೀನು–ಎನ್ನ ಸೊಗಸಿನ ಬೀಡೆ ನೀನು. ಎನ್ನ ಮನದ ಒಲವಿನ ಮುದ್ದು ನೀನು. ಎನ್ನ ಸಂಸಾರದ ಆಟಿಗೆಯ ಮಾಟದ ಗೊಂಬೆ ನೀನು. ಇನ್ನೆಂತು ಹೇಳಲಿ !

" ಹಾ ಮೆಲ್ಲಗೆ! ಲಕ್ಷ್ಮೀದೇವಿಯು ಎಚ್ಚರಾದಳು. " ಮೃದುಸ್ವರದಿಂದ ಮುಗುಳ್ನಗೆನಗುತ್ತ ಸುಂದರಿಯೆಂದಳು.

" ಹಾಗಾದರೆ ನಿನ್ನ ಒಪ್ಪಿಗೆಯುಷ್ಟೇ?" ಸುಂದರಿಯು ಮುಖಚರ್ಯೆಯ ಮೇಲಿಂದ ಒಪ್ಪಿಗೆಯಿದೆ ಎಂದು ಡಾಕ್ಟರರು ತಿಳಿದುಕೊಂಡರು. "ಸುಂದರೀ, ನಿಮ್ಮ ಹಿರಿಯರು ಯಾರಾದರೂ ಇರುವರೋ ?"

" ಯಾರೂ ಇಲ್ಲ. ನಾವು ಅಕ್ಕತಂಗಿಯರಿಬ್ಬರೇ ಇರುವೆವು. ಮೊದಲು ನಮ್ಮ ಸ್ಥಿತಿಯು ಚೆನ್ನಾಗಿತ್ತು." ಮಂದಸ್ಮಿತದಿಂದ ಸುಂದರಿಯೆಂದಳು.

" ಹಾ ! ಈಗ ಹೀಗೇಕಾಯಿತು ? "

" ನಮ್ಮ ದುರ್ದೈವವು. ಇಂದುಪುರದ ರಾಮರಾಯ ನಾಯಕರ ಹೆಸರನ್ನು ನೀವು ಕೇಳಿರಬಹುದಷ್ಟೇ ? ಅವರ ಮಕ್ಕಳೇ ನಾವು ದುರ್ಭಾಗ್ಯರು ! "

" ಏನು ? ನೀವು ರಾಮರಾಯರ ಮಕ್ಕಳೋ ! "

" ಛೇ, ಛೇ, " ನಡುವೆ ಅವಸರದಿಂದ ಡಾಕ್ಟರರೆಂದರು " ಒಳ್ಳೆಯದು; ನನಗೆ ಈಗ ಎರಡನೆಯ ರೋಗಿಯನ್ನು ನೋಡಲು ಹೋಗಬೇಕಾಗಿದೆ."

" ಹಾಗಾದರೆ ಸ್ವಲ್ಪ ತಡೆಯಿರಿ," ಲಕ್ಷ್ಮೀದೇವಿಯು ಕಡೆಗೆ ನೋಡಿ ಸುಂದರಿಯೆಂದಳು–" ಲಕ್ಷ್ಮೀದೇವಿಗೆ ಎಚ್ಚರಾಗಿದೆ; ಬೇಕಾದರೆ ಇನ್ನೊಮ್ಮೆ ನೋಡಬಹುದು."

ಇನ್ನೂ ಸುಂದರೀದೇವಿಯು ಬಾಯಿಂದ ಶಬ್ದಗಳು ಹೊರಹೊರಡುವಷ್ಟ ರಲ್ಲಿಯೇ ಡಾಕ್ಟರರು ಹೊರಟುಹೋಗಿದ್ದರು.

( ೬ )

ಲಕ್ಷ್ಮೀದೇವಿಯು ಅರನಿದ್ರೆಯಲ್ಲಿದ್ದಳು. ಡಾಕ್ಟರ ಸಾಹೇಬರ ಮನಸ್ಸು ಸುಂದರಿಯನ್ನು ಆಕರ್ಷಿಸಿರುವದೆಂಬುದು ಅವಳಿಗೆ ಸಲ್ಪ ಸ್ವಲ್ಪ ಗೊತ್ತಿತ್ತು. ಆದರೆ ಈಹೊತ್ತಿನ ಉಭಯತರ ಭಾಷಣಗಳ ಮೇಲಿಂದ ಪೂರ್ಣ ಮನವರಿಕೆ ಯಾಯಿತು. ಆದರೆ ತಾನು ಅರಿತೂ ಅರಿಯದವಳಂತೆ ಸುಮ್ಮನಿದ್ದಳು.

ಲಕ್ಷ್ಮೀದೇವಿಗೆ ಪೂರ್ಣ ಗುಣವಾಗಿ ಈಗ ಸ್ವಲ್ಪ ಸ್ವಲ್ಪ ಮನೆಗೆಲಸ ಮಾಡುತ್ತಿದ್ದಳು. ದಿನದ ವಾಡಿಕೆಯಂತೆ ಡಾಕ್ಟರ ಸಾಹೇಬರು ಲಕ್ಷ್ಮೀದೇವಿ ಯನ್ನು ನೋಡಲು ಅಲ್ಲಿಗೆ ಬಂದರು.

" ಡಾಕ್ಟರ ಸಾಹೇಬ, ಸ್ವಲ್ಪು ವೇಳೆ ತಾವು ಕೊಡ್ರುವವರಾಗಬೇಕು. ಸ್ವಲ್ಪ ಚಹ ಮಾಡಿಸುತ್ತೇನೆ. ತೆಗೆದುಕೊಂಡು ಆಮೇಲೆ ಹೋಗಬಹುದು. ಈಹೊತ್ತು ನನ್ನ ಪ್ರಕೃತಿಯು ಚೆನ್ನಾಗಿದೆ." ಎಂದು ಲಕ್ಷ್ಮೀದೇವಿಯುಂದಳು.

" ತಮ್ಮ ಇಚ್ಛೆ; ನೆಟ್ಟಗನಿಸಿವರೂ, ಪ್ರಕೃತಿಯನ್ನು ಜಪ್ಪಿಸಿ ಕೆಲಸ ಮಾಡಿರಿ. ಬಿಸಿಲಿನಲ್ಲಿ ಕೆಲಸ ಮಾಡಬೇಡಿರಿ."

" ಚೆನ್ನಾಗಿ ಹೇಳಿದಿರಿ ಡಾಕ್ಟರ ಸಾಹೇಬ; ಒಳ್ಳೆಯದು. ಈ ಚಹವ ಮೇಲಿಂದಲೇ ನಿಮ್ಮ ಬಿಲ್ಲನ್ನು ತೀರಿಸಿಕೊಳ್ಳಿರಿ." ನಗುತ್ತ ಸುಂದರಿಯೆಂದಳು.

“ ಒಳ್ಳೆಯ ವೇಳೆಗೆ ನೆನಪು ತೆಗೆದೆ; ಡಾಕ್ಟರ, ಒಟ್ಟು ತಮ್ಮ ಎಲ್ಲ ಬಿಲ್ಲು ಎಷ್ಟಾಗಿದೆ ? ದಯವಿಟ್ಟು ತಿಳಿಸುವದಾಗಬೇಕು.” ಲಕ್ಷ್ಮೀದೇವಿಯಂದಳು.

“ ಈಗ ಅದರದೇನು ಇಷ್ಟು ಅಗತ್ಯವು ? ಸುಂದರೀದೇವಿಯು ಹೇಳಿಕೆಯಂತೆ ಈ ಚಹದ ಮೇಲೆ ನನ್ನ ಬಿಲ್ಲನ್ನು ಮುಟ್ಟಿಸಿಕೊಳ್ಳುತ್ತೇನೆ.” ನಗುತ್ತ ಡಾಕ್ಟರರಂದರು.

“ ದಯಮಾಡಿ ಬಿಲ್ಲು ಎಷ್ಟಾಗಿದೆಯೆಂಬುವದನ್ನು ತಿಳಿಸಲೇಬೇಕು ”

“ಎಂದಿಗೂ ತಿಳಿಸುವದಿಲ್ಲ. ಪೈ ಸಹ ಖರ್ಚಾಗಿಲ್ಲ. ಈಗೇಕೆ ಆ ಮಾತು? ಮುಂದೆ ನೋಡಲು ಬಂದೀತು! ”

“ ಡಾಕ್ಟರ ಸಾಹೇಬ, ನನ್ನ ಬಳಿಯಲ್ಲಿ ಒಂದು ಗುಲಾಬೀ ಹೂವು ಇದೆ. ಅದನ್ನು ತೆಗೆದುಕೊಳ್ಳಿ. ಅದೇ ನಿಮ್ಮ ಉಪಕಾರಕ್ಕೆ ತಕ್ಕ ಪ್ರತಿಫಲವಾಗಿದೆ. ಅದರ ಹೊರತಾಗಿ ನನ್ನ ಬಳಿಯಲ್ಲಿ ಏನೂ ಇರುವದಿಲ್ಲ. ” ಖಿನ್ನವದನದಿಂದ ಲಕ್ಷ್ಮೀದೇವಿಯೆಂದಳು.

“ ಓಹೋ ! ಇದ್ದರೇನಾಯಿತು ? ಇದ್ದರೆ ಅದು ನಿಮ್ಮ ಹತ್ತರವೇ ಇರಲಿ. ಅದನ್ನು ನಾನು ತೆಗೆದುಕೊಂಡಾದರೂ ಏನು ಮಾಡುವದು ?”

“ ನಿಮ್ಮ ಮನೆಗೆ ತೆಗೆದುಕೊಂಡು ಹೋಗಿ ನಿಮ್ಮ ಹೆಂಡತಿಗೆ......”

“ ಹಾ-” ನಡುವೆ ಲಕ್ಷ್ಮೀದೇವಿಯನ್ನು ತಡೆದು ಡಾಕ್ಟರರು—“ನಾನು ಇನ್ನೂ ಅವಿವಾಹಿತನಾಗಿದ್ದೇನೆ.”

“ ಹೀಗೇನು ? ನೀವು ಇನ್ನೂ ಅವಿವಾಹಿತರೇ ? ಇನ್ನೂ ಲಗ್ನಮಾಡಿಕೊಳ್ಳುವ ವಿಚಾರವಿಲ್ಲೇನು ? ”

“ ಅದೇ ವಿಚಾರದಲ್ಲಿಯೇ ಇದ್ದೇನೆ. ನನ್ನ ಗೃಹಕ್ಕೆ ಯೋಗ್ಯಗೃಹಿಣಿಯಾಗತಕ್ಕವಳನ್ನೇ ನಾನು ವರಿಸುವವನು. ಆದರೆ—” ಎಂದು ಡಾಕ್ಟರರು ವಿಚಾರಮಗ್ನರಾದರು.

“ ಇನ್ನೂವರೆಗೂ ಅದಾವ ವಿಚಾರಮಾಡುತ್ತಿರುವಿರಿ ?”

“ ನಾನು ಒಂದು ಹುಡುಗಿಯನ್ನು ಗೊತ್ತುಮಾಡಬೇಕೆಂದು ಮಾಡಿದ್ದೇನೆ—”

" ಹಾ ಅದಾವ ಹುಡುಗೆಯುವಳು ?"

" ಈಗ ಅದನ್ನು ಹೇಳಲಿಕ್ಕೆ ಬರುವಹಾಗಿಲ್ಲ—" ಡಾಕ್ಟರರು ಮುಗು ಳ್ನಗೆ ನಗುತ್ತ— " ನಿಮ್ಮ ಬಳಿಯಲ್ಲಿ ಒಂದು ಮಾತಿನ ಪ್ರಸ್ತಾವವನ್ನು ತೆಗೆ ಯಬೇಕೆಂದು ಮಾಡಿದ್ದೇನೆ—" ಎಂದರು.

" ಅಂದರೆ ನಮ್ಮ ಸುಂದರಿಯ ಬಗ್ಗೆಯೇ ಕಾಣುತ್ತದೆ. ಡಾಕ್ಟರ, ನಾವು ಪೂರ್ಣದರಿದ್ರರು. ಚೇಷ್ಟೆ ಮಾಡಬೇಡಿರಿ"

" ಹಾಗಾದರೆ ನಿಮ್ಮ ಸಮ್ಮತಿಯು ಇದೆಯಷ್ಟೇ ?"

" ಓಹೋ, ಹೀಗಾದರೆ ನಮ್ಮ ಭಾಗ್ಯವು ತೆರೆದಂತಾಯಿತು. ದುಃಖದ ದಿವಸಗಳು ಅಡಗಿದಂತಾದವು. ಚಹವಾಗಿದೆ; ತೆಗೆದುಕೊಳ್ಳಬೇಕು".

ಡಾಕ್ಟರರು ಚಹ ಕುಡಿಯುತ್ತ " ನಾಳಿನ ದಿವಸ ನಮ್ಮ ಚಿಕ್ಕಪ್ಪನ ಮಗನು ಬರುವವನಿದ್ದಾನೆ. ಅವನು ಬಂದ ಬಳಿಕ ಈ ಮಾತಿನ ವಿಚಾರ ಮಾ ಡುವ. ಇಷ್ಟಾಗಿ ನಾಳೆ ರವಿವಾರ; ಕೆಲಸವೂ ಅಷ್ಟಿರುವದಿಲ್ಲ. "

" ಹಾಗಾದರೆ ತಾವು ಉಭಯತರು ಅಣ್ಣತಮ್ಮಂದಿರು ನಮ್ಮಲ್ಲಿಯೆ ಊಟಕ್ಕೆ ಬರುವದಾಗಬೇಕು".

"ಪೂರ್ಣ ಒಪ್ಪಿಗೆ; ಖಂಡಿತವಾಗಿ ಬರುವೆವು. ಒಳ್ಳೆಯದು; ಬರುವೆನು".

---

(೭)

ಈಹೊತ್ತು ಲಕ್ಷ್ಮೀದೇವಿಯ ಬಿಡಾರದಲ್ಲಿ ಬಹಳೇ ಗಲಾಟೆಯಾಗಿ ದ್ದಿತು. ಎಲ್ಲಿ ನೋಡಿದಲ್ಲಿ ಆನಂದದ ಕೋಲಾಹಲವೇ ಕೋಲಾಹಲವು. ಡಾಕ್ಟರ ಸಾಹೇಬರ ಪದರಿನಲ್ಲಿ ಸುಂದರಿಯು ಬಿದ್ದಳು. ಸುಂದರಿ ಮತ್ತು ರಾಘವೇಂದ್ರ ಇವರ ವಿವಾಹವು ಒಳ್ಳೆಯ ವಿಜೃಂಭಣೆಯಿಂದ ನಡೆದಿದೆ. ಸಮುದ್ರವು ಉಕ್ಕೇರಿ ಬರುವಂತೆ, ಎಲ್ಲಿ ನೋಡಿದಲ್ಲಿ ಆನಂದವು ಉಕ್ಕೇರಿ ಬರಹತ್ತಿದೆ-ಲಕ್ಷ್ಮೀದೇವಿಯು ಉತ್ಸಾಹ ಭರಿತಳಾಗಿ, ಬೀಗರ ಆದರೋಪಚಾರಗಳನ್ನು ಪ್ರಸನ್ನಮುಖದಿಂದ ಮಾಡಹತ್ತಿದ್ದಾಳೆ. ಅವಳಿಗೆ ಈ ಹೊತ್ತು ದೊಡ್ಡ ಚಿಂತೆ ತಪ್ಪಿದಂತಾಯಿತು.

ರಂಗೋಲಿ, ಎಲೆ ಇವುಗಳನ್ನು ಹಾಕುವ ಸಿದ್ಧತೆ ನಡೆದಿದೆ. ಅಷ್ಟರಲ್ಲಿ ಡಾಕ್ಟರಸಾಹೇಬರು ತಮ್ಮ ಬಂಧುವನ್ನು ಕರೆದುಕೊಂಡು ಬಂದು ಮೇಲುಪ್ಪ

ರಿಗೆಯ ಮೇಲೆ ಹೋಗಿ ಕುಳಿತರು. ಸ್ವಲ್ಪ ಹೊತ್ತಿಗೆ ಡಾಕ್ಟರ ಸಾಹೇಬರು ಇನ್ನೂ ಊಟಕ್ಕೆ ಕೂಡ್ರುದೇಕಾದರೆ ಎಷ್ಟು ಅವಕಾಶ ಬೇಕೆಂದು ನೋಡಲು ಕೆಳಗಿಳಿದು ಬಂದರು.

“ ಏಕೆ! ಡಾಕ್ಟರಸಾಹೇಬರೇ, ಹಸಿವೆ ಬಹಳವಾದಂತೆ ಕಾಣುತ್ತದೆ! ” ಲಕ್ಷ್ಮೀದೇವಿಯುಂದಳು.

“ ಹಾಗೇನೂ ಇಲ್ಲ- ಕೆಳಗೆ ಏನು ನಡೆದದೆ! ಎಂಬದನ್ನು ಸುಮ್ಮನೆ ನೋಡಲು ಬಂದೆ—”

“ ನಿಮ್ಮ ಅಣ್ಣಂದಿರು ಸುಂದರಿಯ ಬಗ್ಗೆ ಏನಾದರೂ ಚಕಾರಶಬ್ದ ತೆಗೆದರೇನು!

“ ಏನೂ ಇಲ್ಲ. ಪೂರ್ಣಸಮ್ಮತಿಕೊಟ್ಟಿದ್ದಾರೆ.” ತಮ್ಮ ಅಣ್ಣನನ್ನು ದ್ದೇಸಿಶಿ. ಡಾಕ್ಟರರು- “ಅಣ್ಣಾ, ಎಲೆಬಡಿಸಿ ಸಿದ್ಧವಾಗಿದೆ. ಕೆಳಗೆ ಬರಬೇಕು.” ರಾಘವೇಂದ್ರರಾಯರ ಅಣ್ಣಂದಿರು ಮೆಲ್ಲಮೆಲ್ಲನೆ ಕೆಳಗಿಳಿದು ಬಂದರು. ಅವ ರನ್ನು ಕಂಡಕೂಡಲೆ ಸುಂದರಿಯು ನಿರ್ವಿಣ್ಣಳಂತೆ ಆದಳು. ಲಕ್ಷ್ಮೀದೇವಿಗೆ ಭವಳಿ ಬಂದು ಕೆಳಗೆ ಬಿದ್ದಳು. ಕೂಡಲೆ ಸುಂದರಿಯು ಅವಳನ್ನು ಹಿಡಿದೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡಳು. ರಾಘವೇಂದ್ರರಾಯರು ಔಷಧೋಪಚಾರ ನಡೆಸಿದರು.

ಓದುಗರೇ, ಈ ಆಗಂತುಕನಾದ ಬೀಗನು ಬೇರೆ ಯಾರೂ ಆಗಿರದೆ ರಾಘವೇಂದ್ರರಾಯರ ಅಣ್ಣನೂ, ಲಕ್ಷ್ಮೀದೇವಿಯ ಪತಿಯೂ ಆದ ನಾರಾಯಣ ರಾಯನಾಗಿದ್ದನು.

ಲಕ್ಷ್ಮೀದೇವಿಗೆ ಎಚ್ಚರ ಬಂದಿತು.

“ ಪ್ರಾಣಕಾಂತ, ಯಾಕೆ! ತಾವು ಇತ್ತಕಡೆಗೆ ಎಲ್ಲಿಗೆ! ” ಉಬ್ಬಸ ಪಡುತ್ತ ನಾರಾಯಣರಾಯನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, ಲಕ್ಷ್ಮೀದೇವಿಯು ಹೀಗೆಂದಳು. “ಈ ಪಾಪಿಷ್ಠಳನ್ನು ಕ್ಷಮಿಸಿರಿ; ನಾನು ಚಾಂಡಾಲಿನಿಯಾಗಿದ್ದೇನೆ. ತಮ್ಮ ಕೂಡ ನಿಷ್ಠುರತನದಿಂದ ನಡೆದುಕೊಂಡೆನು. ಕಠೋರಶಬ್ದಗಳಿಂದ ನಿಮ್ಮ ಕೋಮಲಹೃದಯವನ್ನು ನೋಯಿಸಿದೆನು. ಅವೆಲ್ಲ ವುಗಳ ಪ್ರಾಯಶ್ಚಿತ್ತವನ್ನು ದೇವರು ನನಗೆ ಚೆನ್ನಾಗಿ ಕೊಟ್ಟನು—”

“ ಲಕ್ಷ್ಮೀದೇವೀ, ಇದೇನು? ಹೀಗೇಕೆ? ನಿನ್ನ ಮೇಲೆ ನಾನೆಂದಿಗೂ ಸಿಟ್ಟಾಗಿಲ್ಲ.” ಲಕ್ಷ್ಮೀದೇವಿಯಿಂದ ತನ್ನ ಪಾದಗಳನ್ನು ಬಿಡಿಸಿಕೊಂಡು, ಬಾಹುಪಾಶದಿಂದ ಗಟ್ಟಿಯಾಗಿ ಅಪ್ಪಿಕೊಂಡು ನಾರಾಯಣರಾಯನಂದದ್ದು. “ಪ್ರಿಯೇ ನಾನೆಂದಾದರೂ ನಿನ್ನ ಮೇಲೆ ಸಿಟ್ಟಾಗಿದ್ದೇನೆಯೇ? ನೀನೇ ಹೇಳು ನಿಜವಾಗಿ!

“ ಇಲ್ಲ. ಆದರೆ ನಾನೆಂದೂ ನಿಮ್ಮ ಕೂಡ ಸರಸಸಲ್ಲಾಪಗಳನಾಡಲಿಲ್ಲ. ನನಗೆ ನಾಚಿಕೆ ಬರುತ್ತವೆ. ಯಾವ ಮುಖದಿಂದ ನಿಮ್ಮನ್ನು ಕ್ಷಮೆಬೇಡಲಿ?”

“ ದೇವೀ, ಆದದ್ದಾಗಿ ಹೋಯಿತು. ನನಗೆ ಎಲ್ಲ ಸಂಗತಿಯು ತಿಳಿದು ಬಂದಿದೆ. ಈಗ ನಾನು ಬಂದಿಲ್ಲವೇ? ದುಃಖಮಾಡಬೇಡ.”

“ ಆದರೆ ತಾವೇಕೆ ಈಕಡೆಗೆ ಬಂದಿರಿ?–”ನಾರಾಯಣರಾಯನ ವಕ್ಷಃಸ್ಥಳದ ಮೇಲೆ ತನ್ನ ತಲೆಯನ್ನಿಟ್ಟು ಲಕ್ಷ್ಮೀದೇವಿಯು ಕೇಳಿದಳು.

“ ನನಗೆ ರಾಘವೇಂದ್ರನ ಪತ್ರ ಬಂದಿತು. ನಾನು ಮೊದಲು ನಿಮ್ಮ ಮನೆಯನ್ನು ಬಿಟ್ಟು ಹೊರಟವನು ಹಾಗೆಯೇ ಅವ್ವನ ಕಡೆಗೆ ಹೋದೆನು. ಆ ಹೊತ್ತಿನ ದಿವಸವೇ ಅವ್ವನು ಸ್ವರ್ಗಸ್ಥಳಾದಳು. ನನಗೆ ಬಹಳೇ ದುಃಖವೆನಿಸಿತು. ಆಗಲೇ ನಾನು ನೌಕರಿಯನ್ನು ಹಿಡಿದೆನು. ನನಗೆ ಈಗ ೪೦೦ ರೂಪಾಯಿ ಸಂಬಳವಿದೆ. ದೇವೀ. ಈಗೇನು ನಮಗೆ ಕಡಿಮೆಯಾಗಿದೆ?”

“ ಆದರೆ, ಏನಾದರೂ ನಮ್ಮ ಮನೆಯ ಸಂಬಂಧವಾಗಿ ಗೊತ್ತಿದೆಯೋ?”

“ ದೇವೀ, ನಾನು ನಿಮ್ಮ ಮನೆಯನ್ನು ಬಿಟ್ಟು ತೆರಳಿದಾಗ ನಿನ್ನಮೇಲೆಯೂ ನಿನ್ನ ತಂದೆತಾಯಿಗಳ ಮೇಲೆಯೂ ಸಿಟ್ಟಾಗಿದ್ದೆನು! ಇರಲಿ; ಆದದ್ದಾಗಿಹೋಯಿತು. ಮಿಂಚಿಹೋದ ಮಾತಿಗೆ ಚಿಂತಿಸಿ ಫಲವಿಲ್ಲ. ಹೋದ ವರ್ಷ ನಾನು ನಿಮ್ಮನ್ನು ನಾಲ್ಕೂ ಕಡೆಗೂ ಹುಡುಕಿಸಿದೆನು. ಆದರೆ ನಿಮ್ಮ ಶೋಧವಾಗಲಿಲ್ಲ. ಇನ್ನು ಮೇಲೆ ಪೋಲೀಸರಿಗೆ ವರದಿ ಕೊಡಬೇಕೆಂದು ಮಾಡಿದ್ದೆನು. ಇಷ್ಟರಲ್ಲಿ ರಾಘವೇಂದ್ರನ ಪತ್ರ ಬಂದದ್ದರಿಂದ, ನನಗೆ ಇತ್ತ ಕಡೆಗೆ ಹೊರಟುಬರಬೇಕಾಯಿತು. ಅವನು ನನ್ನ ಚಿಕ್ಕವ್ವನ ಮಗನು.”

“ ಹೀಗೇನು! ಹಾಗಾದರೆ ಎನ್ನ ಮೇಲೆ ಕುಪಿಸಿಲ್ಲವಷ್ಟೇ? ಇನ್ನು ಮೇಲೆ ನಾನು ನಿಮ್ಮ ಆಜ್ಞೆಯಂತೆ ನಡೆಯುವೆ. ಎಂದೂ ಇದಿರಾಡುವದಿಲ್ಲ. ಈಗ ನನಗೆ ಪತಿವ್ರತೆಯರ ಧರ್ಮದ ಮರ್ಮವು ಗೊತ್ತಾಯಿತು. ಗಂಡರಾಮಿಯಂತೆ ನಡೆ

ಯಬೇಕೆಂಬ ದುಷ್ಟಭಾವನೆಯು ನನ್ನಲ್ಲಿ ನೆಲೆಗೊಂಡಿತ್ತು. ಈಗೆಲ್ಲ ಅದು... ” ಹೀಗೆ ಹೇಳಹೇಳುತ್ತಲೇ ಲಕ್ಷ್ಮೀದೇವಿಯು ಕಣ್ಣುಗಳು ಅಶ್ರುಗಳಿಂದ ತುಂಬಿದವು.

“ ಪ್ರಿಯಬಂಧೂ, ರಾಘವೇಂದ್ರಾ, ಈಗ ನನ್ನ ದೇವಿಯು ಜಗತ್ತಿನಲ್ಲಿಯ ಅನುಭವದ ಮೂರ್ತಿಯಾಗಿದ್ದಾಳೆ. ಪತಿವ್ರತಾಪಂಡಿತಾಶಿರೋಮಣಿಯಾಗಿದ್ದಾಳೆ”

“ ಶ್ರೀಮಂತಿಕೆಯ ಸೊಕ್ಕಿನಿಂದ ಕುರುಡಳಾದ, ನನ್ನ ಕಣ್ಣುಗಳಲ್ಲಿ ದೇವರು ಚೆನ್ನಾಗಿ ಅಂಜನಹಾಕಿದ್ದರಿಂದಲೇ...........”

“ ಹು ಹು ........”ಲಕ್ಷ್ಮೀದೇವಿಯ ಬಾಯಿಯ ಮೇಲೆ ಕೈಯನ್ನಿಟ್ಟು ಸುಮ್ಮನಿರಿಸಿ ನಾರಾಯಣರಾಯನಂದದ್ದು—“ಹೀಗೇಕೆ ಸುಮ್ಮಸುಮ್ಮನೆ ಮಾತ ನಾಡುವದು? ಒಳ್ಳೆಯದು ನಡೆ ಊಟಕ್ಕೆ ತಡವಾಗುವದು.”

“ ಅತ್ತಿಗೆಯವರೇ, ನಮಗೆ ಬಹಳೇ ಹಸಿವೆಯಾಗಿದೆ.........” ನಡುವಂತರದಲ್ಲಿ ಡಾಕ್ಟರ ಸಾಹೇಬರ ಶಬ್ದದ ಗುಡುಗು ಕೇಳಿಸಿತು.

“ ಬರಬೇಕು ಡಾಕ್ಟರಸಾಹೇಬ, ಎಲೆಬಡಿಸಿ ಸಿದ್ಧವಾಗಿದೆ.” ಎಂದು ಲಕ್ಷ್ಮೀದೇವಿಯು ಉತ್ತರವಿತ್ತಳು.

“ ಏನು? ಅತ್ತಿಗೆಯವರೇ, ನಮ್ಮ ಕುಟುಂಬಕ್ಕೆ ಎಂಥ ಹೂವನ್ನು ಕೊಡಬೇಕೆಂದು ಮಾಡಿದ್ದಿರಿ?” ಡಾಕ್ಟರರು ಲಕ್ಷ್ಮೀದೇವಿಯನ್ನುದ್ದೇಶಿಸಿ ಅಂದರು ಲಕ್ಷ್ಮೀದೇವಿಯು ನಗೆಚಾಟಿಕೆಯಿಂದ ಡಾಕ್ಟರರಿಗೆ—

“ಡಾಕ್ಟರ, ನೀವಿಷ್ಟು ಉತಾವಳಿಯವರಿದ್ದೀರೆಂದು ನನಗೆನಿಸಿದ್ದಿಲ್ಲ!”

“ ಇದರಲ್ಲೇನಿದೆ ಉತಾವಳಿಯು? ಕೊಡಬೇಕೆಂದು ಮಾಡಿದ್ದನ್ನು ಕೊಟ್ಟು ಬಿಟ್ಟರಾಯಿತು. ಅಂದರೆ ನಿಮ್ಮದು ನೀವು ತೆಗೆದುಕೊಂಡು, ನನ್ನದು ನಾನು ತೆಗೆದುಕೊಂಡಂತಾಗುತ್ತದೆ!” ನಗುತ್ತ ಡಾಕ್ಟರರಂದರು.

“ ಡಾಕ್ಟರ ರಾಘವೇಂದ್ರರಾಯರೇ, ನನಗೆ ಜಡ್ಡಾದಾಗ ನೀವು ಬಹಳೇ ಶ್ರಮಪಟ್ಟು ಗುಣಪಡಿಸಿದಿರಿ. ದುಡ್ಡಿನಿಂದಲೂ ಅಲ್ಲದೆ, ಎಲ್ಲ ಬಗೆಯಿಂದಲೂ ಸಾಹಾಯ್ಯ ಮಾಡಿದಿರಿ. ಅದಕ್ಕೆ ನಿಮಗೆ ತಕ್ಕ ಪ್ರತಿಫಲವಾದ ಗುಲಾಬೀ ಹೂವನ್ನು ಕೊಡುತ್ತೇನೆಂದು ಹೇಳಿದ್ದೆನಲ್ಲವೇ ? ಆ ಗುಲಾಬೀ ಹೂವೇ ನನ್ನ ತಂಗಿ ಸುಂದರಿಯಾಗಿದ್ದಾಳೆ. ಈ ಹೂವನ್ನು ನಿಮ್ಮ ಹೃದಯಮಂದಿರದಲ್ಲಿ ಧರಿಸಿರಿ. ಈ ಹೂವೇ ನಿಮ್ಮ ಶ್ರಮಕ್ಕೆ ಹಾಗೂ ನಿಮ್ಮ ಉಪಕಾರಕ್ಕೆ ಯೋಗ್ಯಪ್ರತಿಫಲವಾಗಿದೆ.

# ನರಸಿಂಗನಾಯಕ ಅಥವಾ ಕರ್ನಾಟಕವೀರ

ತಾನು ಸಾರ್ವಭೌಮನಿದ್ದು ವಿಜಯನಗರದವನಂಥ ಯಃಕಶ್ಚಿತ ರಾಜನು ಈ ಪ್ರಕಾರ ಅಸಮ್ಮತಿ ತೋರಿಸುವದೆಂದರೆ, ತನಗೆ ಅಪಮಾನಮಾಡಿ ದಂತಾಯಿತೆಂದು ತಿಳಿದು, ಮುಜಾಹೀದನು ತನ್ನ ಯಾವತ್ತು ಸೈನ್ಯವನ್ನು ಅನುಗೊಳಿಸಿದನು. ಅದರ ಕೆಲವು ಭಾಗವನ್ನು ತಾನು ಕೇಳಿಕೊಂಡ ಪ್ರದೇಶ ಗಳನ್ನು ಹಿಡಿದುಕೊಳ್ಳಲಿಕ್ಕೂ, ಉಳಿದದ್ದನ್ನು ವಿಜಯನಗರದ ರಾಜನ ಸಂಗಡ ಕಾದಾಡಲಿಕ್ಕೂ ಸಾಗಿಸಿದನು.

ವಿಜಯನಗರದ ರಾಮರಾಯನಾದರೂ ತಕ್ಕ ವ್ಯವಸ್ಥೆಮಾಡಿ ನಗರದೊಳಗೆ ನರಸಿಂಗನಾಯಕನೆಂಬೊಬ್ಬ ಇಪ್ಪತ್ತುನಾಲ್ಕು ವರುಷದ ಶೂರ ಸರದಾರ ನನ್ನು ಅರ್ಧ ಸೈನ್ಯದೊಡನೆ ಕಾವಲಿಗೆ ನೇಮಿಸಿ, ಉಳಿದ ಸೈನ್ಯದೊಡನೆ ದಿಲ್ಲೀ ಕನಿಗಿದಿರಾದನು.

ತುಂಗಭದ್ರೆಯ ಕೆಲವಂತರದ ಮೇಲೆ ಸುಲ್ತಾನನು ಬೀಡುಬಿಟ್ಟಿದ್ದನು. ರಾಯರು ಸೈನ್ಯದೊಡನೆ ತಕ್ಕ ಏರ್ಪಾಡುಮಾಡಿ ಯುದ್ಧಕ್ಕೆ ಸನ್ನದ್ಧರಾದರು. ಮರುದಿನ ಪ್ರಾತಃಕಾಲದ ಏಳುಗಂಟೆಗೆ ಯುದ್ಧವು ಪ್ರಾರಂಭವಾಯಿತು. ಎರಡೂ ಬಣದವರು ಒಳ್ಳೆಯ ವೀರಾವೇಶದಿಂದ ಕಾದಿದರು. ಸಂಜೆಗೆ ಎಷ್ಟೋ ಶೂರರು ರಣದೇವಿಗೆ ಆತ್ಮಬಲಿ ಕೊಟ್ಟದ್ದು ಗೋಚರವಾಯಿತು. ಅಂದಿನ ಯುದ್ಧದಲ್ಲಿ ನಮ್ಮ ರಾಯರ ಕೊರಳಿಗೆ ಜಯಮಾಲೆ ಬಿತ್ತು. ಆದರೆ ಕನ್ನಡಿ ಗರ ದುರ್ದೈವದಿಂದ ಅಂದು ರಾತ್ರಿ ಸುಲ್ತಾನನು ಮೋಸದಿಂದ ರಾಯರ ದಂಡಿನ ಮೇಲೆ ಬಿದ್ದು ಬಹು ಜನರನ್ನು ನುಚ್ಚು ನೂರಾಗುವಂತೆ ಕಡಿದುಹಾಕಿ ದನು. ಕ್ಷಣದೊಳಗೆ ರಾಯರ ದಂಡಿನಲ್ಲಿ ಹಾಹಾಕಾರವೆದ್ದದ್ದನ್ನು ಕೇಳಿ, ರಾಯರು ಉಪಾಯಗಾಣದವರಾದರು. ತಮ್ಮ ಬಾಜಾರಬುಣಗಿನವರ ಹಾಗೂ ರಾಣೀವಾಸದವರ ಸ್ಥಿತಿಯೇನಾಗುವದೋ ಎಂದು ಅವರು ಆಲೋಚಿ ಸುತ್ತಿರಲು, ಸುಲ್ತಾನನು ತಮ್ಮನ್ನು ಹಿಡಿಯಬಂದಿರುತ್ತಾನೆಂದು ಚಾರರ ಮುಖ ದಿಂದ ತಿಳಿದು ಅಡವಿ ಸೇರಿದರು. ಸುಲ್ತಾನನು ಛಾವಣಿಯೆಲ್ಲವನ್ನೂ ಸುಲಿದು, ಹೆಂಗಸರನ್ನೂ ಹುಡುಗರನ್ನೂ ಕೂಡಿ ೭೦೦ ಮಂದಿಯನ್ನು ಸೆರೆಹಿಡಿದು ವಿಜಯನಗರದ ಕಡೆಗೆ ಸಾಗಿದನು.

ಸುಲ್ತಾನನು ದಂಡಿನ ಸಂಗಡ ಹೋಗುವಾಗ ಅಕಸ್ಮಾತ್ತಾಗಿ ಅವನ ದೃಷ್ಟಿಯು ಒಬ್ಬ ಸುಂದರ ತರುಣಿಯ ಕಡೆಗೆ ಹೊರಳಿದ್ದು ತಿರುಗಲೇ ಇಲ್ಲ. ಅವಳನ್ನು ಅಪಹರಿಸಬೇಕೆಂದು ಅವನು ಮನಸ್ಸಿನಲ್ಲಿ ಬಗೆಬಗೆಯಾಗಿ ಆಲೋಚಿಸಹತ್ತಿದನು. ಕೆಲವು ಹೊತ್ತಿನ ಮೇಲೆ ಆತನು ಉಳಿದ ಯಾವತ್ತೂ ಹೆಂಗಸರನ್ನೂ ಹುಡುಗರನ್ನೂ ಅವಮಾನಗೊಳಿಸಿ, ಆ ತರುಣಿಯನ್ನು ಮಾತ್ರ ಇರಿಸಿಕೊಂಡು ಬಿಡುಗಡೆ ಮಾಡಿದನು. ಈ ಸುಂದರತರುಣಿಯು ಆನೆಗೊಂದಿಯ ದಿವಾಣನ ತಮ್ಮನ ಮಗಳಾದ ಪದ್ಮೆಯು. ಇವಳು ಆಗಿನ ಕಾಲದ ಸ್ತ್ರೀಯರಲ್ಲಿ ಅತಿಸುಂದರಿಯಾಗಿದ್ದಳು. ಸುಲ್ತಾನನು ವಿಜಯನಗರದ ಕಡೆಗೆ ಸಾಗಿದವನು ಕೋಟೆಯ ಬಾಗಿಲಿಗೆ ಬಂದು ತಲುಪಿದನು. ಆಗ ನರಸಿಂಗನಾಯಕನು ವಿಜಯನಗರದ ಕೋಟೆಯ ೧೪ ಗೋಡೆಗಳಲ್ಲಿ ಕಾವಲಿಟ್ಟು ಕೋಟೆಯ ಬಾಗಿಲುಗಳನ್ನು ಹಾಕಿಸಿ, ತನ್ನ ಸೈನ್ಯದಲ್ಲಿ ಎರಡು ಭಾಗಮಾಡಿ, ಒಂದನ್ನು ನಗರರಕ್ಷಣೆಗಾಗಿ ಒಳಗೆ ಇಟ್ಟು, ಮತ್ತೊಂದನ್ನು ಸಂಗಡ ಕರಕೊಂಡು ಹೊರಗೆ ಅನುವಾಗಿ ನಿಂತನು. ನರಸಿಂಗನಾಯಕನು ತನ್ನ ಸೈನ್ಯದಲ್ಲಿ ಅರ್ಧಚಂದ್ರಾಕೃತಿಯ ವ್ಯೂಹವನ್ನು ರಚಿಸಿ ಐದು ಸಾಲಾಗಿ ನಿಲ್ಲಿಸಿ ಯುದ್ಧಕ್ಕೆ ಪ್ರಾರಂಭಮಾಡಿದನು. ಮೊದಲಿನ ಸಾಲಿನಲ್ಲಿ ಯಾರಾದರೂ ಮಡಿದರೆ, ಹಿಂದಿನ ಸಾಲಿನಲ್ಲಿಯವರು ಬಂದು ಆಸ್ಥಳದಲ್ಲಿ ನಿಂತು ಯುದ್ಧಮಾಡಬೇಕೆಂದು ಗೊತ್ತಾಗಿತ್ತು. ಈ ಪ್ರಕಾರದ ವ್ಯವಸ್ಥೆಯಿಂದ ಕೆಲಹೊತ್ತಿನ ವರೆಗೆ ಯುದ್ಧ ನಡೆಯಿತು. ಎರಡೂ ಬಣದವರು ಒಳ್ಳೆಯ ಜಾಗ್ರತೆಯಿಂದ ಕಾದಿದರು. ಮುಸಲ್ಮಾನರು ವಿಜಯನಗರದ ಸೈನ್ಯವನ್ನು ಹೊಡೆದೋಡಿಸಹತ್ತಿದರು. ಆಗ ನರಸಿಂಗನಾಯಕನು ರೇಗಿದ್ದು ತನ್ನ ದಂಡಾಳುಗಳಿಗೆ "ಎಲೈ ವೀರರೇ, ರಣಾಂಗಣದಿಂದ ಓಡಿಹೋಗುವದು ಶೂರರಿಗುಚಿತವಲ್ಲ. ವೈರಿಗಳಿಗೆ ಬೆನ್ನು ತೋರಿಸುವದು ಹೇಡಿತನದ ಲಕ್ಷಣವಾಗಿರುವದು. ತಡೆಯಿರಿ, ನಿಲ್ಲಿರಿ; ಧೈರ್ಯಗುಂದದೆ ವೈರಿಗಳ ಮೇಲೆ ಸಾಗಿ ಹೋಗಿ ಕಾದಾಡೋಣ. ಹೊರಳಿರಿ." ಎಂದು ಆವೇಶಯುಕ್ತವಾಣಿಯಿಂದ ಹೇಳಿ ಬಲು ಸಿಟ್ಟಿನಿಂದ ವೈರಿಗಳ ಮೇಲೆ ಏರಿಹೋದನು. ಅಚಲಧೈರ್ಯದ ತಮ್ಮ ವೀರನಾಯಕನನ್ನು ಕಂಡು ಎಲ್ಲ ಸೈನಿಕರೂ ಹಿಂದಿರುಗಿ ಒಳ್ಳೆಯ ಹುರುಪಿನಿಂದ ವೈರಿಗಳ ಮೇಲೆ ಏರಿಹೋದರು. ಮುಸಲ್ಮಾನರು ತಾವು ಮೊದಲು ಗೆದ್ದದ್ದರಿಂದ ಈಗಾದರೂ ತಾವೇ ಗೆಲ್ಲುತ್ತೇವೆ

ಎಂಬ ಜಂಬದಿಂದ ಕಾದಲನುವಾದರು. ಆದರೆ ಸ್ವಾಭಿಮಾನದಿಂದ ಕಾದುವ ಕನ್ನಡಿಗರ ಮುಂದೆ ದುರಭಿಮಾನದ ಮುಸಲ್ಮಾನರ ಆಟವು ನಡೆಯದಾಯಿತು. ಪ್ರತಿಯೊಬ್ಬ ಕರ್ನಾಟಕಪುತ್ರನು ಸರತಿಗೆ ಇಬ್ಬರು ಮೂವರು ಮುಸಲ್ಮಾನರ ರುಂಡಗಳನ್ನು ಹಾರಿಸಹತ್ತಿದನು. ಸೈನಿಕರ ಕತ್ತಿಯ ಠಣತ್ಕಾರವೂ ಕುದುರೆಗಳ ಖುರಪುಟದಿಂದೆದ್ದ ಧೂಳಿಯೂ ಮುಸಲ್ಮಾನ ಸೈನಿಕರನ್ನು ಬೇಸರಗೊಳಿಸಿದವು. ಇದೇ ಪ್ರಕಾರವಾಗಿ ಸಂಜೆಯ ವರೆಗೆ ಯುದ್ಧವು ನಡೆದು ಸಂಜೆಗೆ ಎಷ್ಟೋ ಶೂರರ ಮುಂಡಗಳು ಭೂಮಿಯ ಮೇಲೆ ಒರಗಿದವು. ಯುದ್ಧವು ನಿಂತು ಎಲ್ಲವೂ ಸ್ತಬ್ಧವಾಯಿತು.

ರಾತ್ರಿಯ ಹೊತ್ತಿನಲ್ಲಿ ನರಸಿಂಗನಾಯಕನು ತನ್ನ ದಂಡಾಳುಗಳನ್ನು ಕೋಟೆಯೊಳಗೆ ಕಳುಹಿದ್ದನು. ತಾನೂ ಒಳಗೆ ಹೋಗಬೇಕೆನ್ನುವಷ್ಟರಲ್ಲಿಯೇ ಸುಯ್ಯೆಂದು ಸಪ್ಪಳಮಾಡುತ್ತ ಒಂದು ಬಾಣವು ಬಂದು ನಾಯಕನ ಎಡಗೈಯ ರಟ್ಟೆಗೆ ಬಡಿಯಿತು. ಆಗ ನರಸಿಂಗನಾಯಕನು ತನ್ನ ಸೇವಕರಿಗೆ ಕೋಟೆಯ ಬಾಗಿಲುಗಳನ್ನಿಕ್ಕಿಕೊಳ್ಳಲಿಕ್ಕೆ ಅಪ್ಪಣೆಮಾಡಿ, ತಾನು ಬಾಣ ಬಂದ ದಿಕ್ಕಿನ ಕಡೆಗೆ ಹೋಗಹತ್ತಿದನು. ಅವನು ತನ್ನ ಬೆಟ್ಟದಂಥ ಕುದುರೆಯನ್ನು ಓಡಿಸುತ್ತಿರುವಾಗ ಇಬ್ಬರು ಯವನ ರಾವುತರು ಕತ್ತಿಗಳನ್ನು ಹಿರಿದು ಒಮ್ಮೆಲೆ ಆತನ ಸ್ಮೇಮೇಲೆ ಬಂದರು. ಅಚಲಧೈರ್ಯವುಳ್ಳವನೂ ಚಪಲನೂ ಆದ ನಮ್ಮ ನಾಯಕನು ಅವರ ಪೆಟ್ಟುಗಳನ್ನು ತಪ್ಪಿಸಿಕೊಂಡು ಹೋರಾಡಹತ್ತಿದನು. ಮೂವರೂ ಯುದ್ಧವಿಶಾರದರಾದದರಿಂದ ಬಹಳ ಹೊತ್ತಿನ ವರೆಗೆ ಯುದ್ಧವು ನಡೆಯಿತು. ಅವರಲ್ಲಿ ಒಬ್ಬ ಯುವನತರುಣನು ನರಸಿಂಗನಾಯಕನ ಕತ್ತಿಯನ್ನು ತುಂಡರಿಸಲು, ಚಪಲನಾದ ನಮ್ಮ ತರುಣನು ಭಾಲೆಯಿಂದ ಅವನನ್ನು ಕೊಂದು ಟಣ್ಣನೆ ಕುದುರೆಯ ಮೇಲಿಂದ ಹಾರಿ, ಮತ್ತೊಬ್ಬನನ್ನು ಬೆಟ್ಟದಂಥ ಆತನ ಕುದುರೆಯ ಮೇಲಿಂದ ಕೆಳಗೆಳೆದು ಕೆಡವಿ ಎದೆಯಮೇಲೆ ಕುಳಿತುಕೊಳ್ಳುವಷ್ಟರಲ್ಲಿಯೇ ಅಕಸ್ಮಾತ್ತಾಗಿ ಒಬ್ಬ ತರುಣಿಯು ಬಂದು ಇವನ ಕೈಹಿಡಿದಳು. "ವೀರೋತ್ತಮರೇ, ಈ ಬಡ ತರುಣಿಯು ಈ ಯುವನ ರಾವುತನನ್ನು ಕೊಲ್ಲಬಾರದೆಂದು ಬೇಡಿಕೊಳ್ಳುತ್ತಾಳೆ!" ಎಂದು ಅವಳಾಡಿದ ಮಂಜುಲಶಬ್ದಗಳನ್ನು ಕೇಳಿದ ನಮ್ಮ ನಾಯಕನು ಎದ್ದು ಒಂದೇ ಸವನೆ ಆತರುಣಿಯ ಕಡೆಗೆ ನೋಡತೊಡಗಿದನು. ಮುಸಲ್ಮಾನ ರಾವುತನೂ ಮೇಲಕ್ಕೆದ್ದು ತನಗೆ ಜೀವದಾನ

ಮಾಡಿದ ನರವೀರನಿಗೆ ಅತ್ಯಂತ ಕೃತಜ್ಞತಾವಾಣಿಯಿಂದ "ಮಹಾಶಯರೇ, ನಾನು ಶರಣಾಗತನು. ನನ್ನ ಜನುಮವಿರುವವರೆಗೆ ನಾನು ತಮ್ಮ ಪಾದಸೇವೆಯಲ್ಲಿಯೇ ಸವೆಯುತಕ್ಕವನೆಂದು ನಂಬಿರಿ." ಎಂದು ಹೇಳಿದನು.

ಇಷ್ಟಾಗುವದರೊಳಗೆ ಯಾರೋ ಹಿಂದಿನಿಂದ ಬಂದು ನರಸಿಂಗನಾಯಕನನ್ನು ಹೆಡಮುರಿಗೆ ಕಟ್ಟಿಕೊಂಡು ಸುಲ್ತಾನನ ಮುಂದೆ ನಿಲ್ಲಿಸಿದರು. ನಾಯಕನಿಗೆ ಮೈತುಂಬ ಗಾಯಗಳಾಗಿ ಒಂದೇ ಸವನೆ ರಕ್ತಸ್ರಾವವಾಗುತ್ತಿದ್ದದರಿಂದ ಆತನು ನಿಶ್ಚೇಷ್ಟಿತನಾಗಿ ಭೂಮಿಯ ಮೇಲೆ ಒರಗಿದನು. ಆಗ ಮುಜಾಹೀದನು ಅವನನ್ನು ಕುರಿತು "ಎಲೈ, ಗುಲಾಮನಾದ ತರುಣನೇ, ನಿನ್ನ ಅಚಲ ಧೈರ್ಯಕ್ಕೆ ನಾನು ಮೆಚ್ಚಿದೆನು. ನೀನು ನಿನ್ನ ಒಡೆಯನಿದ್ದ ಸ್ಥಳವನ್ನು ಹೇಳಿದರೆ ಮಾತ್ರ ನಿನ್ನ ಜೀವವುಳಿಯುವದು. ಇಲ್ಲದಿದ್ದರೆ ನಿನ್ನ ನೂರು ವರುಷಗಳು ಇಂದಿಗೇ ತೀರಿದವೆಂದು ತಿಳಿ." ಎಂದು ಹೇಳಿದನು.

ಈ ನಿಷ್ಠುರವಾಕ್ಯಗಳನ್ನು ಕನಸಿನಲ್ಲಿ ಕೇಳಿದಂತಾಗಿ, ಎಚ್ಚರತ್ತು ನಾಯಕನು ಚಟ್ಟನೇ ಎದ್ದು ಕುಳಿತು "ಕನ್ನಡನಾಡಿನ ಈ ತರುಣನು ಸಾವಿಗೆ ಅಂಜುವವನೆಂದು ತಿಳಿದಿರುವಿಯಾ? ದೇಶಸೇವೆಗಿಂತಲೂ ಸ್ವಾಮಿವಿಶ್ವಾಸಕ್ಕಿಂತಲೂ ನನ್ನ ಜೀವವು ಹೆಚ್ಚಿನದಲ್ಲ. ಈ ಜೀವವು ನನ್ನ ಜಡದೇಹದೊಳಗಿಂದ ಪಾರಾಗಿ ಹೋಗುವವರೆಗೂ ಸ್ವಾಮಿಘಾತವನ್ನು ಮಾಡದೆ, ದೇಶಸೇವೆಯಲ್ಲಿಯೇ ಇದ್ದು ಸವೆಯುವದೆಂದು ನಂಬು. ಕನ್ನಡನಾಡಿನ ವೀರನು ನಿನ್ನ ಅಂಜಿಕೆಗೆ ಬೆದರುವಂತಿಲ್ಲ. ಬೇಕಾದರೆ ದ್ವಂದ್ವಯುದ್ಧಕ್ಕೆ ಸಿದ್ಧನಾಗು." ಎಂದು ಕತ್ತಿಯನ್ನು ಹಿರಿಯಲಿಕ್ಕೆ ಸಿದ್ಧನಾದನು. ಇವನ ಗಾಯುಗಳನ್ನು ಕಟ್ಟುತ್ತಿದ್ದ ಒಬ್ಬ ತರುಣಿಯು ಇವನನ್ನು ಹಾಗೆ ಮಾಡಗೊಡದೆ ಪುನಃ ಮಲಗಿಸಿದಳು.

ವಾಚಕವೃಂದವೇ, ಈ ತರುಣಿಯು ಯಾರಾಗಿರಬಹುದೆಂದು ಊಹಿಸುತ್ತೀರಿ? ಹಿಂದಕ್ಕೆ ಯವನವೀರನನ್ನು ಕೊಲ್ಲುವಾಗ ನರಸಿಂಗನಾಯಕನ ಕಣ್ಣಿಗೆ ಬಿದ್ದ ತರುಣಿಯೇ ಇವಳು. ಇವಳು ನಾಯಕನ ಶೂರತನಕ್ಕೆ ಬೊಟ್ಟು ಕಚ್ಚಿ ಅವನಿಗೆ ತನ್ನ ಮನಸ್ಸನ್ನೊಪ್ಪಿಸಿ ಅವನ ದಾಸಿಯಾಗಿದ್ದಳು. ಅವಳ ಹೆಸರು ಗುಲ್ಜಾರಿಯು. ಗುಲ್ಜಾರಿಯು ಸುಲ್ತಾನನ ಕಕ್ಕನ ಮಗಳು. ಇವಳು ತನ್ನ ಅಣ್ಣನಾದ ಯವನವೀರನಿಗೆ ಜೀವದಾನಮಾಡಿಸಿದ ಬಳಿಕ ಈ ಅಣ್ಣ ತಂಗಿಯರಿಬ್ಬರೂ ನಾಯಕನ ಶುಶ್ರೂಷೆಯಲ್ಲಿ ತೊಡಗಿದ್ದರು. ಸುಲ್ತಾನನು ತನಗೆ ಈ

ವೀರನು ನಿಂದಕಶಬ್ದಗಳನ್ನಾಡಿದ್ದನ್ನು ಕೇಳಿ "ಎಲಾ, ಗುಲಾಮು, ನೀನು ನನ್ನ ಕಟ್ಟಿನೊಳಗೆ ಸಿಕ್ಕಿದ್ದು ಇನ್ನೂ ಮದವೇರಿರುವಿಯಲ್ಲ! ನಿನಗೆ ತಂಗುಳನ್ನವನ್ನು ಹಾಕಿ ತಂಗುಳ ನೀರನ್ನು ಕೊಟ್ಟು ಕತ್ತಲೆ ಕೋಣೆಯೊಳಗೆ ಹಾಕಿ ಒದ್ದಾಡಿಸಿದರೆ ನೀನೇ ನಿನ್ನ ಒಡೆಯನಿದ್ದ ಸ್ಥಳವನ್ನು ಹೇಳುವೆ!" ಎಂದನು.

ನಮ್ಮ ನಾಯಕನು ಬಹಳ ದಣಿದದ್ದರಿಂದ ಸ್ವಲ್ಪ ಜಂಪುಹತ್ತಿತು. ಕನಸಿನಲ್ಲಿ ಯಾವಳೋ ಒಬ್ಬ ತರುಣಿಯು ಬಂದು ಶೋಕಮಾಡುತ್ತಿರುವಂತೆ ಭಾಸವಾಯಿತು ಆಗ ನಮ್ಮ ಚರಿತ್ರನಾಯಕನು ಎಚ್ಚತ್ತು ನೋಡಲಾಗಿ ಅವನ ತಲೆಗಿಂಬಿನ ಹತ್ತರ ಒಬ್ಬ ಹಿಂದೂ ತರುಣಿಯು ಅಳುತ್ತ ಕುಳಿತಿರುವದನ್ನು ನೋಡಿದನು. ಅವನು ಅತ್ಯಾಶ್ಚರ್ಯದಿಂದ ತರುಣಿಯ ಕಡೆಗೆ ನೋಡಿದ ಕೂಡಲೆ ಅವಳ ಗುರುತು ಹತ್ತಿದಂತಾಗಿ "ಪದ್ಮೇ, ನೀನೇಕೆ ಇಲ್ಲಿ ಕುಳಿತಿರುವೆ?" ಎಂದು ಕೇಳಿದನು. ಆಗ ಪದ್ಮೆಯು ತನ್ನ ಸ್ಥಿತಿಯನ್ನು ತಿಳಿಸಿ "ಅಣ್ಣಾ, ನರಸನಾಯಕ, ಅಣ್ಣಾ, ನನ್ನ ಬಿಡುಗಡೆಯಾದರೆ ಹೇಗಾದರೂ ಮಾಡಿ ನಿನಗೆ ದಂಡಿನ ಸಾಹಾಯ್ಯಮಾಡುವೆನು!" ಎಂದಳು. ಅಷ್ಟರಲ್ಲಿ "ನಮಗೆ ಬಂದ ತೊಂದರೆಯು ಕ್ಷಣದಲ್ಲಿ ಪರಿಹಾರವಾಗುವದೆಂದು ನಂಬಿರಿ." ಎಂದು ಗುಲ್ಜಾರೆಯು ಹೇಳಿ ಪದ್ಮೆಯನ್ನು ಕುರಿತು "ತಂಗೀ ಪದ್ಮಾ, ಈಗಿರುವ ನನ್ನ ದಾಸೀವೇಷವನ್ನು ಹಾಕಿಕೊಂಡು ನೀರು ತರುವ ನೆವದಿಂದ ಹೊರಗೆ ಹೋಗು. ಯಾರಾದರೂ ನಿನ್ನನ್ನು ಕೇಳಿದರೆ 'ನಾನು ಕಾರಾಗ್ರಹದ ದಾಸಿಯು.' ಎಂದು ಹೇಳು." ಎಂದು ನುಡಿದಳು.

ಈ ಉಪಾಯವು ಮೂವರ ಮನಸ್ಸಿಗೂ ಬಂತು. ಪದ್ಮೆಯು ತಡಮಾಡದೆ ಹೊರಟು ಹೋದಳು. ಪೂರ್ವಪುಣ್ಯದ ಬಲದಿಂದ ಅವಳಿಗೇನೂ ತೊಂದರೆಯು ಬಾರದೆ, ಅವಳು ಸುರಕ್ಷಿತವಾಗಿ ಪಾರಾಗಿ ವಿಜಯನಗರವನ್ನು ಕಂಡು, ಅಲ್ಲಿಂದ ದಂಡನ್ನು ತಂದು ತಾನೇ ಸ್ವತಃ ಸೇನಾನಾಯಿಕೆಯಾಗಿ ಸುಲ್ತಾನನ ಛಾವಣಿಯನ್ನು ಸುಲಿದು ನಾಯಕನ ಬಿಡುಗಡೆ ಮಾಡಿದಳು. ವಿಪತ್ಕಾಲದಲ್ಲಿ ಸಾಹಾಯ್ಯಮಾಡಿದವಳನ್ನು ಕಾಣಬೇಕೆಂದು ನಾಯಕನು ಒಂಟಿಗನಾಗಿ ಹೋಗುತ್ತಿರಲು ೭-೮ ಮಂದಿ ಕಾವಲುಗಾರರು ಬಂದು, ಅವನನ್ನು ಹಿಡಿದುಕೊಂಡು ಹೋಗಿ ಪುನಃ ಸುಲ್ತಾನನ ಮುಂದೆ ನಿಲ್ಲಿಸಿದರು.

ಆಗ ಸುಲ್ತಾನನು ಬಲು ಸಿಟ್ಟಿನಿಂದ ತುಟಿಗಳನ್ನು ಕಚ್ಚುತ್ತ "ಹರಾಮಖೋರ, ನೀನು ಮಾಡಿದ ಕೆಲಸವು ಅತಿನೀಚತನದ್ದೂ ಅನ್ಯಾಯದ್ದೂ ಆಗಿರು

ವದು. ಮದಾಂಧನೇ, ದಿಲ್ಲಿಯ ಸಾರ್ವಭೌಮನ ಸಂಗಡ ಮಂಗನಂತೆ ಕುಚೇಷ್ಟೆ ಮಾಡುವೆಯಾ? ನಿನಗೆ ತಕ್ಕ ಶಿಕ್ಷೆಯನ್ನು ಕೊಟ್ಟಾಗಲೇ ನನ್ನ ಮನಸ್ಸು ಶಾಂತ ವಾಗುವದು." ಎಂದನು. ಅದಕ್ಕೆ ನಮ್ಮ ಕನ್ನಡ ವೀರನು "ಸುಲ್ತಾನನೇ, ನಾಯಿಯಂತೆ ಬರೀ ಬೊಗಳುವದರಲ್ಲೇನರ್ಥವಿದೆ ? ನಿನ್ನ ಸೊಕ್ಕನ್ನು ದೇವರೇ ಮುರಿಯುವನು. ಮದಾಂಧನೆ, ಪರಸ್ತ್ರೀಯರನ್ನು ಅಪಹರಿಸಿಕೊಂಡು ಹೋಗ ಲಿಕ್ಕೆ ನಾಚಿಕೆ ಬರುವದಿಲ್ಲವೆ?"

**ಸುಲ್ತಾನ:—** ಎಲೋ ಹೇಡಿಯೇ, ನಾವು ಹೆಂಗಸರನ್ನು ಅಪಹರಿಸ ಲಿಕ್ಕೆಂದು ಬಂದವರಲ್ಲ. ಹೆಂಗಸರನ್ನು ಬಿಡಿಸಿಕೊಳ್ಳುವ ಎದೆಯು ನಿಮ್ಮಲ್ಲಿ ಇದೆಯೋ ಇಲ್ಲವೋ ಎಂಬುದನ್ನು ನೋಡಲಿಕ್ಕೆ ಬಂದಿದ್ದೇವೆ.

**ನಾಯಕ:—** ಹೂ, ಬಂದಿದ್ದೀಯಾದೀತು. ನಿನ್ನ ಮನಸ್ಸಿನಲ್ಲಿ ಭಾರ ತೀಯರ ಪರಿಕ್ಷೆಯನ್ನು ಮಾಡಬೇಕೆಂದಿದ್ದರೆ ಮಾಡು. ಭಾರತೀಯರೇನು ಸಾಮಾನ್ಯರೆಂದು ತಿಳಿದಿರುವೆಯಾ? ಭಾರತಮಾತೆಯೆಂದರೆ ಏನೆಂದು ತಿಳಿದಿರುವಿ? ಭಾರತಮಾತೆಯು ಪರದೇಶದವರನ್ನು ಉಡಿಯಲ್ಲಿ ಹಾಕಿಕೊಳ್ಳದಿದ್ದರೆ, ಪರಧ ರ್ಮಿಗಳೂ ಪರಜನಾಂಗದವರೂ ಆದ ನೀವು ಮಣ್ಣುಪಾಲಾಗುವ ಹೊತ್ತು ಬರುತ್ತಿತ್ತು. ಭಾರತೀಯರ ಅನ್ನವನ್ನು ಉಂಡು ಭಾರತೀಯರ ಮೇಲೆಯೇ ತಿರುಗಿಬೀಳುವ ಪರದೇಶೀಯರೇ, ಭಾರತೀಯ ಅಬಲೆಯರನ್ನು ಹಿಂಸೆಪಡಿಸು ವದರಿಂದಲೇ ಭಾರತೀಯರ ಸತ್ವಪರೀಕ್ಷೆ ಮಾಡಿದಂತಾಯಿತೇ? ನಿಶ್ಶಸ್ತ್ರ ಜನರ ಮೇಲೆ ಕೈಯೆತ್ತುವ ನಿರ್ಲಜ್ಜರಾದ ಪರದೇಶೀಯರೇ, ಹೀಗೆ ಮಾಡಿದರೆ ನಿಮ್ಮ ನಾಶಕ್ಕೆ ನೀವೇ ಕಾರಣವಾಗುವಿರಿ. ಭಾರತೀಯರು ದೇಶಸೇವೆಗೂ, ತಮ್ಮ ರಾಜ್ಯಸಂರಕ್ಷಣೆಗೂ, ಸ್ವರಾಜ್ಯಪ್ರಾಪ್ತಿಗೂ ಮುಂದಿಟ್ಟ ಕಾಲನ್ನು ಎಂದೂ ಹಿಂದಿ ಡಲಿಕ್ಕಿಲ್ಲೆಂದು ಸೆರಗಿಗೆ ಗಂಟು ಹೊಡೆದುಕೊಳ್ಳಿರಿ. ಸುಲ್ತಾನ, ನಮ್ಮಲ್ಲಿ ರಣ ಪಾಂಡಿತ್ಯವನ್ನು ತೋರಿಸುವ ಮಹಾಮಹಾವೀರರು ನಿಮ್ಮ ಅನ್ಯಾಯದ ಜಾಲದಿಂದ ಕಾರಾಗ್ರಹದೊಳಗೆ ಬಿದ್ದಿದ್ದರೂ, ಮಿಕ್ಕ ನಮ್ಮ ಕನ್ನಡಿಗರು ಸೇಡು ತೀರಿಸಿಕೊಳ್ಳದೆ ಬಿಡಲಿಕ್ಕಿಲ್ಲೆಂದು ದೃಢವಾಗಿ ನಂಬು. ಕರ್ನಾಟಕದ ಪುನರು ದ್ಧಾರಕ್ಕಾಗಿಯೂ, ಭಾರತಮಾತೆಗಾಗಿಯೂ ಈ ತರುಣನು ಮುಂದೆಮುಂದೇ ಹೋಗುವನೆಂದು ತಿಳಿ.

ಸುಲ್ತಾನನು ಈ ಕಠೋರವಾಕ್ಯಗಳನ್ನು ಸಹಿಸಲಾರದೆ, ಇವನಿಗೆ ಯಾವ ಕಠಿಣಶಿಕ್ಷೆಯನ್ನು ವಿಧಿಸಲೆಂದು ಆಲೋಚಿಸುತ್ತಿರಲು, ನಮ್ಮ ಹಿಂದೂ

ತರುಣನಿಂದ ಮೊದಲು ಬಿಡುಗಡೆ ಹೊಂದಿದ ಯವನ ಸರದಾರನು ಅತಿಚಾತು ರ್ಯದಿಂದ ಇವನನ್ನು ಬಿಡುಗಡೆಮಾಡಿ ಕೊಟ್ಟವಚನದಂತೆ ನಡೆದನು. ನಮ್ಮ ಚರಿತ್ರನಾಯಕನು ಪದ್ಮೆ ಮತ್ತು ಗುಲ್ಜಾರೆಯರನ್ನೊಡಗೊಂಡು ಕೂಡಲೆ ವಿಜಯನಗರಕ್ಕೆ ಬಂದು ಸೈನಿಕರನ್ನು ಗುಂಪುಗೂಡಿಸಿ " ನಿರಾಶಾಮಯವಾದ ಮರುಭೂಮಿಯಲ್ಲಿಯೂ ಜಲವು ಇದೇ ಇರುವದು. ಮಿತ್ರರೇ, ಈಗ ಧೈರ್ಯ ಗೆಡದೆ ಕೈಯಲ್ಲಿ ಹಿಡಿದ ಕೆಲಸವನ್ನು ನಾವೆಲ್ಲರೂ ಕೊನೆಗಾಣಿಸೋಣ. ದೇಶ ಸೇವೆ ಮಾಡುವ ಸಮಯದಲ್ಲಿ ನಾನಾತರದ ತೊಂದರೆಗಳು ಬಂದರೂ ಅವನ್ನು ಲೆಕ್ಕಿಸದೆ ಕನ್ನಡನಾಡಿನ ವೀರಪುತ್ರರೆಂದು ಹೆಸರು ಪಡೆಯಿರಿ. " ಎಂದು ಹುರುಪು ಹುರಿಗೊಳ್ಳುವಂತೆ ಚೆನ್ನಾಗಿ ಬೋಧಿಸಿದನು. ಮರುದಿನ ಮತ್ತೆ ಯುದ್ಧವಾ ಯಿತು. ನರಸಿಂಗನಾಯಕನು ಮದಾಂಧರಾದ ಯವನರನ್ನು ಹೊಡೆದೋಡಿಸಿ ದನು. ವಾಚಕರೇ, ನೋಡಿದಿರಾ ಕನ್ನಡ ವೀರನ ಪರಾಕ್ರಮವನ್ನು!



# ಮಾತೃಸ್ನೇಹ

## [೧]

ಬೆಳಗಿನ ಏಳುಗಂಟೆ. ಸೂರ್ಯನು ಬರಲೋಸುಗ ಹವಣಿಸುತ್ತಿದ್ದನು. ಇಂತಹ ಸಮಯದಲ್ಲಿ ಮಾಧವನು ತನ್ನ ಮನೆಯ ಒಂದು ಕೋಣೆಯಲ್ಲಿ ಕುಳಿತು ಕೊಂಡು ಏನೋ ವಿಚಾರಮಾಡುತ್ತಲಿದ್ದನು. ಅವನ ಮುಖದ ಮೇಲೆ ಸಂತೋಷದ ಚಿಹ್ನವಂತೂ ತೋರುತಿದ್ದಿಲ್ಲ. ಎಡಗೈ ಮೇಲೆ ತಲೆಯನ್ನು ಚೆಲ್ಲಿಕೊಂಡು ಒಂದು ಸ್ಥಳವನ್ನು ದಿಟ್ಟಿಸಿ ನೋಡುತ್ತಿದ್ದನು. ಇವನು ಯಾವುದೋ ಒಂದು ದುಃಖದಿಂದ ಪೀಡಿತನಾಗಿರುವನೆಂದು ನೋಡಿದವರಿಗೆ ಕೂಡಲೇ ಭಾಸವಾಗುವ ಹಾಗಿತ್ತು.

ಮಾಧವನ ಮನೆತನವು ಪೂರ್ವದಿಂದಲೂ ಬಡತನದ ಸ್ಥಿತಿಯಲ್ಲಿದ್ದಂತಹದು. ಅಲ್ಲದೆ ಅದರೊಳಗಿನ ಜನರೆಂದರೆ ಮೂವರೇ,—ಮಾಧವ, ಅವನ ತಾಯಿ ಲಕ್ಷ್ಮೀಬಾಯಿ, ತಂದೆ ನಾರಾಯಣರಾಯರು. ನಾರಾಯಣರಾಯರು ಒಬ್ಬ ದೊಡ್ಡ ಸಾವುಕಾರನ ಅಂಗಡಿಯಲ್ಲಿ ಬರೆದು ಪ್ರತಿ ತಿಂಗಳಿಗೆ ನಾಲ್ವತ್ತು ರೂಪಾಯಿಗಳನ್ನು ದೊರಕಿಸುತ್ತಿದ್ದರು. ಇವರ ಮನೆತನದ ವೆಚ್ಚವು ತೀರ ಹಿಡಿತದಲ್ಲಿತ್ತಾದರೂ ವರ್ಷದ ಕೊನೆಗೆ ನಾರಾಯಣರಾಯರ ಪೆಟ್ಟಿಗೆಯಲ್ಲಿ ಒಂದು ಕಾಸಾದರೂ ಉಳಿಯುತ್ತಿದ್ದಿಲ್ಲ. ಇದಕ್ಕೆ ಮಾಧವನು ಕೆಲವಂಶದಿಂದ ಕಾರಣವಾಗಿದ್ದನು.

ನಾರಾಯಣರಾಯರು ಇಂಗ್ಲಿಷ ಭಾಷೆಯನ್ನರಿಯದ ಹಳಬರು. ಎತ್ತ ನೋಡಿದರೂ ಇಂಗ್ಲಿಷ ಭಾಷೆಯೇ ತುಂಬಿ ತುಳುಕುತ್ತಿರುವ ಈಗಿನ ಕಾಲದಲ್ಲಿ ಅವರಿಗೆ ಬಹಳ ತೊಂದರೆಯಾಗುತ್ತಿತ್ತು. ಇದನ್ನರಿತು ಮಗನನ್ನು ಇಂಗ್ಲಿಷ ಶಾಲೆಗೆ ಕಳಿಸಬೇಕೆಂಬುದರಲ್ಲಿ ನಾರಾಯಣರಾಯರು ವಿಲಂಬಮಾಡಲಿಲ್ಲ. ಬಹುತರವಾಗಿ ಬಡವರ ಬಾಲಕರು ಬಲ್ಲಿದರೆಂಬಂತೆ ಮಾಧವನಾದರೂ ಚುರುಕು ಬುದ್ಧಿಯವನು. ತೇರ್ಗಡೆಹೊಂದದೆ ಇರುವದು ಅವನಿಗೆ ಗೊತ್ತೇ ಇದ್ದಿಲ್ಲ. ಅವನು ಮೊನ್ನೆ ಮೊನ್ನೆ ಆದ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಇದೀಗ ಕಾಲೇಜವನ್ನು ಪ್ರವೇಶಿಸಿರುವನು. ಇವನ ಶಿಕ್ಷಣಕ್ಕಾಗಿಯೇ ನಾರಾಯಣರಾಯರ ಸಂಬಳದ ಕೆಲವೊಂದು ಭಾಗವು ವೆಚ್ಚವಾಗುತ್ತಿತ್ತು.

ಮಗನ ಮುಂದಿನ ಅಭ್ಯುದಯವನ್ನು ನೋಡಲು ನಾರಾಯಣರಾಯರು ಪಡೆದು ಬಂದಿದ್ದಿಲ್ಲ. ಅವರು ತುಸುದಿವಸಗಳಲ್ಲಿಯೇ ಇಹಲೋಕದ ಯಾತ್ರೆಯನ್ನು ಮುಗಿಸಿದರು. ಈ ಕಾಲಕ್ಕೆ ಮಾಧವನ ತಲೆಯ ಮೇಲೆ ಆಕಾಶವೇ ಕಳಚಿಕೊಂಡು ಬಿದ್ದಂತಾಗಿತ್ತು. ಈಗ "ನಾನು ನನ್ನ ಅಧ್ಯಯನವನ್ನು ಬಿಟ್ಟು ಬಿಡಲೋ? ಛೆ! ಇಲ್ಲಿಯ ವರೆಗೆ ಕಲಿತು ಬೀ. ಏ. ಪರೀಕ್ಷೆಯನ್ನಷ್ಟು ದಾಟದೆ ಬಿಟ್ಟರೆ ಬಹಳ ಹಾನಿಯಾಗದೆ ಇರದು. ಆದರೆ ಹಣದ ಹೊರೆಯನ್ನು ಹೊರುವವರು ಯಾರು? ಹೊಟ್ಟೆಹೊರೆಯುವ ಹಾದಿಯಾವುದು? ಎಲ್ಲಿಯಾದರೂ ಸಂಬಳಕ್ಕೆ ನಿಂತ ಹೊರತು ಸಾಗುವುದೆಂತು? ಹಾಯ್! ಹಾಯ್! ವಿಧಿಯೇ, ನನ್ನನ್ನು ಎಂತಹ ಭಯಂಕರವಾದ ದುಃಖಸಾಗರದಲ್ಲಿ ಬಿಸುಟಿವೆಯಲ್ಲ! ಇದರಲ್ಲಿ ನಿನ್ನ ತಪ್ಪಾದರೂ ಏನು? ನನ್ನ ಕರ್ಮದ ಫಲವನ್ನೇ ನನಗೆ ಉಣ್ಣಲು ಹೇಳುತ್ತಿರುವೆಯಲ್ಲವೇ? ಆಗಲಿ. ಇದಕ್ಕೆ ಸಿದ್ಧವಾದ ಹೊರತು ಉಪಾಯವಿಲ್ಲ." ಎಂಬಿವೇ ಮೊದಲಾದ ವಿಚಾರಗಳು ಮಾಧವನ ಮನದಲ್ಲಿ ಸ್ವೈರವಾಗಿ ನೃತ್ಯವಾಡುತ್ತಿದ್ದವು. ಈ ಕಾರಣದಿಂದಲೇ ಮಾಧವನು ತನ್ನ ಮನೆಯ ಹಿಂದಿನ ಕೋಣೆಯಲ್ಲಿ ಕಲ್ಲಗೊಂಬೆಯಂತೆ ಕುಳಿತಿದ್ದನು.

ಲಕ್ಷ್ಮೀಬಾಯಿಯ ದುಃಖಕ್ಕಾದರೂ ಪಾರವಿಲ್ಲದಂತಾಗಿತ್ತು. ಆದರೆ ದುಃಖಬಡುತ್ತ ಕೂಡ್ರುವುದು ಮೂರ್ಖತನವೆಂದು ತಿಳಿಯುವಷ್ಟು ಬುದ್ಧಿಸಾಮರ್ಥ್ಯವು ಆ ಸಾಧ್ವಿಯಲ್ಲಿತ್ತು. ಇದರಂತೆಯೇ ಆಕೆಯು ಸಕಲಸದ್ಗುಣಗಳ ತವರಮನೆಯಾಗಿದ್ದಳು. ಮಾಧವನು ಮಾಡುತ್ತಿದ್ದ ವಿಚಾರಗಳು ಆಕೆಯ ತಲೆಯಲ್ಲಿ ಸಹ ಸೇರಿದ್ದವು. ಲಕ್ಷ್ಮೀಬಾಯಿಯು ಶಾಂತಿಪಾಶದಿಂದ ಆ ವಿಚಾರಗಳನ್ನು ಬಂಧಿಸಿದ್ದಳು. ಆದುದರಿಂದ ಅವು ಆಕೆಯ ಮನದಲ್ಲಿ ನೃತ್ಯಮಾಡುವುದಕ್ಕೆ ನಿರ್ಬಲವಾಗಿದ್ದವು. ಅವಳು ತನ್ನ ಮನಸ್ಸಿನಲ್ಲಿ "ಮಾಧವನ ಅಧ್ಯಯನವನ್ನು ನಿಲ್ಲಿಸಿದರೆ ಇಲ್ಲಿಯ ವರೆಗೆ ಪಟ್ಟ ಶ್ರಮವು ವ್ಯರ್ಥವಾಗುವುದು. ಈಗಲೇ ಸಂಬಳಕ್ಕೆ ನಿಲ್ಲಿಸಿದರೆ ಸಾಕಷ್ಟು ಸಂಬಳವಾದರೂ ಸಿಗಲಾರದು. ಹೇಗಾದರೂ ಮಾಡಿ ಬೀ.ಏ. ಪರೀಕ್ಷೆಯ ವರೆಗೆ ಓದಿಸಿಯೇ ತೀರಬೇಕು. ದುಡ್ಡಿಗೋಸ್ಕರ ಹಲವರಿಗೆ ಹೇಳಿಕೊಂಡು, ಕೆಲವು ಹುಡುಗರನ್ನು ಪಾಠಕಲಿಯುವುದಕ್ಕಾಗಿ ದೊರಕಿಸಬೇಕು. ನಾನಾದರೂ ಶಕ್ಯವಿದ್ದಷ್ಟು ಶಾರೀರಿಕಶ್ರಮವನ್ನು ವಹಿಸಿ ನಮ್ಮಿಬ್ಬರ ಉದರಪೋಷಣೆಯನ್ನು ಮಾಡಿಕೊಳ್ಳಬೇಕು. ಎಂದು ಆಗಲೇ ವಿಚಾರಮಾಡಿಕೊಂಡಿದ್ದಳು.

ಕೋಣೆಯಲ್ಲಿ ಕಾತರಗೊಂಡ ಕಾರಣದಿಂದ ಕಪ್ಪಡರಿದ ಕಂದನನ್ನು ಕಂಡು ಲಕ್ಷ್ಮೀಬಾಯಿಯು ಕಳವಳಿಸಿದಳು. ಕೂಡಲೆ ಒಳಗೆ ಹೋಗಿ ಮಗನ ಮುಂದೆ ಕುಳಿತು, ತನ್ನ ಧೈರ್ಯಗೊಡುವ ಮಾತುಗಳಿಂದ ಮಾಧವನ ಮನಸ್ಸನ್ನು ಶಾಂತಗೊಳಿಸಲುಪಕ್ರಮಿಸಿದಳು. ಕಾಲೇಜದಲ್ಲಿ ಓದುತ್ತಿದ್ದ ಮಾಧವನ ನಿರಾಶವಾದ ಮನಸ್ಸಿನಲ್ಲಿ ಲಕ್ಷ್ಮೀಬಾಯಿಯು ತನ್ನ ವಿಚಾರಗಳಿಂದ ಆಶಾಂಕುರವು ಉದ್ಭವಿಸುವಂತೆ ಮಾಡಿದಳು. ಬಳಿಕ ಮಾಧವನು ಮಾತೆಯ ಮನೋದಾರ್ಢ್ಯಕ್ಕೆ ಮೆಚ್ಚಿ, ಅವಳ ವಿಧೇಯನಾಗಿಯೇ ಕಾಲಕಳೆಯುವುದನ್ನು ನಿಶ್ಚಯಿಸಿ, ತನ್ನ ಕಾರ್ಯಕ್ರಮಕ್ಕಾಗಿ ಕೋಣೆಯಿಂದ ಸಾಗಿದನು.

ತನ್ನ ನಿಶ್ಚಯದಂತೆ ಲಕ್ಷ್ಮೀಬಾಯಿಯು ಲಕ್ಷಾಧೀಶರನ್ನು ತನ್ನ ಕಡೆಗೆ ಲಕ್ಷ್ಯಗೊಡುವಂತೆ ಮಾಡಿದಳು. ಇವಳ ಸೌಜನ್ಯವನ್ನು ಅರಿತು ಶ್ರೀಮಂತರು ತಮ್ಮ ತಮ್ಮ ಮಕ್ಕಳನ್ನು ಮಾಧವನ ಶಿಷ್ಯರನ್ನಾಗಿ ಮಾಡಿದರು. ಇದರಿಂದ ಮಾಧವನಿಗೆ ಇಪ್ಪತ್ತು ಇಪ್ಪತ್ತೈದು ರೂಪಾಯಿಗಳ ಪ್ರಾಪ್ತಿಯುಂಟಾಗತೊಡಗಿತು. ಆದರೆ ಮಾಧವನು ಕೊಡತಕ್ಕ ಇಷ್ಟೇ ರೂಪಾಯಿಗಳಿಂದ ಆಧುನಿಕ ಶಿಕ್ಷಣರಾಕ್ಷಸಿಯು ತೃಪ್ತಿಹೊಂದಲಾರದವಳಾಗಿದ್ದಳು. ಕರ್ತವ್ಯದಕ್ಷಳಾದ ಲಕ್ಷ್ಮೀಬಾಯಿಯಂತಹ ಮಾತೆಯಿರಲು ಮಾಧವನ ದೈವಕ್ಕೆಣೆಯುಂಟೆ? ಲಕ್ಷ್ಮೀಬಾಯಿಯು ಎರಡನೆಯವರಲ್ಲಿ ಕುಟ್ಟೋಣ, ಬೀಸೋಣ ಮುಂತಾದ ಕೆಲಸಗಳನ್ನು ಸಹ ಮಾಡಿ ಮಾಧವನಿಗೆ ಹಣದ ಪೂರೈಕೆಯನ್ನು ಮಾಡುತ್ತಿದ್ದಳು. ಎಂತಹ ಹೀನಸ್ಥಿತಿಯಲ್ಲಿದ್ದರೂ ಮುಂದಿನ ಸೌಖ್ಯವನ್ನು ನೆನೆದು ಸಂತೋಷಪಡುವ ಪರಿಪಾಠವನ್ನು ಅವರು ಇಟ್ಟುಕೊಂಡಿದ್ದರು. ಇದೇ ಮೇರೆಗೆ ದಿನಗಳು ಸಾಗುತ್ತಿರಲು ಮಾಧವನು ಬೀ. ಏ. ಪರೀಕ್ಷೆಯ ಮೆಟ್ಟಿಲನ್ನು ದಾಟುವ ಹವಣಿಕೆಯಲ್ಲಿದ್ದನು.

[ ೨ ]

ಅದೇ ಊರ ಶ್ರೀಮಂತರ ಗುಂಪಿನಲ್ಲಿ ಗೋವಿಂದರಾಯರೆಂಬವರೊಬ್ಬರು ಪ್ರಖ್ಯಾತಿಯನ್ನು ಪಡೆದ ಸದ್ಗೃಹಸ್ಥರಿದ್ದರು. ಅವರಿಗೆ ಗಂಡುಮಕ್ಕಳಿರಲಿಲ್ಲ. ಒಬ್ಬಳೇ ಒಬ್ಬ ಮಗಳಿದ್ದಳು. ಉತ್ಪನ್ನವು ಉಣ್ಣಲಾರದಷ್ಟಿತ್ತು. ಗೋವಿಂದರಾಯರು ಸದ್ವಿಚಾರಿಗಳೂ ವ್ಯವಹಾರಜ್ಞರೂ ಆಗಿದ್ದರು. ತಮ್ಮ

ಪುತ್ರಿಯಾದ ತಾರಕ್ಕನ ವಿವಾಹಕಕ್ಕೋಸ್ಕರ ಅವರು ಅನೇಕವಿಧವಾದ ವಿಚಾರಗಳನ್ನು ಮಾಡುತ್ತಿದ್ದರು. "ಸದ್ಗುಣಗಳೂ ವಿದ್ಯೆಯೂ ವಿಶೇಷವಾಗಿ ಬಡಜನರಲ್ಲಿ ಕಾಣಬರುವವು. ಆದುದರಿಂದ ನಮ್ಮ ತಾರಕ್ಕನನ್ನು ಒಬ್ಬ ಸದ್ಗುಣಭರಿತನಾದ ವಿದ್ವಾಂಸನಾದ ಬಡ ತರುಣನಿಗೆ ಧಾರೆಯೆರೆದು ಕೊಟ್ಟು, ನನ್ನ ಸರ್ವ ಧನಸಂಪತ್ತಿಗಳನ್ನೇ ಅವನಿಗೆ ಒಪ್ಪಿಸಿದರೆ ಒಳಿತಾಗಲಿಕ್ಕಿಲ್ಲವೇ ? ಆದರೆ ಅಂತಹ ಶ್ರೇಷ್ಠವರನು ಸಿಗುವುದೊಂದು ದುಸ್ತರವಾದುದಷ್ಟೆ! ಓಹೋ ! ಇಲ್ಲಿಯ ಕಾಲೇಜಕ್ಕೆ ಹೋಗಿ ವಿಚಾರಿಸಿದರೆ ನನ್ನ ಇಚ್ಛೆಯು ನಿಶ್ಚಯವಾಗಿಯೂ ನೆರವೇರಬಹುದು." ಈ ಮಾದರಿಯ ಅನೇಕ ವಿಚಾರಗಳು ಗೋವಿಂದರಾಯರಲ್ಲಿ ಮನೆಮಾಡಿಕೊಂಡಿದ್ದವು.

ತಾರಕ್ಕನಿಗೆ ಹನ್ನೆರಡನೆಯ ವರುಷವು ನಡೆಯುತ್ತಲಿದ್ದಿತು. ಗೋವಿಂದರಾಯರು ತಮ್ಮ ಪೂರ್ವಜರ ಪದ್ಧತಿಗಳಲ್ಲಿ ಪರಮವಿಶ್ವಾಸವುಳ್ಳವರಾದುದರಿಂದ, ಈಗಿನ ಪ್ರೌಢವಿವಾಹ ಮೊದಲಾದ ನಡತೆಗಳು ಅವರೆಡೆಯಲ್ಲಿ ಹೋಗಲು ಧೈರ್ಯವಿಲ್ಲದವುಗಳಾಗಿದ್ದವು. ಆದುದರಿಂದ ಅವರು ಮಗಳಿಗೆ ಅನುರೂಪನಾದ ತರುಣನನ್ನು ಶೋಧಿಸುವುದರಲ್ಲಿ ಈಗಾಗಲೇ ನಿರತರಾಗಿದ್ದರು. ತಾವು ಮೊದಲೇ ವಿಚಾರಮಾಡಿಕೊಂಡಂತೆ, ಕಾಲೇಜಕ್ಕೆ ಹೋಗಿ ಅಲ್ಲಿಯ ಮುಖ್ಯಾಧ್ಯಾಪಕರನ್ನು ಕಂಡುಕೊಂಡರು. ಬಳಿಕ ಅವರದೊಂದು ಓಲೆಯೊಡನೆ ಬೀ.ಏ. ವರ್ಗದ ಕೋಣೆಯನ್ನು ಪ್ರವೇಶಿಸಿದರು. ಅಲ್ಲಿ ವರ್ಗದ ಗುರುಗಳ ಮತ್ತು ಇವರ ನಮಸ್ಕಾರಚಮತ್ಕಾರಗಳಾದ ಬಳಿಕ, ಒಂದು ಯೋಗ್ಯಾಸನದಲ್ಲಿ ಕುಳಿತು ತಮ್ಮ ಆಗಮನದ ಉದ್ದೇಶವನ್ನು ತಿಳಿಸಿದರು. "ಈ ವರ್ಗದಲ್ಲಿ ಇಬ್ಬರು ಮೂವರು ಸಕಲಸದ್ಗುಣಸಂಪನ್ನರಾದ ಹುಡುಗರಿರುವರು. ಇವರೆಲ್ಲರೂ ಆಧುನಿಕದುರ್ವ್ಯಸನಗಳಿಗೀಡಾಗದೆ ನೈತಿಕಧಾರ್ಮಿಕ ಸಾಮಾಜಿಕದೃಷ್ಟಿಗಳಿಂದ ವಿಶೇಷವಾದ ಉನ್ನತಿಯನ್ನು ಪಡೆದವರಾಗಿರುವರು." ಹೀಗೆಂದು ಎಮ್. ಎನ್. ಜೋಶಿ ಎಂಬವರ ಕಡೆಗೆ ಬೆರಳುಮಾಡಿ "ಅವರಲ್ಲಿ ಇವರು ಅಗ್ರಗಣ್ಯರು. ಇವರ ಬಡತನವು ಮಾತ್ರ ನಿಮ್ಮನ್ನು ನಿರಾಸೆಗೊಳಿಸಬಹುದೇನೋ!" ಎಂದು ಅಧ್ಯಾಪಕರು ಅರುಹಿದರು. "ಬಡವನಾಗಿದ್ದರೂ ಸುಗುಣಿಯಾಗಿದ್ದರೆ ಸಾಕು." ಎಂದು ಗೋವಿಂದರಾಯರು ಅಧ್ಯಾಪಕರ ಅಪ್ಪಣೆಯನ್ನು ಪಡೆದು ಕಾಲೇಜದಿಂದ ಮನೆಗೆ ನಡೆದರು.

[ ೩ ]

ಮೊದಲೇ ಎಮ್.ಎನ್. ಜೋಶಿಯವರ ಪರಿಚಯಮಾಡಿಕೊಂಡಿದ್ದ ಗೋವಿಂದರಾಯರು ಮರುದಿನ ಬೆಳಗಿನಲ್ಲಿ ಆ ಮನೆಗೆ ಬಂದರು. ಎಮ್. ಎನ್. ಜೋಶಿಯವರೆಂದರೆ ನಮ್ಮ ಮಾಧವರಾಯರೆಂದು ಹೇಳಲವಶ್ಯವಿಲ್ಲವಷ್ಟೆ? ಗೋವಿಂದರಾಯರು ಮನೆಯನ್ನು ಪ್ರವೇಶಿಸಿದಾಗ ಮಾಧವರಾಯರು ಯಾವುದೋ ಒಂದು ಪುಸ್ತಕವನ್ನು ಕಣ್ಣಿನಿಂದಲೇ ಓದುತ್ತ ಕುಳಿತಿದ್ದರು. ಗೋವಿಂದರಾಯರಂತಹ ಶ್ರೀಮಂತರು ತಮ್ಮ ಮನೆಗೆ ಬಂದುದನ್ನು ಕಂಡು, ಆಶ್ಚರ್ಯಯುಕ್ತಮುಖದಿಂದ ಅವರನ್ನು ಬರಮಾಡಿಕೊಂಡು, ತಾವು ಕುಳಿತ ಆಸನದ ಬಳಿಯಲ್ಲಿದ್ದ ಬೇರೊಂದು ಆಸನದಲ್ಲಿ ಕುಳ್ಳಿರಿಸಿದರು. ಬಳಿಕ ಗೋವಿಂದರಾಯರು "ನಿಮ್ಮ ಹಿರಿಯರು ಎಲ್ಲಿ?" ಎಂದು ಕೇಳಿದರು. ನಮ್ಮ ತಂದೆಯವರು ಇಂದಿಗೆ ಮೂರು ನಾಲ್ಕು ವರ್ಷಗಳ ಹಿಂದೆಯೇ ತೀರಿದರು. ಆದರೆ ನನ್ನ ತಾಯಿಯು ಮಾತ್ರ ಒಳಗೆ ಇರುವಳು." ಎಂದು ಮಾಧವರಾಯರು ಉತ್ತರವಿತ್ತರು. ಗೋವಿಂದರಾಯರ ಅಪೇಕ್ಷೆಯ ಮೇರೆಗೆ ಲಕ್ಷ್ಮೀಬಾಯಿಯವರನ್ನು ಮಾಧವರಾಯರು ಕರೆದುಕೊಂಡು ಬರಲು"ಅತ್ತ ಕೂಡ್ರಬೇಕು." ಎಂದು ಕೈಮಾಡಿ ಗೋವಿಂದರಾಯರು ವಿನತಿಮಾಡಿಕೊಂಡರು. ಆ ಮೇರೆಗೆ ಲಕ್ಷ್ಮೀಬಾಯಿಯವರು ದೂರದಲ್ಲಿ ಕುಳಿತರು.

**ಗೋ:—** ನಾನೊಂದು ಮಹತ್ವದ ಕೆಲಸಕ್ಕಾಗಿ ನಿಮ್ಮೆಡೆಗೆ ಬಂದಿರುವೆನು. ಅದನ್ನು ಕೊನೆಗಾಣಿಸುವ ಭಾರವು ತಮ್ಮನ್ನೇ ಕೂಡಿರುವದು.

**ಲ:—** ನಮ್ಮಂತಹ ಬಡವರಲ್ಲಿ ಕುಬೇರನ ಆಪ್ತರಾದ ತಮ್ಮಂತಹರ ಕೆಲಸವಿರುವುದೆಂದರೆ, ನಮ್ಮ ಗ್ರಹಬಲವೇ ವಿಲಕ್ಷಣವಾಗಿರಬೇಕೆಂದು ತೋರುತ್ತದೆ. ಅದೇನು? ಅವಶ್ಯವಾಗಿ ಹೇಳಬೇಕು.

**ಗೋ:—** ನನಗೆ ಗಂಡುಸಂತತಿಯಿಲ್ಲ. ಒಬ್ಬಳೇ ಮಗಳಿರುವಳು. ಅವಳೀಗ ಉಪವರಳಾಗಿರುವಳು. ಅವಳಿಗೋಸ್ಕರ ಯೋಗ್ಯವರನನ್ನು ಹುಡುಕುತ್ತಿರಲು, ತಮ್ಮ ಮಗನಾದ ಮಾಧವರಾಯನೇ ತಕ್ಕವನೆಂದು ಗೊತ್ತಾಗಿರುವುದಲ್ಲದೆ, ವಿವಾಹವನ್ನಾದರೂ ಆದಷ್ಟು ತೀವ್ರವೇ ಮಾಡಬೇಕೆಂದಿರುವೆನು. ಅದರ ಸಲುವಾಗಿ ತಮ್ಮ ಸಮ್ಮತಿಯನ್ನು ಕೇಳುವುದೇ ಮುಖ್ಯೋದ್ದೇಶ.

ಲ: — ಏನು ಗೋವಿಂದರಾಯರೇ, ನಮ್ಮ ಬಡತನವನ್ನು ಬಲ್ಲ ನೀವು ನಿಮ್ಮ ಮಗಳನ್ನು ನಮ್ಮ ಮನೆಗೆ ಒಪ್ಪಿಸಲು ಸಿದ್ಧರಾಗಿರುವಿರಲ್ಲ! ನಿಮಗೆ ಹುಚ್ಚು ಹಿಡಿದಿಲ್ಲವಷ್ಟೆ !

ಗೋ: — ಅಮ್ಮಾ , ಈ ವಿಷಯವನ್ನು ನಾನು ಈ ಮೊದಲೇ ವಿಚಾರಿಸಿರುವೆನು. ನನ್ನ ಸರ್ವೈಶ್ವರ್ಯವನ್ನು ಹೊಂದುವ ಭಾಗ್ಯವು ನನ್ನ ಮಗಳಿಗಲ್ಲದೆ ಇನ್ನಾರಿಗಿರುವುದೆಂದು ನೀವು ತಿಳಿದಿರುವಿರಿ ? ತಮ್ಮ ಮನೆಗೆ ನನ್ನ ಮಗಳು ಲಕ್ಷ್ಮೀಸಹಿತಳಾಗಿ ಬರುವಳೆಂಬುದನ್ನು ತಾವು ಮರೆಯದಾರದು.

ಲ:— ಗೋವಿಂದರಾಯರೇ, ಇಂತಹ ಸುವಿಚಾರದ ತಮ್ಮ ಸೌಜನ್ಯವನ್ನು ಎಷ್ಟೆಂದು ಹೊಗಳಲಿ ! ಈ ಕಾಲದಲ್ಲಿ ತಮ್ಮಂತಹ ದೊಡ್ಡ ಮನದವರನ್ನು ಕಾಣುವುದು ದುರ್ಲಭವು. ನಮ್ಮನ್ನು ಉದ್ಧರಿಸಲು ಬಂದ ದೇವರೇ ಎಂದು ತಮ್ಮನ್ನು ಭಾವಿಸಿ, ತಮ್ಮ ಇಚ್ಛೆಯ ಮೇರೆಗೆ ನಡೆಯಲು ಸಿದ್ಧಳಾಗಿರುವೆನು.

ಈ ಪ್ರಕಾರವಾಗಿ ಅವರಿಬ್ಬರಲ್ಲಿ ಮಾತುಕಥೆಗಳಾದ ಬಳಿಕ ಅತಿಸಮೀಪವಾದ ಮುಹೂರ್ತದಲ್ಲಿಯೇ ವಿವಾಹವನ್ನು ಜರುಗಿಸಬೇಕೆಂದು ಗೊತ್ತುಮಾಡಿದರು. ಗೋವಿಂದರಾಯರು ಲಕ್ಷ್ಮೀಬಾಯಿಯವರ ಸಮ್ಮತಿಯ ಮೇರೆಗೆ ಮನೆಗೆ ಬಂದು ತಮ್ಮ ಹೆಂಡತಿಗೂ ಈ ವೃತ್ತಾಂತವನ್ನು ತಿಳುಹಿದರು. ಪತಿಪರಾಯಣೆಯಾದ ಆ ಸಾಧ್ವಿಯು ತನ್ನ ಒಪ್ಪಿಗೆಯನ್ನು ಕೂಡಲೆ ವ್ಯಕ್ತಮಾಡಿದಳು. ವಿವಾಹವಾದರೂ ಮುಂದೆ ಸ್ವಲ್ಪ ದಿನಗಳಲ್ಲಿಯೇ ವಿಜೃಂಭಣೆಯಿಂದ ಜರುಗಿತು.

## [ ೪ ]

ಮಾಧವರಾಯನ ಮೊದಲಿನ ಸ್ಥಿತಿಗೂ ಈಗಿನ ಸ್ಥಿತಿಗೂ ವಿಶೇಷ ಹೆಚ್ಚುಕಡಿಮೆಯಾಗಿತ್ತು. ಈಗ ಅವನಿಗೆ ಯಾತರ ಕೊರತೆಯಾಗಬೇಕು! ಅಭ್ಯಾಸವಂತೂ ಒಳ್ಳೆಯ ಭರದಿಂದ ಸಾಗಿತ್ತು. ಮೊದಲೇ ಚುರುಕುಬುದ್ಧಿಯವನಾದ ಮಾಧವರಾಯನು ಬೀ. ಏ. ಪರೀಕ್ಷೆಯಲ್ಲಿ ಅನಾಯಾಸವಾಗಿ ತೇರ್ಗಡೆಹೊಂದಿದನು. ಗೋವಿಂದರಾಯರಂತಹ ದೊಡ್ಡ ಗೃಹಸ್ಥರ ಬೆಂಬಲವುಳ್ಳವರಿಗೆ ನೌಕರಿಯು ಸಿಗುವದಾದರೂ ಯಾವ ದೊಡ್ಡವಾತು ! ಮಾಧವರಾಯನಿಗೆ

ಸರಕಾರದಲ್ಲಿ ಒಂದು ದೊಡ್ಡ ನೌಕರಿಯು ದೊರೆಯಿತು. ಮುಂದೆ ನಾಲ್ಕಾರು ವರ್ಷಗಳು ಸಾಗುತ್ತಿರಲು ಮಾಧವರಾಯನಿಗೆ ಎರಡು ಗಂಡುಮಕ್ಕಳೂ ಒಂದು ಹೆಣ್ಣುಮಗುವೂ ಹುಟ್ಟಿದವು. ಗೋವಿಂದರಾಯರೂ ಅವರ ಹೆಂಡ ತಿಯೂ ಸುಖಮಯಕಾಲದಲ್ಲಿಯೇ ಈ ಲೋಕವನ್ನು ಬಿಡುವದು ಲೇಸೆನ್ನು ವಂತೆ ಮುಂದೆ ಸ್ವಲ್ಪೇ ದಿನಗಳಲ್ಲಿ ಪರಲೋಕವನ್ನೈದಿದರು.

ಲಕ್ಷ್ಮೀಬಾಯಿಯು ಹಿಂದಿನಕಾಲದ ನಡತೆಗಳನ್ನು ಪ್ರೀತಿಸುವಳಾಗಿ ದ್ದಳು. ತಾರಕ್ಕನು ಮಾತ್ರ ಶ್ರೀಮಂತರಿಗೆ ಸಾಮಾನ್ಯವಾದ ನವೀನಸುಧಾ ರಣೆಯ ಮಾರ್ಗವನ್ನು ಹಿಡಿದಿದ್ದಳು. ನಮ್ಮ ಮಾಧವರಾಯನ ಎಲ್ಲ ಸಂಬ ಳವೂ ಹೆಂಡತಿಯ ಸಲುವಾಗಿಯೇ ವೆಚ್ಚವಾಗಲಾರಂಭಿಸಿತು. ಆದುದರಿಂದ ಅತ್ತೆ–ಸೊಸೆಯರಲ್ಲಿ ಮತಭೇದಗಳಾಗತೊಡಗಿದವು. ಕೊನೆಕೊನೆಗಂತೂ ಅವ ರಿಬ್ಬರಲ್ಲಿ ನಿಜವಾದ ದ್ವೈಷವೇ ತಲೆದೋರಿತು. ಈಗಿನ ಕಾಲದ ಪುರುಷರು ಹೆಂಡ ತಿಯ ಪಕ್ಷವನ್ನೇ ಹಿಡಿಯುವರಲ್ಲದೆ, ತಾಯಿಯ ಪಕ್ಷವನ್ನು ಹಿಡಿಯುವವರು ತೀರ ವಿರಳ. ಅದೇ ಪ್ರಕಾರ ಮಾಧವನು ಹೆಂಡತಿಯ ಪಕ್ಷವನ್ನು ವಹಿಸಿ ತಾಯಿಯನ್ನೇ ದ್ವೇಷಿಸಲಿಕ್ಕೆ ಸಿದ್ಧನಾದನು. ಲಕ್ಷ್ಮೀಬಾಯಿಯು ತನ್ನ ಸ್ಥಿತಿಯು ತೀರ ಅಸಹ್ಯವಾಗಲು, ಮನೆಯನ್ನು ಬಿಟ್ಟುಕೊಟ್ಟು ಊರ ಹೊರಗಿನ ಒಂದು ಗುಡಿಯಲ್ಲಿ ವಾಸಿಸಿ, ಭಿಕ್ಷೆಬೇಡಿ ಉದರಪೋಷಣೆಯನ್ನುಮಾಡಿಕೊಂಡು, ಉಳಿದ ಕಾಲವನ್ನೆಲ್ಲ ದೇವರ ಭಜನೆಯಲ್ಲಿ ಕಳೆಯಹತ್ತಿದಳು. ಲಕ್ಷ್ಮೀಬಾಯಿಯ ಸ್ಥಿತಿ ಯನ್ನು ಕಂಡು ಸರ್ವರೂ ಅವಳ ಅಪೇಕ್ಷೆಗಳನ್ನು ಪೂರ್ಣಮಾಡುತ್ತಿದ್ದರು.

ಹೆಂಡತಿಯ ಇಚ್ಛೆಯಂತೆ ಕುಣಿಯುವ ಮಾಧವರಾಯನಿಗೆ ಎಷ್ಟು ದುಡ್ಡಾದರೂ ಸಾಲುತ್ತಿದ್ದಿಲ್ಲ. ಆದುದರಿಂದ ಅವನು ಲಂಚಗುಳಿಯಾದನು. ಮಾಧವರಾಯನ ಮಿತಿಮೀರಿ ಲಂಚತಿನ್ನುವಿಕೆಯು ಸಹಜವಾಗಿ ಸರಕಾರಕ್ಕೆ ತಿಳಿಯಲು ಅವನ ಮೇಲೆ ಖಟ್ಲೆಹಾಕಲ್ಪಟ್ಟು ಕೂಡಲೆ ಅವನನ್ನು ಹಿಡಿದರು. "ನನ್ನ ತಾಯಿಯನ್ನು ಈ ಪ್ರಕಾರದ ಕಷ್ಟಕ್ಕೆ ಗುರಿಮಾಡಿದುದರಿಂದ ನನ್ನನ್ನು ಇಂತಹ ದುಃಖಸಾಗರದಲ್ಲಿ ದೇವರು ಒಗೆದಿರಬಹುದಲ್ಲವೇ? ಅಯ್ಯೋ ದೇವರೆ, ನನ್ನನ್ನು ಅಜ್ಞಾನವು ಮುಸುಕುವಂತೆ ಯಾಕೆ ಮಾಡಿದೆ ! ನನ್ನ ಕೃತ್ಯದ ದೆಸೆ ಯಿಂದ ನನಗೆ ಪಶ್ಚಾತ್ತಾಪವಾಗಿರುವದು. ನನ್ನನ್ನುಉದ್ಧಾರಮಾಡು." ಎಂದು ಮಾಧವರಾಯನು ಮನಸ್ಸಿನಲ್ಲಿ ದೇವರನ್ನು ಪ್ರಾರ್ಥಿಸುತ್ತಿದ್ದನು. ಇದೇ

ಮೇರೆಗೆ ತಾರಕ್ಕನಾದರೂ ಪಶ್ಚಾತ್ತಾಪಸಾಗರದಲ್ಲಿ ತೇಲಾಡುತ್ತಿದ್ದಳು. ಗಂಡನ ಬಿಡುಗಡೆಯಾಗುವಂತೆ, ಪರಮಾತ್ಮನಿಗೆ ಮೊರೆಯಿಡುತ್ತಿದಳು. ಮುಂದೆ ನಾಲ್ಕುದಿನಗಳಲ್ಲಿ ಖಟ್ಲೆಯ ತೀರ್ಮಾನವು ಆಗುವದೆಂದು ಪ್ರಸಿದ್ಧ ವಾಗಿತ್ತು. ಅಷ್ಟರಲ್ಲಿ ಲಕ್ಷ್ಮೀಬಾಯಿಯು ನ್ಯಾಯಾಧೀಶರ ಮನೆತನಕ ಹೋಗಿ ತನ್ನ ಮಗನನ್ನು ಬಿಡುಗಡೆಮಾಡಬೇಕೆಂದು ಬೇಡಿಕೊಂಡಳು. ಲಕ್ಷ್ಮೀಬಾಯಿಯು ಪವಿತ್ರಚರಿತ್ರವನ್ನರಿತ ನ್ಯಾಯಾಧೀಶರು ಅವಳ ಇಚ್ಛೆಯನ್ನು ನೆರವೇರಿಸಲು ವಚನವನ್ನಿತ್ತರು.

ಈ ದಿವಸ ತೀರ್ಮಾನವಾಗುವುದೆಂದು ಜನರು ನ್ಯಾಯಸಭೆಯ ಮುಂದಿನ ಅಂಗಣದಲ್ಲಿ ನೆರೆದಿರುವರು. ಅಪರಾಧಿಗಳು ನಿಲ್ಲತಕ್ಕ ಸ್ಥಳದಲ್ಲಿ ಮಾಧವರಾಯನು ನಿಂತಿದ್ದನು. ತಾರಕ್ಕನಾದರೂ ತನ್ನ ಮಕ್ಕಳೊಡನೆ ನ್ಯಾಯಸಭೆಯ ಹತ್ತಿರ ಹೋಗಿ ನಿಂತಿದ್ದಳು. ಹಿಂದಿನ ದಿನವೇ ನ್ಯಾಯಾಧೀಶರು ಮಾಧವರಾಯರನ್ನು ಕರೆಯಿಸಿಕೊಂಡು “ನೀನು ನಿಜವಾಗಿಯೂ ಅಪರಾಧಿಯಿರುತ್ತೀ. ಭಗವದ್ಭಕ್ತಶಿರೋಮಣಿಯಾದ ನಿನ್ನ ತಾಯಿ ಲಕ್ಷ್ಮೀಬಾಯಿಯವರ ಬಿನ್ನಹದ ಮೇರೆಗೆ; ನಿನ್ನನ್ನು ನಿರಪರಾಧಿಯೆಂದು ನಾಳಿನ ನ್ಯಾಯಸಭೆಯಲ್ಲಿ ತೀರ್ಮಾನಮಾಡಿ ಬಿಡುಗಡೆ ಮಾಡುವೆನು. ಇನ್ನು ಮೇಲೆ ನಿನ್ನ ತಾಯಿಯವರು ಮಾಡಿದ ಉಪಕಾರವನ್ನು ನೆನಿಸಿ, ಅವರೊಡನೆಯೂ ಎಲ್ಲ ಜನರೊಡನೆಯೂ ಉತ್ತಮವಾದ ರೀತಿಯಿಂದ ವರ್ತಿಸುವುದಕ್ಕೆ ಮಾತ್ರ ಮರೆಯ ಕೂಡದು.” ಎಂದು ಹೇಳಿದ್ದರು. ಆದುದರಿಂದ ಈ ದಿವಸ ಮಾಧವರಾಯರು ನಿರಪರಾಧಿಗಳೆಂದು ತೀರ್ಮಾನವಾಗಿ ಬಿಡುಗಡೆಹೊಂದಿದರು. ಆ ಕೂಡಲೆ ಅವರು ತಮ್ಮ ಹೆಂಡರು ಮಕ್ಕಳನ್ನು ಸಂಗಡ ಕರೆದುಕೊಂಡು, ತಾಯಿಯು ವಾಸಿಸಿದ ದೇವಾಲಯಕ್ಕೆ ಹೋಗಿ ಲಕ್ಷ್ಮೀಬಾಯಿಯನ್ನು ಹುಡುಕಿದರು ವ್ಯರ್ಥವಾಯಿತು. ಅಂದಿನಿಂದ ಲಕ್ಷ್ಮೀಬಾಯಿಯು ಯಾರ ಕಣ್ಣಿಗೂ ಬೀಳಲಿಲ್ಲ!

# ರಾಮರಾಜ್ಯಾಭಿಷೇಕ

ಅಥವಾ

# ಎಚ್ಚಮನ ರಾಜಭಕ್ತಿ



( ಕ್ರಿ. ಶ. ೧೭ನೆಯ ಶತಮಾನದಾದಿಯ ಕರ್ನಾಟಕದ ಐತಿಹಾಸಿಕದೃಶ್ಯ. )

( ೧ )

ಚಂದ್ರಗಿರಿಯಲ್ಲಿ— ರಾಣಿಯಾದ ಬಾಯಮ್ಮನ ಮನೆ.

**ಬಾಯಮ್ಮ:**—ನನ್ನ ಹಣೆಯ ಬರಹದಲ್ಲಿ ಒಂದು ಸಂತತಿಯನ್ನು ಪಡೆಯುವ ಶುಭಾಕ್ಷರಗಳಿರುವಂತೆ ತೋರುವುದಿಲ್ಲ. ನಾನೊಬ್ಬ ಪಾಪಿನಿ. ಹಿಂದಕ್ಕೆ ಯಾರ ಮಕ್ಕಳ ಗೋಣ ಮುರಿದು ತಾಯ್ತಂದೆಗಳನ್ನು ನೋಯಿಸಿದೆನೋ! ಆ ಪಾಪವೀಗ ನನ್ನ ಹೊಟ್ಟೆಯಲ್ಲಿ ಸಂತಾನವನ್ನು ನಿಲ್ಲಗೊಡಲೊಲ್ಲದು. ಮಕ್ಕಳಿಲ್ಲದಿದ್ದರೆ ಈ ರಾಜವೈಭವದಿಂದೇನು ಸೌಖ್ಯವಾಗುವುದೇ ? ಸಾಂಸಾರಿಕರಿಗೆ ಸತ್ಪುತ್ರನಿಂದ ಸದ್ಗತಿಯಲ್ಲದೆ ದ್ರವ್ಯರಾಶಿಯು ವ್ಯರ್ಥ. ಅತ್ತ ಓಡಿ ಬಂದು ಎತ್ತಿಕೊಂಡು, ಅಕಾರಣವಾದ ಮುಗುಳ್ನಗೆಯಿಂದ ನಲಿದಾಡಿ, ಬಗೆಬಗೆಯ ಒಡವೆಗಳನ್ನಿತ್ತಿತ್ತು ರಮಿಸಿ ಆಡಿಸುತ್ತ, ಹೊರಗಿನಿಂದೋಡಿ ಬಂದವನನ್ನು ಮೈದಡವಿ ಮುದ್ದಿಸುತ್ತ ಕುಮಾರನೊಂದಿಗೆ ವಿನೋದದಿಂದ ಕಾಲಹರಣಮಾಡುವ ಬಡತನದ ಬಾಳುವೆಯು ಸುಖಮಯವಾಗಿರುವುದು. ಒಬ್ಬ ಮಗನಿಲ್ಲದಿದ್ದರೆ ಸಂಸಾರವೆಲ್ಲ ಶೂನ್ಯವೆನಿಸುವುದು. ಬಂಜೆಯೆಂದು ಜನವೆಲ್ಲ ಹೀಯಾಳಿಸುವುದು. ಕಂದಮ್ಮನನ್ನು ಪಕ್ಕದಲ್ಲಿಟ್ಟುಕೊಂಡು ಅಡ್ಡಾಡುವವರೊಳಗೆ ನಾನು ತಲೆಯೆತ್ತಿಕೊಂಡು ಹೇಗಿರಬೇಕು? ನನ್ನ ದೈವದಲ್ಲಿಯೇ ಮಗುವಿನ ದಟ್ಟಡಿಯ ಗೆಜ್ಜೆಯ ಮಂಜುಲಸ್ವರವನ್ನು ಕೇಳಬೇಕೆಂದಿರದ ಮೇಲೆ ಹೇಗೆ ಮಾಡಬೇಕು? ಮುಂದಿಗೆ ಮೋರೆಯನ್ನು ಹೇಗೆ ತೋರಿಸಬೇಕು ? ಒಂದು ಮಗುವನ್ನಾರದನ್ನಾದರೂ ತಂದು ಜೋಪಾನಮಾಡಲೇನು? ಆ ಕೂಸೇ ಹೊಟ್ಟೆಯ ಮಗನೆಂದು ಹೇಳಬೇಕು! ಈಗ ಬಸಿರಿನ ಸೋಗಿನಿಂದಿದ್ದು ಒಂಬತ್ತು ತಿಂಗಳಾದ ಬಳಿಕ ಒಂದು ಉತ್ತಮವಾದ ಶಿಶುವನ್ನು ತಂದು ಹಡೆದ ಸುದ್ದಿಯನ್ನು ಹಬ್ಬಿಸಬೇಕು. ಸಖೀ, ಶಾರದೇ, ಬಾಯಿಲ್ಲಿ.

**ಶಾರದೆ:**—ಏನು ತಾಯೀ? ( ಎಡೆಸ್ನುತ್ತ ಬಳುವಳು. )

**ಬಾಯಮ್ಮ:**—ಇತ್ತತ್ತ ಬಾ. ಒಂದು ಗುಪ್ತವಾದ ಕಾರ್ಯವನ್ನು ಮಾಡಬೇಕಾಗಿದೆ. ಆಪ್ತಳಾದ ಪ್ರೇಮಸಖಿಯೆಂದು ನಿನ್ನನ್ನು ನಿಯಮಿಸುತ್ತೇನೆ.

**ಶಾರದೆ:**— ನೀವು ಏನನ್ನು ಹೇಳಿದರೂ ದಾಸಿಯು ಮಾಡಲಿಕ್ಕೆ ಸಿದ್ಧಳಾಗಿದ್ದಾಳೆ. ಅನುಮಾನವಿಲ್ಲದೆ ಅಪ್ಪಣೆಯನ್ನೀಯಬಹುದು.

**ಬಾಯಮ್ಮ:**— ನೀನು ಈ ಕಾರ್ಯವನ್ನು ನೆರವೇರಿಸಿದೆಯೆಂದರೆ ಶ್ರೀಮಂತಳಾಗುವಿಯೆಂದು ನಂಬು. ಆದರೆ ಇದನ್ನು ಒಳ್ಳೇ ಎಚ್ಚರಿಕೆಯಿಂದ ಮಾಡಬೇಕು.

**ಶಾರದೆ:**—ಅದೇನದು? ಹೇಳಿರಿ. ಶ್ರೀಮಂತಳಾಗಲಿ, ಬಿಡಲಿ. ನಿಮ್ಮ ಅಪ್ಪಣೆಯನ್ನು ಪೂರೈಸುವುದು ನನ್ನ ಕರ್ತವ್ಯವಾಗಿದೆ. ಯಾವ ಕೆಲಸ? ಹೇಳಿರಿ.

**ಬಾಯಮ್ಮ :**— ನಾನು ಇಂದಿನಿಂದ ಗರ್ಭಿಣೀವೇಷದಿಂದಿರುವೆನು. ಒಂಬತ್ತು ತಿಂಗಳು ತುಂಬಿದ ಬಳಿಕ ನೀನೊಂದು ಮುದ್ದು ಮಗುವನ್ನು ತಂದು ಕೊಡಬೇಕು. ಅದಕ್ಕಾಗಿ ಹತ್ತುವ ದ್ರವ್ಯವನ್ನು ನನ್ನಿಂದ ತೆಗೆದುಕೊಂಡು ಹೋಗು.

**ಶಾರದೆ:**-ಇಷ್ಟೇ ಅಹುದೋ ಅಲ್ಲವೋ! ದುಡ್ಡಿನ ಸಾಹಾಯ್ಯವೊಂದಿದ್ದ ಮೇಲೆ ಇದಾವ ಅಸಾಧ್ಯವಾದ ಕೆಲಸ! ಹಣವೆಂದರೆ ಬಾಯ್ಬಿಟ್ಟು ಮಕ್ಕಳನ್ನು ಕೂಡ ಮಾರುವ ಬಡತನದಿಂದ ಬಳಲುವವರೆಷ್ಟೋ ಜನರಿರುವರು! ಈ ದುಡ್ಡಿನಲ್ಲಿ ಮಕ್ಕಳ ಮೇಲಿನ ಹಡೆದ ಕರುಳನ್ನು ಕತ್ತರಿಸುವ ಶಕ್ತಿಯುಂಟು. ದುಡ್ಡನ್ನು ಸುರಿಯಲಿಕ್ಕೆ ರಾಣಿಯರು ಕೊಡುಗೈಯಿಂದ ಬೊಕ್ಕಸವನ್ನು ತೆರೆದುಕೊಂಡು ಕುಳಿತಿರುವಿರೆಂದ ಬಳಿಕ ಕಾರ್ಯಸಾಧಿಸುವುದೇ ಎಂಬ ಶಂಕೆಯೇ ಬೇಡ. ನಿಶ್ಚಿಂತರಾಗಿದ್ದು ಬಿಡಿರಿ.

**ಬಾಯಮ್ಮ:**— ಇಷ್ಟು ಮಾಡಿದರೆ ನಿನ್ನುಪಕಾರವು ಬಹಳವಾಗುವುದು.

( ೨ )

ಏಕಾಂತದಲ್ಲಿ ವೇಂಕಟಪತಿರಾಯ.

**ವೇಂಕಟ:**—ನನ್ನ ವಲ್ಲಭೆಯು ಪುತ್ರವತಿಯಾದಳು. ಇದಾವ ಆನಂದ! ನಾನು ಪುತ್ರವಂತನಾಗಲಿಲ್ಲ. ನಮ್ಮನ್ನೆಲ್ಲ ಕಣ್ಕಟ್ಟಿ ಹೀಗೆ ಮಾಡಿದಳು. ಮೊನ್ನೆ

ನನಗೆ ಆಕೆಯ ತಂತ್ರವು ಗೊತ್ತಾಯಿತು. ನನ್ನ ಮನಸ್ಸಿನಲ್ಲಿ ನಡುಕವುಂಟಾಗಿದೆ. ಆ ಹೀನ ಕುಲಜನನ್ನು ನನ್ನ ಮಗನೆಂದು ಹೇಳಿಕೊಳ್ಳಲೇ ? ಈ ದುಷ್ಪುತ್ರನನ್ನು ವಿಜಯನಗರದ ಪವಿತ್ರಸಿಂಹಾಸನದ ಅಧಿಕಾರಿಯೆಂದು ಭಾವಿಸಲೇ ? ಛೀ, ಅದು ಎಂದಿಗೂ ಆಗದು. ರಾಜಚಿಹ್ನಗಳೊಂದೂ ಇಲ್ಲದ ಇವನಿಗೆ ರಾಜ್ಯವನ್ನೊಪ್ಪಿಸುವುದೇ ? ಬೇಡ. ಶೌರ್ಯದ ಮೂರ್ತಿಯಂತಿದ್ದ ನನ್ನಣ್ಣನ ಮಗನಾದ ಶ್ರೀರಂಗ ರಾಯನು ಸರ್ವವಿಧದಿಂದಲೂ ಯೋಗ್ಯನಾಗಿದ್ದಾನೆ. ಈ ಗದ್ದುಗೆಯು ಅವನಿಗೆ ಸಲ್ಲುತಕ್ಕುದು. ಆದರೆ ಈ ವಿಷಯದಲ್ಲಿ ನನ್ನ ಮಾವನೂ ಹೆಂಡತಿಯೂ ವಿರುದ್ಧರಾಗಿದ್ದಾರೆ. ಇಂಥ ತೀರ ಸಮೀಪದ ಆಪ್ತರೇ ಹೀಗೆ ದುರಾಲೋಚನೆಯನ್ನು ಮಾಡಿದರೆ ಕಠಿಣವಾಗುವುದು. ನಾನು ನನ್ನ ಕರ್ತವ್ಯವನ್ನು ಪೂರೈಸಿಕೊಳ್ಳುವುದು ದುಸ್ಸಾಧ್ಯವಿದೆ. ಆದುದರಿಂದ ಈಗ ಸದ್ಯಕ್ಕೆ ಯಾವುದನ್ನೂ ಒಡೆದು ಆಡುವಂತಿಲ್ಲ. ಹೊತ್ತನ್ನು ನೋಡಿ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಆಗಲಿ ; ಹೆಂಡತಿ–ಮಾವಂದಿರ ತಂತ್ರವನ್ನೂ ನೋಡೋಣ. ನನ್ನ ನಚ್ಚಿನವರ ಯುಕ್ತಿಯನ್ನೂನೋಡೋಣ, ಪ್ರಸಂಗವಂತೂ ಬಲು ಬಿಕ್ಕಟ್ಟಿನದು. ಪಾರುಗಾಣಿಸುವವನು ಶ್ರೀ ವಿರೂಪಾಕ್ಷನಿದ್ದಾನೆ.

(೩)

ಅರಮನೆಯಲ್ಲಿ–ರಾಜ, ರಾಜ್ಞಿ.

**ಬಾಯಮ್ಮ:**—ಪುತ್ರನು ದೊಡ್ಡವನಾದನು. ಹದಿನಾಲ್ಕುವರುಷ ತುಂಬಿದವು. ಏಕಮಾತ್ರಪುತ್ರನ ಮೇಲೆ ಉದಾಸೀನವಾಗಿರಬೇಕೆ ? ಮದುವೆಯ ವಿಚಾರವನ್ನೇನಾದರೂ ಮಾಡಿರುವಿರೇನು ?

**ವೇಂಕಟ:**—ಮಾಡದೇನು ? ನಿನಗಿದ್ದಷ್ಟು ಯೋಚನೆಯು ನನಗೇನಿಲ್ಲವೆಂದಂದೆಯಾ ? ಕನ್ನೆಯನ್ನು ಗೊತ್ತುಮಾಡಿಟ್ಟಿರುವೆನು.

**ಬಾಯಮ್ಮ:**—ಯಾವ ಕನ್ನೆಯದು ? ಇಷ್ಟುದಿನವಾದರೂ ನನ್ನ ಮುಂದೆ ಆಡಿದುದಿಲ್ಲವಲ್ಲ!

**ವೇಂಕಟ:**—ನನ್ನ ಸೋದರ ಸೊಸೆ. ಓಬಲರಾಯನ ಮಗಳು. ತಕ್ಕವಳಾಗಿಲ್ಲವೇ ?

**ಬಾಯಮ್ಮ:**—ಓಹೋ, ಚೆನ್ನಾಗಿರುವಳು. ಇಲ್ಲಿಯೇ ಬಳಗದವರಲ್ಲಿಯೇ ಆದರೆ ನೆಟ್ಟಗಾಗುವುದು.

**ವೇಂಕಟ:**—ನಾಳಿನ ಮಾಘದಲ್ಲಿಯೇ ಲಗ್ನವನ್ನು ಮಾಡಿಬಿಡೋಣ.

**ಬಾಯಮ್ಮ**:—ಹೌದು. ಬೇಗನೆ ಮಗನ ತಲೆಯ ಮೇಲೆ ಅಕ್ಕಿಯ ಕಾಳು ಬಿದ್ದದ್ದನ್ನು ನೋಡಿ ಕೃತಾರ್ಥರಾಗೋಣ.

**ಶಾರದೆ**:—(ಬಂದು) ಅಮ್ಮಾ, ನಿಮ್ಮ ತಂದೆಯವರು ಕರೆಯುತ್ತಿರುವರು.

( ಬಾಯಮ್ಮ ಶಾರದೆಯೊಡನೆ ಹೋಗುವಳು. )

**ವೇಂಕಟ**:—ಮೊನ್ನೆ ಜಗ್ಗರಾಯನು ಚಿಕ್ಕರಾಯನಿಗೆ ನನ್ನ ಅಕ್ಕನ ಮಗಳನ್ನು ಕೊಡುವಂತೆ ವಿಚಾರವನ್ನು ತೆಗೆದನು. ಸಂಶಯ ಬರಬಾರದೆಂದು ಒಪ್ಪಿಕೊಳ್ಳಬೇಕಾಯಿತು. ಅದರಂತೆಯೇ ಈಗ ರಾಣಿಯ ಮುಂದೂ ಹೇಳಬೇಕಾಯಿತು. ಅಲ್ಲದೆ ಅದರಂತೆಯೇ ಮಾಡಬೇಕಾಗುವದು. ಏಕಂದರೆ ಪ್ರಿಯತಮೆಯ ಮನಸ್ಸನ್ನು ಖೇದಗೊಳಿಸಲಿಕ್ಕೂ, ಮಾವನ ಇಚ್ಛೆಯನ್ನು ಮುರಿಯಲಿಕ್ಕೂ ಅಧೀರನಾಗಿದ್ದೇನೆ. ಮತ್ತಲ್ಲದೆ ಓಬಲರಾಯನಂಥ ವೀರನ ಮಗಳನ್ನು ಚಿಕ್ಕರಾಯನಿಗೆ ಕೊಡಿಸಲಿಕ್ಕೂ ಮನಸ್ಸು ಒಪ್ಪುವದಿಲ್ಲ. ಆದರೇನು ? ಪಾಪಿಯೆಂದೋ ಏನೋ ಹೆಂಡತಿಯ ಮೇಲಿನ ಮೋಹವು ಬಿಡಲೊಲ್ಲದು. ಸೋದರ ಸೊಸೆಯನ್ನು ಚಿಕ್ಕರಾಯನಿಗೆ ಕೊಡಿಸಲೇಬೇಕು. ಆಗಲಿ, ನನ್ನಿಂದೇನಾಗಬೇಕಾಗಿದೆಯೋ ಆಗಲಿ.

( ೪ )

ಅರಮನೆಯಲ್ಲಿ—ಜ್ವರಪೀಡಿತನಾದ ವೇಂಕಟಪತಿರಾಯ, ಎಚ್ಚಮನಾಯಕ.

**ವೇಂಕಟ**:—ಎಚ್ಚಮಾ, ನನ್ನ ಹೆಂಡತಿಯು ಮೋಸದಿಂದ ಕೂಸನ್ನು ಚೋಪಾನಮಾಡಿ ಮಗನೆಂದು ಹೇಳಿಕೊಳ್ಳುತ್ತಿರುವಳು. ನನಗೇನಿನ್ನು ಸಾಯುವ ಕಾಲ. ಈ ಪವಿತ್ರವಾದ ವಿಜಯಸಿಂಹಾಸನವನ್ನು ಚಿಕ್ಕರಾಯನಿಗೆ ಕೊಡಲಾರೆನು. ಕುಲಗೇಡಿಗೆ ಮಕುಟವಿಟ್ಟು ಗದ್ದುಗೆಯನ್ನು ಅಪವಿತ್ರವನ್ನಾಗಿ ಮಾಡಲಾರೆನು. ಈ ಸಿಂಹಾಸನವು ರಾಜಬೀಜಕ್ಕೆ ಸಲ್ಲತಕ್ಕದ್ದು. ಅಕ್ಷತ್ರಿಯನಾದ ಈ ಚಿಕ್ಕರಾಯನಿಗೆ ಸಿಂಹಾಸನವನ್ನು ಕೊಡದೆ ನನ್ನ ಅಣ್ಣನ ಮಗನಾದ ಶ್ರೀರಂಗರಾಯನಿಗೆ ರಾಜ್ಯವನ್ನೊಪ್ಪಿಸಬೇಕೆಂದು ನನ್ನ ಮನಸ್ಸಿರುತ್ತದೆ. ಇದಕ್ಕೆ ಜಗ್ಗರಾಯನು ಸಿಟ್ಟಾಗಬಹುದು. ನೀನು ರಾಜಭಕ್ತಿನಿರತನಾಗಿ ಸಿಂಹಾಸನದ ಪಾವಿತ್ರ್ಯಕ್ಕೋಸ್ಕರವಾಗಿ ಶ್ರೀರಂಗರಾಯನೊಡನೆ ಇರಬೇಕು.

**ಎಚ್ಚಮ**:—ಜೀಯಾ, ವಿಜಯನಗರದ ವೀರರಾಜರೇರುವ ಸಿಂಹಾಸನವನ್ನು ಈ ಕುನ್ನಿಯನ್ನೇರಗೊಡಲಿಕ್ಕಿಲ್ಲ. ನನ್ನ ದೇಹದಲ್ಲಿ ಜೀವವಿರುವ ವರೆಗೆ ಸಿಂಹಾಸನದ ಸಲುವಾಗಿ ಹೆಣಗಾಡುವೆನು. ಈ ಎಚ್ಚಮನ ನಿಚ್ಚಟವಾದ ವಿಶ್ವಾಸವು ಭಂಗವಾಗಲಾರದೆಂದು ದೃಢವಾಗಿ ತಿಳಿಯಿರಿ. ಸಿಂಹಾಸನದ ಮರ್ಯಾದೆಯೇ

ನಮ್ಮ ಮರ್ಯಾದೆ; ಸಿಂಹಾಸನದ ಪಾವಿತ್ರ್ಯವೇ, ನಮ್ಮ ಪಾವಿತ್ರ್ಯ; ಸಿಂಹಾಸನವೆಂದರೆ ನಮ್ಮ ಪ್ರಾಣಕ್ಕಿಂತ ಅಧಿಕ. ಕರ್ನಾಟಕದ ಸಿಂಹಾಸನಕ್ಕಾಗಿ ಕೆಚ್ಚೆದೆಯ ಕನ್ನಡಿಗನು ಪ್ರಾಣಗಳನ್ನು ತೃಣೀಕರಿಸುವನು.

**ವೇಂಕಟಃ**—ನಾಯಕಾ, ಆನಂದವಾಯಿತು; ಸಮಾಧಾನವೆನಿಸಿತು. ಇನ್ನು ಮೇಲೆ ಒಳ್ಳೆಯ ಹರುಷದಿಂದ ಪ್ರಾಣಗಳನ್ನು ನೀಗುತ್ತೇನೆ. ಪಾಪಿಯಾದ ನಾನು ಹೆಂಡತಿಯ ಮೋಹಜಾಲದಲ್ಲಿ ಬಿದ್ದು ಈ ಸ್ಥಿತಿಯನ್ನು ತಂದೆನು. ನೀನು ಅದನ್ನು ಪರಿಹರಿಸಲು, ಸಿದ್ಧನಾಗಿರುವೆ ! ನೀನು ಧನ್ಯ ! ನಾನು ಉಪಕೃತನಾಗಿರುವೆನು. ಶ್ರೀರಂಗರಾಯನನ್ನು ಕರೆದುಕೊಂಡು ಬಾ. ಈ ರಾಜಮಕುಟವನ್ನೂ ಮುದ್ರೆಯನ್ನೂ ಖಡ್ಗವನ್ನೂ ಸಿಂಹಾಸನವನ್ನೂ ಒಪ್ಪಿಸುವೆನು. ಆತನೇ ರಾಜನೆಂದು ಸಾರಿಸುವೆನು.

**ಎಚ್ಚಮ**:— ಮಹದಾಜ್ಞೆ.

(ಹೋಗುವನು)

(೫)

ಬೀದಿಯಲ್ಲಿ—ಡಂಗುರದವ.

ಶ್ರೀಮದ್ವೇಂಕಟಪತಿಮಹಾರಾಜರು ದಿವಂಗತರಾದುದು ಸರ್ವಶ್ರುತವಷ್ಟೇ. ಅವರು ಮರಣಕಾಲದಲ್ಲಿ ನಿಯಮಿಸಿದ ಶಾಸನವೇನಂದರೆ— " ನನ್ನ ತರ್ವಾಯದಲ್ಲಿ ನನ್ನ ಅಣ್ಣನ ಮಗನಾದ ಶ್ರೀರಂಗರಾಯನು ಸಿಂಹಾಸನಾಧಿಕಾರಿಯು. ಆತನನ್ನೇ ಎಲ್ಲರೂ ರಾಜನೆಂದು ಒಪ್ಪಿಸಿಕೊಂಡಿರಬೇಕು. ಚಿಕ್ಕರಾಯನು ರಾಜ್ಯಕ್ಕೊಡೆಯನಲ್ಲ. " ಈ ಆದೇಶವು ಎಲ್ಲರಿಗೂ ತಿಳಿದಿರಲಿ. ಭದ್ರಂ.

(೬)

ಜಗ್ಗರಾಯನ ಮನೆ—ಜಗ್ಗರಾಯ.

**ಜಗ್ಗ**:— ವೇಂಕಟಪತಿಯು ಮಗನಿಗೆ ಸಿಂಹಾಸನವನ್ನು ಕೊಡದೆ ಆ ಶ್ರೀರಂಗನಿಗೆ ಕೊಟ್ಟನು. ಈ ರಾಜ್ಯದಲ್ಲಿ ನನ್ನ ಆಟವೇನೂ ನಡೆಯಲಾರದು, ನನ್ನ ಮಗಳ ಮಗನು ಪಟ್ಟದರಸಾಗಿದ್ದರೆ ನನ್ನ ಪ್ರಶಸ್ತಿಯುಳಿಯುವದು. ಚಿಕ್ಕರಾಯನು ಮೊಮ್ಮಗನಾಗಬೇಕು. ಶ್ರೀರಂಗರಾಯನು ನಮಗೇನು ? ಚಿಕ್ಕರಾಯನಲ್ಲಿ ಸಿಕ್ಕಂತೆ ಶ್ರೀರಂಗರಾಯನಲ್ಲಿ ನನಗೆ ಮರ್ಯಾದೆ ಸಿಕ್ಕುವುದೆಂಬುದು ಮಳಲಿನೆಣ್ಣೆಯಷ್ಟು ನಿಜವಾಮದು. ಅಲ್ಲದೆ ನಾವೀಗ ಸುಮ್ಮನೆ ಶ್ರೀರಂಗರಾಯನನ್ನು ಅರಸಾಗಗೊಟ್ಟರೆ ಚಿಕ್ಕರಾಯನು ಬಾಯಮ್ಮನ ನಿಜವಾದ ಮಗನಲ್ಲ

ವೆಂದು ಹೇಳಿಕೊಟ್ಟಂತಾಗುವದು. ನನ್ನ ಮಗಳಲ್ಲಿರುವ ಪ್ರಜೆಗಳ ಆದರವಿಶ್ವಾಸ ಗಳು ಅಳಿದುಹೋಗುವುವು. ಆಕೆಯು ರಾಜ್ಯದ ರಾಣಿಯಾಗಿದ್ದರೂಅರಮನೆಯಲ್ಲಿ ಆಕೆಗೆ ಸಿಗುವಷ್ಟು ಆದರವು ಸಿಕ್ಕಲಾರದು. ಇಚ್ಛೆಬಟ್ಟು ಜೋಪಾನಮಾಡಿದ ಕೂಸಿಗೆ ರಾಜ್ಯಪದವಿಲ್ಲದೆ ಹೋಯಿತೆಂದು ಕೊರಗುತ್ತ ಕಾಲಕಳೆಯ ಬೇಕಾಗು ವದು. ಚಿಕ್ಕರಾಯನು ಪಟ್ಟವೇರಿದರೆ ನನ್ನ ಮಗಳ ಚಿಂತೆಯೂ ದೂರಾಗುವದು, ಆಕೆಗೆ ಆದರವೂ ದೊರೆಯುವದು, ನನ್ನ ಪ್ರಶಸ್ತಿಯೂ ಉಂಟಾಗುವದು. ಇಲ್ಲವಾದರೆ ನನ್ನ ಬಾಳು ನಾಯಿಯದಕ್ಕಿಂತಲೂ ಕಡೆಯಾಗುವದು. ಚಿಕ್ಕರಾಯ ನನ್ನು ಸಿಂಹಾಸನದ ಮೇಲೆ ಕೂಡ್ರಿಸುವ ಹವಣಿಕೆಯನ್ನು ಮಾಡುವೆನು. ಮಾಂಡ ಲಿಕನಾಯಕರಿಗೆಲ್ಲ ನನಗೆ ಸಹಾಯಕರಾಗಿರೆಂದು ಬರೆದು ಕಳಿಸುವೆನು. ನನ್ನ ಲೋಚನಚಾತುರ್ಯದಿಂದ ಅವರೆಲ್ಲರೂ ನನ್ನ ಕಡೆಗಾಗುವಂತೆ ಮಾಡಿಕೊಳ್ಳುವೆನು. ಆ ಬಳಿಕ ಈ ಶ್ರೀರಂಗರಾಯನನ್ನು ಸಿಂಹಾಸನದಿಂದೆಳೆದು ಮೊಮ್ಮಗನನ್ನು ಕೂಡ್ರಿಸುವೆನು. ನಾನೊಬ್ಬನೇ ಇದನ್ನು ಮಾಡುವುದೆಂದರೆ ಶಕ್ಯವಾಗಲಾರದು. ( ಪತ್ರಬರೆಯುವದಕ್ಕಲ್ಲಿ ತೊಡಗುವನು. )

(೭)

ಬೀದಿಯಲ್ಲಿ—ಎಚ್ಚಮನಾಯಕ.

**ಎಚ್ಚಮ:**— ದುಷ್ಟನಾದ ಜಗ್ಗರಾಯನು ನೀಚಸ್ವಾರ್ಥಬುದ್ಧಿಯಿಂದ ಕೆಲಜನ ನಾಯಕರನ್ನು ತನ್ನಂತೆ ಮಾಡಿಕೊಂಡು ಪಟ್ಟಬಾಧ್ಯನಾದ ರಾಜನನ್ನು ಸಿಂಹಾಸನದಿಂದ ತಳ್ಳಿದನು. ಆ ದಿಕ್ಕುಗೇಡಿಯಾದ ಕುಲಗೇಡಿಯಾದ ಚಿಕ್ಕರಾಯ ನನ್ನು ಕುಳ್ಳಿರಿಸಿದನು. ಶ್ರೀರಂಗರಾಯನನ್ನು ಸೆರೆಮನೆಯಲ್ಲಿಟ್ಟಿರುವನು. ಚಿಕ್ಕ ರಾಯನು ವೇಂಕಟಪತಿರಾಯನ ನಿಜವಾದ ಪುತ್ರನೆಂದು ಬೀರಿರುವದರಿಂದ ಎಲ್ಲ ಜನರೂ ಆ ಜಗ್ಗರಾಯನ ಹಾಡಿಗೆ ಸೋ ಎನ್ನುತ್ತಾರೆ. ವೇಂಕಟಪತಿರಾಯನು ಸಿಂಹಾಸನದ ರಕ್ಷಣೆಯನ್ನು ನನ್ನ ಮೇಲೆ ಹೊರಿಸಿರುವರು. ಅಥವಾ ಅವರು ಹೊರಿಸುವದೇಕೆ ? ಅದು ನನ್ನ ಕರ್ತವ್ಯವಾಗಿದೆ. ಈ ಅಯೋಗ್ಯನು ಸಿಂಹಾ ಸನದಲ್ಲಿರುವುದನ್ನು ಹೇಗೆ ನೋಡಲಿ ! ಏನಾದರೂ ಸರಿಯೆ; ರಾಜವಂಶಕ್ಕೆ ಸಿಂಹಾಸನವನ್ನು ಮರಳಿ ತರಬೇಬೇಕು. ಆ ಜಗ್ಗರಾಯನು ಬೇಕಾದಷ್ಟು ಬೆದ ರಿಕೆಯನ್ನು ಹಾಕಬಹುದು. ಬಹುಬಲದೊಂದಿಗೆ ಏರಿ ಬರಬಹುದು. ಆದರೂ ಹಿಂಜರಿಯದೆ ಕಾರ್ಯವನ್ನು ಸಾಧಿಸಬೇಕು. ಆ ದುಷ್ಟನು ಮುಂಚಾವಿನಿಂದಲೂ ನನ್ನನ್ನು ಕರೆಸಲಿಕ್ಕೆ ಆಳುಗಳನ್ನಟ್ಟುತ್ತಲೇ ಇರುವನು. ಅದು ಇದಕ್ಕಾಗಿಯೇ

ಇರಬಹುದು. ಆತನ ಅಪ್ಪಣೆಯನ್ನು ನಾನು ಏನೆಂದು ನಡೆಸಬೇಕು ! ಈಗ ಜಗ್ಗರಾಯನು ಆಗಿನವನಲ್ಲ. ವೇಂಕಟಪತಿರಾಯರ ಮಾವನಲ್ಲ. ಮಾನ್ಯನಲ್ಲ ! ಸ್ವಾರ್ಥಿ ! ರಾಜದ್ರೋಹಿ ! ಸಿಂಹಾಸನದ್ವೇಷಿ ! ನೀಚ ಜಗ್ಗ !

**ಸೇವಕ**:—( ಬಂದು ) ಮಹಾರಾಜ ಜಗ್ಗರಾಯರು ತಮ್ಮನ್ನು ಕರೆಯುತ್ತಿರುವರು.

**ಎಚ್ಚಮ**:—ಏನು ! ಮಹಾರಾಜ ಜಗ್ಗರಾಯ ! ಥೂ, ಸರಿ. ಹೋಗತ್ತ. ನಮ್ಮ ಮಹಾಜರು ಶ್ರೀರಂಗರಾಯರು. ಈತನೆಲ್ಲಿಯ ಮಹಾರಾಜ ? ಸಾಕು, ಇನ್ನೊಮ್ಮೆ ಹೀಗೆ ನುಡಿದುಗಿಡದೀಯೆ ! ನಾನು ಬರುವದಿಲ್ಲ. ಹೋಗು. ಆ ಜಗ್ಗನಿಗೆ ಹೇಳು ನಡೆ.

( ಸೇವಕನು ಹೋಗುವನು. )

ಈತನೇನೋ ಮಹಾರಾಜನಂತೆ ! ಮಹಾರಾಜ ! ತನ್ನಷ್ಟಕ್ಕೆ ತಾನು ಹೇಳಿಕೊಂಡರೆ ಈ ಎಚ್ಚಮನು ಕೇಳುವನೇ ! ನನ್ನ ಮೇಲೆ ಅಧಿಕಾರ ನಡೆಯಿಸಲಿಕ್ಕೆ ಬರುತ್ತಾನೆ. ಇವನ ಅಧಿಕಾರವನ್ನು ಈ ಎಡಗಾಲಿನ ಕೆಳಕ್ಕೆ ಹಾಕಿ ತಿಕ್ಕಿಬಿಡುವೆನು. ಅಕೋ, ಯಾರೋ ಬಂದರು. ಜಗ್ಗನೇ ಬರುವಂತೆ ತೋರುವುದು ಬರಲಿ, ಬರಲಿ.

( ಜಗ್ಗನು ಪ್ರವೇಶಿಸುವನು. )

**ಜಗ್ಗ**:—ಎಲೋ, ಎಚ್ಚಮಾ, ಎಷ್ಟು ಕರೆಕಳುಹಬೇಕು ? ಬರಬಾರದೇನು?

**ಎಚ್ಚಮ**:—ನನ್ನನ್ನು ಕರೆಕಳುಹಿಸಲು ನೀನು ಯಾರು ? ನೀನು ಕರೆಕಳಿಸಿದರೆ ನಾನೇಕೆ ಬರಬೇಕು ?

**ಜಗ್ಗ**:—ನಾನು ಯಾರು ? ಮಹಾರಾಜರ ಮುತ್ತಯ್ಯ ಮಹಾರಾಜನಲ್ಲವೇ ? ಮಹಾರಾಜರು ಕರೆದರೆ ಬರಬಾರದೇನು ?

**ಎಚ್ಚಮ**:—ವೇಂಕಟಪತಿರಾಯರ ಮಾವನಾದುದಕ್ಕೆ ಶ್ರೀರಂಗರಾಯ ಮಹಾರಾಜರಿಗೆ ಮುತ್ತಯ್ಯನೇನೋ ನೀನು ಹೌದು. ಆದರೆ ರಾಜದ್ರೋಹಿ—ನಿಜ ಸ್ವಾರ್ಥಪರಾಯಣನಾದ ನೀನು ಮಹಾರಾಜನೆಂತಾಗುವಿ? ನಾನೆಂತು ನಿನ್ನ ಶಾಸನಗಳಿಗೆ ಬಗ್ಗಿನಡೆಯುವೆನು!

**ಜಗ್ಗ**:—ಏನು ? ಚಿಕ್ಕರಾಯನು ಮಹಾರಾಜನಲ್ಲವೇ? ಆತನನ್ನು ಪಟ್ಟಗಟ್ಟುವುದಕ್ಕೆ ನಿನ್ನ ಒಪ್ಪಿಗೆಯಿಲ್ಲವೇ ? ವೇಂಕಟಪತಿರಾಯನ ಮಗನಾದ ಚಿಕ್ಕರಾಯನಿಗೆ ರಾಜ್ಯಾಧಿಪತ್ಯವು ಬಾರದೆ ಆ ಶ್ರೀರಂಗರಾಯನಿಗೆ ಹೋಗಬೇಕೇ ?

ಎಚ್ಚಮ:— ಆ ಚಿಕ್ಕರಾಯನನ್ನು ರಾಜನೆಂದೊಪ್ಪಿಕೊಳ್ಳಬೇಕೆ ? ಛೆ! ಅದೆಂದಿಗೂ ಆಗದು. ವೇಂಕಟಪತಿರಾಯರ ಮಗನೇ ಅವನು ? ಕುಲಗೇಡಿ. ರಾಜ ಲಕ್ಷಣಗಳುಂಟೇ ? ಪೌರುಷವುಂಟೇ ? ಧೈರ್ಯಶೌರ್ಯಾದಿಗಳುಂಟೆ ! ಮೋರೆಯ ಮೇಲೆ ಕಳೆಯುಂಟೆ? ಜಾಲಿಯಬೊಡ್ಡಿಗೆ ಅಲಂಕಾರಗಳಿಂದ ಅಲಂಕರಿಸಿದಂತಾಗಿದೆ. ಆ ಕುಲಗೇಡಿಯಿಂದ-ಅಕ್ಷತ್ರಿಯನಿಂದ-ಈ ಸಿಂಹಾಸನದ ಪಾವಿತ್ರ್ಯವನ್ನು ಕೆಡಿಸಲು ಒಪ್ಪಿಕೊಳ್ಳಲೇ? ರಾಜವಂಶಜನಾದ ಶ್ರೀರಂಗರಾಯನೇ ಯೋಗ್ಯನಾದ ರಾಜನಲ್ಲದೆ ಉಳಿದವರಿಗಾರಿಗೂ ಈ ಎಚ್ಚಮನು ರಾಜನೆಂದೆನ್ನಲಿಕ್ಕಿಲ್ಲ ! ಆತನ ಹೊರತಾರಿಗೂ ಮಣಿಯಲಿಕ್ಕಿಲ್ಲ !

ಜಗ್ಗ :— ಎಚ್ಚಮಾ, ನೀನೀಗೀಗೇಕೋ ಬಹಳ ಸೊಕ್ಕಿಗೇರಿರುವಿ. ನಿನಗೆ ತಕ್ಕ ಶಿಕ್ಷೆಯನ್ನುಮಾಡದೆ ಬುದ್ಧಿಬರುವಂತಿಲ್ಲ. ಇನ್ನೊಮ್ಮೆ ಹೀಗೆಲ್ಲ ಈ ಮಹಾ ರಾಜನಿಗೆ ಪ್ರತಿಯಾಗಿ ನಡೆದೆಯೆಂದರೆ ನಿನ್ನ ಗತಿಯು ನೆಟ್ಟಗಾಗಲಿಕ್ಕಿಲ್ಲ. ಸುಮ್ಮನೆ ಚಿಕ್ಕರಾಯನ ರಾಜತ್ವವನ್ನು ಒಪ್ಪಿಕೊ.

ಎಚ್ಚಮ:— ನಾನು ಸೊಕ್ಕಿಲ್ಲ. ನೀನು ಮಾತ್ರ ಮಹಾರಾಜನಾಗುವೆ ನೆಂದು ಸೊಕ್ಕಿರುವಂತೆ ತೋರುವುದು. ನನಗೆ ಶಿಕ್ಷೆವಿಧಿಸಲಿಕ್ಕೆ ನೀನೆಷ್ಟರವನು? ಅನ್ಯಾಯದವರನ್ನು ದೇವರು ತಾನಾಗಿಯೇ ಶಿಕ್ಷಿಸುವನು. ಸ್ವಾರ್ಥಸಾಧಕನಾದ ನಿನಗೆ ನನ್ನ ರಾಜಭಕ್ತಿಯು ಸೊಕ್ಕಾಗಿ ಕಾಣಿಸುವುದಲ್ಲವೇ? ನನ್ನ ಗತಿಯೇನಾಗು ವುದೆಂಬುದನ್ನು ನಾನು ನೋಡಿಕೊಳ್ಳುತ್ತೇನೆ. ಆದರೆ ಆ ಕುಲಗೇಡಿಯ ಒಡೆತನ ವನ್ನು ಒಪ್ಪಿಕೊಳ್ಳುವುದಿಲ್ಲ! ತ್ರಿಕಾಲದಲ್ಲಿಯೂ ಈ ರಾಜನಿಷ್ಠನಾದ ಎಚ್ಚಮನಿಂದ ಆ ದ್ರೋಹವಾಗದೆಂದು ಸೆರಗಿನಲ್ಲಿ ಗಂಟುಹಾಕಿಕೊ. ಇಷ್ಟೇ ಅಲ್ಲ. ಮತ್ತೆ ಸಿಂಹಾ ಸನವು ರಾಜವಂಶಕ್ಕೆ ಹೊಂದಿಕೆಯಾಗುವಂತೆ ಮಾಡುವುದರಲ್ಲಿ ನನ್ನ ಪ್ರಾಣಗಳನ್ನು ಮುಂದಿಟ್ಟುಕೊಂಡೇ ಹೊರಡುವೆನು. ಎಂದ ಬಳಿಕ ಯಾರಿಗೇಕೆ ಅಂಜಬೇಕು? ಕರ್ನಾಟಕಸಿಂಹಾಸನದೊಡೆಯನನ್ನು ಸೆರೆಯಲ್ಲಿರಗೊಟ್ಟು ಕುಲಗೋತ್ರಗಳಿಲ್ಲದ ಪೋರನಿಗೆ ಶರಣೆನ್ನುವ ಕನ್ನಡಿಗನು ನಾನಲ್ಲ. ಸತ್ಯಕ್ಕೆ ಸಾವಿಲ್ಲವೆಂಬುದು ನಿಜ.

ಜಗ್ಗ:— ಎಚ್ಚಮನಾಯಕಾ, ನೀನು ಈ ಚಿಕ್ಕರಾಯನ ರಾಜತ್ವಕ್ಕೆ ಒಪ್ಪಿ ಕೊಂಡರೆ ಕಾರ್ಯಭಾರದಲ್ಲಿ ನಿನಗೆ ದೊಡ್ಡಸ್ಥಾನವನ್ನು ಕೊಡಿಸುವೆನು. ಸುಖವಾ ಗಿರು. ದಡ್ಡತನದಿಂದ ಇದನ್ನು ನೂಕಿ ಸಂಕಟಕ್ಕೊಳಗಾಗುವುದು ಸರಿಯಲ್ಲ. ವಿಚಾರಮಾಡಿನೋಡು. ಹಿಂದುಗಡೆ ಪಶ್ಚಾತ್ತಾಪಪಡಬೇಕಾದೀತು. ಈಗಲೇ ಪೂರ್ಣವಿಚಾರಮಾಡು.

**ಎಚ್ಚಮ:—** ಛೀ ! ಅದೆಂದಿಗೂ ಆಗದು. ವಿಚಾರಮಾಡಿದ್ದೇನೆ. ಚಿಕ್ಕ ರಾಜನು ಕುಲಗೇಡಿ; ನೀನು ಸ್ವಾರ್ಥಿ; ಶ್ರೀರಂಗರಾಯನು ಸಿಂಹಾಸನಾಧಿಪತಿ. ಇದೇ ನಿಶ್ಚಲವಾದ ಸಿದ್ಧಾಂತ. ಈ ಅಶಾಶ್ವತವಾದ ಸಿರಿಗೆ ಮೋಹಿಸಿ ರಾಜಭಕ್ತಿಯನ್ನು ಕಳೆದುಕೊಂಡು, ಸಿಂಹಾಸನದ ಪಾವಿತ್ರ್ಯವನ್ನು ಮಣ್ಣುಗೂಡಿಸುವ ವಿಚಾರವೇ ? ಛೆ ಛೆ ! ಇದು ನಿನ್ನಂಥ ನೀಚರಿಗಿರುವುದು. ನನ್ನನ್ನು ನಿನ್ನ ಮಾಲಿಕೆಯವನೆಂದು ತಿಳಿದೆಯಾ ? ಬರಲಿ, ಬರಲಿ. ಯಾವ ಯಾವ ಸಂಕಟಗಳು ಬರುವವೋ ನೋಡುತ್ತೇನೆ. ( *ಹೋಗುವನು.* )

**ಜಗ್ಗ:—** ಈ ಕೆಚ್ಚೆದೆಯ ಎಚ್ಚಮನು ರಾಜನಿಷ್ಠನಾಗಿ ನನ್ನ ಮಾತಿಗೆ ಒಪ್ಪಲಿಲ್ಲ. ಈ ಕಾರ್ಯದಲ್ಲಿ ಒಬ್ಬನು ಒಡೆದರೆ ಸಾಕು ; ಹಸಗೆಡುವ ಸಂಭವವುಂಟು. ಆಗಲಿ. ಆ ಒಬ್ಬ ಎಚ್ಚಮನು ಜನಸಹಾಯವುಳ್ಳ ನನಗೇನು ಮಾಡುವನೆಂಬುವನ್ನು ನೋಡೋಣ. ಶ್ರೀರಂಗರಾಯನು ಸೆರೆಯಲ್ಲಿರುವನು. ರಾಜ್ಯಸೂತ್ರವು ನನ್ನ ಕೈಯಲ್ಲಿರುವುದು. ಸಕಲನಾಯಕರು ನನ್ನವರಾಗಿರುವರು. ಏತಕ್ಕೆ ಈ ಎಚ್ಚಮನಿಂದ ಗಾಬರಿಯಾಗಬೇಕು?

## (೮)

### ಸೆರೆಮನೆಯಲ್ಲಿ—ಎಚ್ಚಮ.

**ಎಚ್ಚಮ:—** ಶ್ರೀರಂಗರಾಯನನ್ನು ಕಾಣಬೇಕೆಂದು ಎಷ್ಟು ಪ್ರಯತ್ನಪಟ್ಟರೂ ವ್ಯರ್ಥವಾಯಿತು. ಬಲವಾದ ಕಾವಲಿದೆ. ಒಳಗೆ ಹೋದೆನೆಂದರೆ ರಾಯನನ್ನು ಬಿಡಿಸುವುದು ದೊಡ್ಡಮಾತಲ್ಲ. ಆದರೆ ಈಗ ಹೇಗೆಮಾಡಬೇಕು ? ಆತನನ್ನಾಗದಿದ್ದರೂ ಆತನ ಮಗನನ್ನಾದರೂ ದೊರಕಿಸಬೇಕು. ಉಪಾಯವನ್ನೇನು ಮಾಡಲಿ ? ( *ಅತ್ತ ಬರುವವನನ್ನು ನೋಡಿ* ) ಎಲೋ ನೀನು ಯಾರೋ ?

**ಅಗಸ:—** ನಾನು ಅರಮನೆಯ ಅಗಸ. ಸೆರೆಮನೆಯ ಬಟ್ಟೆಗಳನ್ನು ಒಗೆಯುತ್ತೇನೆ.

**ಎಚ್ಚಮ:—** ( *ಸ್ವಗತ* ) ಚೆನ್ನಾಯಿತು, ಇವನಿಂದ ಕಾರ್ಯವನ್ನು ಸಾಧಿಸಿಕೊಳ್ಳುವೆನು. (*ಪ್ರಕಟ*) ಯಾರ ಬಟ್ಟೆಗಳನ್ನು ತರುವಿ ?

**ಅಗಸ:—** ಶ್ರೀರಂಗರಾಯಮಹಾರಾಜರವು.

**ಎಚ್ಚಮ:—** ಆ ಶ್ರೀರಂಗರಾಜರು ಮಹಾರಾಜರೇ ? ಏಕೆ ಹೀಗೆನ್ನುವೆ? ಚಿಕ್ಕರಾಯನು ಮಹಾರಾಜನಲ್ಲವೇ ? ಇನ್ನೊಮ್ಮೆ ಹೀಗೆಂದರೆ ರಾಜನು ದಂಡಿಸಿಯಾನು.

**ಅಗಸ**:— ಚಿಕ್ಕರಾಯನು ರಾಜನೇ ? ಆತನ ಕಥೆಯೆಲ್ಲ ನನಗೆ ಗೊತ್ತಿದೆ. ದುಷ್ಟನಾದ ಜಕ್ಕರಾಯನಿಂದ ಈ ಪರಿಸ್ಥಿತಿಯುಂಟಾಗಿದ್ದರೂ, ತೋರಿಕೆಗೆ ಚಿಕ್ಕ ರಾಜನು ರಾಜನಾಗಿದ್ದರೂ ಶ್ರೀರಂಗರಾಯರೇ ನಿಜವಾದ ರಾಜರು. ನನ್ನ ಮಾತು ಗಳನ್ನು ರಾಜನು ಹೇಗೆ ತಿಳಿಯುವನು ? ಹೇಗೆ ದಂಡಿಸುವನು?

**ಎಚ್ಚಮ**:— ನಾನು ಕೇಳಿಲ್ಲವೇ ? ನೀನು ಹೀಗೆ ರಾಜದ್ರೋಹಮಾಡಿ ದರೆ ನಾನು ಸುಮ್ಮನಿರುವೆನೇ ?

**ಅಗಸ**:— ದೇವರೂ ಕ್ಷಮಿಸಬೇಕು. ( ನಮಿಸುವನು )

**ಎಚ್ಚಮ**:— ನನ್ನದೊಂದು ಕೆಲಸವನ್ನು ಮಾಡಿಕೊಟ್ಟರೆ, ನಿನ್ನನ್ನು ಕ್ಷಮಿಸುವುದಲ್ಲದೆ ಮುಂದೆ ಅಪಾರವಾದ ಸಂಪತ್ತಿಯನ್ನೂ ಕೊಡುವೆನು. ನಿನ್ನ ರಾಜಭಕ್ತಿಗೆ ಮೆಚ್ಚಿರುವೆನು. ನಾನು ನಿನ್ನಂತೆ ಚಿಕ್ಕರಾಯನ ರಾಜತ್ವವನ್ನು ತಿರಸ್ಕ ರಿಸುವವನು. ನೀನಂಜಬೇಡ.

**ಅಗಸ**:— ಯಾವ ಕೆಲಸವು ನನ್ನಿಂದಾಗಬೇಕೆಂಬುದನ್ನು ಹೇಳಿರಿ.

**ಎಚ್ಚಮ**:— ಶ್ರೀರಂಗರಾಯರ ಮಗನಾದ ರಾಮರಾಯನನ್ನು ಹೇಗಾ ದರೂ ಮಾಡಿ ಗುಪ್ತವಾಗಿ ತೆಗೆದುಕೊಂಡು ಬಂದು ನನಗೆ ಒಪ್ಪಿಸಬೇಕು. ಸೆರೆಮನೆ ಯಲ್ಲಿಯೇ ಬಿಟ್ಟರೆ ನೀಚನಾದ ಜಗ್ಗನು ಏನಪಾಯವನ್ನೊಡ್ಡುವನೋ ತಿಳಿಯುವು ದಿಲ್ಲ. ಒಬ್ಬೊಬ್ಬರನ್ನೇ ಬಿಡಿಸಿಕೊಳ್ಳುವ ಯತ್ನಮಾಡಬೇಕು. ಅದರಂತೆ ನೀನು ರಾಮರಾಯನನ್ನೇ ಬಿಡಿಸಿಕೊಂಡು ಬರಬೇಕು.

**ಅಗಸ**:—ರಾಯರೇ, ನಿಮ್ಮ ಮಾತನ್ನು ಕೇಳಿ ಬಹಳ ಆನಂದವಾಯಿತು. ಏನಾದರೂ ಹಂಚಿಕೆಯನ್ನುಮಾಡಿ ರಾಜಕುಮಾರರನ್ನು ತೆಗೆದುಕೊಂಡು ಬರು ವೆನು. ಕೋಟೆಯಲ್ಲಿ ಯಾರಿಗೂ ಗೊತ್ತುಹತ್ತಗೊಡುವುದಿಲ್ಲ. ಆದರೆ ರಾಜಕುಮಾ ರರಿಲ್ಲದ ಸುದ್ದಿ ಹತ್ತಿದ ಜಗ್ಗರಾಯನು ನನ್ನ ಮೇಲೆ ಸಂಶಯಗೊಂಡರೆ ಹೇಗೆ ?

**ಎಚ್ಚಮ**:— ಅದರ ಚಿಂತೆಯನ್ನು ಬಿಡು. ಉಪಕಾರಿಗಳನ್ನು ಸಂಕಟಕ್ಕೀ ಡಾಗದಂತೆ ನೋಡಿಕೊಳ್ಳಲು ಈ ಕನ್ನಡ ಕತ್ತಿಯು ಸಿದ್ಧವಿದೆ. ಮಗುವನ್ನು ತಂದ ಮೇಲೆ ನಿಮ್ಮಿಬ್ಬರನ್ನೂ ಒಂದು ಸುರಕ್ಷಿತವಾದ ಸ್ಥಳಕ್ಕೊಯ್ದು ಮುಟ್ಟಿಸುತ್ತೇನೆ. ನಾನಿದ್ದೇನೆ, ಸಂಶಯವನ್ನು ಬಿಡು.

**ಅಗಸ**:— ಆಗಲಿ, ಹೋಗಿಬರುವೆನು. ಮಾಸಿದ ಬಟ್ಟೆಗಳ ಜೊತೆಯಲ್ಲಿ ರಾಮರಾಯರನ್ನೂ ಹಾಕಿಕೊಂಡು ಕತ್ತೆಯಮೇಲೆ ಹೇರಿಕೊಂಡು ಬರುತ್ತೇನೆ.

( ೯ )

ಸೆರೆಮನೆಯ ಹೊರಗೆ—ಕಾವಲುಗಾರರು, ಜಗ್ಗರಾಯ.

**ಜಗ್ಗ**:— ಮೂರ್ಖರಿರಾ ? ಏನು ಮಾಡಿದಿರಿ? ಕೆಲಸವನ್ನು ಕೆಡಿಸಿಬಿಟ್ಟಿರಿ! ರಾಮರಾಯನನ್ನು ಕಳೆದುಬಿಟ್ಟಿರಿ. ಎಚ್ಚರದಿಂದ ಕಾಯಬಾರದೇ? ಎಚ್ಚಮನು ಆತನನ್ನು ಬಿಡಿಸಿಕೊಂಡು ಹೋದನು. ನೀವು ನೋಡಲಿಲ್ಲವೆ? ನೀವೇನು ಕತ್ತೆ ಕಾಯುತ್ತಿದ್ದಿರಿ? ನಿಮ್ಮನ್ನೇತಕ್ಕೆ ನಿಯಮಿಸಿದೆ?

**ಒಬ್ಬ**:— ಮಹಾರಾಜ, ಎಚ್ಚಮನಾಯಕರು ಬಂದೇ ಇಲ್ಲ. ಅವರನ್ನು ನೋಡದೆ ಎಷ್ಟೋ ದಿನವಾಯಿತು. ರಾಮರಾಯರನ್ನು ಕರೆದುಕೊಂಡು ಯಾರೂ ಹೋಗಲಿಲ್ಲ.

**ಜಗ್ಗ**:— ಮೂರ್ಖರೇ, ಮತ್ತೂ ನಿಮ್ಮ ಹರಟೆಯನ್ನೇ ಹಚ್ಚುವಿರಲ್ಲ. ಯಾರೂ ಕರೆದುಕೊಂಡು ಹೋಗದಿದ್ದರೆ ಈಗೆಲ್ಲಿರುವನು ಹಾಗಾದರೆ? ಎಚ್ಚಮನು ಬಂದಿರಲಿಕ್ಕಿಲ್ಲ. ಮತ್ತಾರನ್ನಾದರೂ ಕಳಿಸಿರಬಹುದು.

**ಇನ್ನೊಬ್ಬ**:— ಇಲ್ಲ ಮಹಾರಾಜ; ನಮ್ಮ ಅವಿಶ್ವಾಸದವರು ಯಾರೂ ನಿನ್ನೆ ಬಂದಿಲ್ಲ.

**ಜಗ್ಗ**:— ಅವಿಶ್ವಾಸದವರು ಬಂದಿರಲಿಕ್ಕಿಲ್ಲ. ವಿಶ್ವಾಸದವರಾರಾದರೂ ಬಂದಿದ್ದರಷ್ಟೇ? ತಮ್ಮ ಕಾರ್ಯವನ್ನು ಸಾಧಿಸಲಿಕ್ಕೆ ವಿಶ್ವಾಸದವರಾಗಿಯೇ ಇದ್ದು ಹೀಗೆ ಒಳಗಿನಿಂದೊಳಗೆ ಘಾತಮಾಡುತ್ತಾರೆ. ವಿಶ್ವಾಸದವರು ಯಾರು ಬಂದಿದ್ದರು ?

**ಮತ್ತೊಬ್ಬ**:— ಎರಡುದಿನಕ್ಕೊಮ್ಮೆ ಬರುತ್ತಲಿದ್ದ ಅಗಸರ ಮರಿಯನೊಬ್ಬನೆ ನಿನ್ನೆ ಬಂದವನು. ಆತನು ಒಗೆದ ಅರಿವೆಗಳನ್ನುಕೊಟ್ಟು ಹಳೆಯ ಬಟ್ಟೆಗಳನ್ನು ಮಾತ್ರ ಒಯ್ದನು. ಆ ಕುಮಾರನನ್ನು ಹೇಗೆ ಒಯ್ಯುವನು ?

**ಜಗ್ಗ**:— ಅವನೇ ಕಳ್ಳ. ಅವನಿಂದಲೇ ಈ ಕಾರ್ಯವಾಯಿತು. ನೀವು ಮೈಗಳ್ಳರಾಗಿ ದುರ್ಲಕ್ಷಿಸಿದಿರಿ. ಕೆಲಸವನ್ನು ಕೆಡಿಸಿಬಿಟ್ಟಿರಿ. ಆ ಅಗಸನಿಗೆ ಈಗಿಂದೀಗಲೇ ಪ್ರಾಣಾಂತಶಿಕ್ಷೆಯನ್ನು ವಿಧಿಸುವೆನು. ಎಲೋ, ಅವನನ್ನು ಎಳೆದುಕೊಂಡು ಬನ್ನಿರಿಲ್ಲಿ. ( ಒಬ್ಬಸೇವಕನು ಹೋಗುವನು. )

**ಒಬ್ಬ**:— ಮಹಾರಾಜ, ಇದೊಂದು ಬಡವರ ತಪ್ಪನ್ನು ಕ್ಷಮಿಸಿರಿ. ಕಾಪಾಡಿರಿ.

**ಜಗ್ಗ**:— ( ಸ್ವಗತ ) ಕ್ಷಮಿಸದಿದ್ದರೆ ಜನರಲ್ಲಿ ನನ್ನ ವಿಷಯಕವಾಗಿ ವೈಮನಸ್ಯವುಂಟಾಗಬಹುದು. ದಯಾವಂತನಾಗಿರುವುದೇ ಹಿತಕರವಾದುದು. (ಪ್ರಕಟ) ಇದೊಂದು ಸಾರಿ ಕ್ಷಮಿಸಿದ್ದೇನೆ. ಮತ್ತೊಮ್ಮೆ ತಪ್ಪಿಗಿಪ್ಪೀರಿ ಮತ್ತೆ; ಎಚ್ಚರದಿಂದ ಕಾಯ್ದುಕೊಂಡಿರಬೇಕು. ಬಿಚ್ಚುಗತ್ತಿಯಿಂದ ಹತ್ತುಮಂದಿ ಸುತ್ತುವರಿಯುತ್ತಿರಬೇಕು. ಆತನು ಬೇಕಾದವನಿರಲಿ ಸೆರೆಯೊಳಿನ ಸನಿಯಕ್ಕೆ ಸುಳಿಯಕೂಡದು. ಅನ್ನವನಪ್ಪಿ ಕೊಡಲಿಕ್ಕೆ, ಬಟ್ಟೆಯನ್ನುಕೊಟ್ಟು ತೆಗೆದುಕೊಳ್ಳುವುದಕ್ಕೆ ಕದವನ್ನು ತೆರೆಯಬಾರದು. ಕಿಂಡಿಯೊಳಗಿಂದಲೇ ಅವೆಲ್ಲವನ್ನು ಮಾಡಬೇಕು. ನಾನು ದಿನಾಲು ಮುಂಜಾನೆಯೊಮ್ಮೆ ಸಂಜೆಗೊಮ್ಮೆ ಬಂದು ಸೆರೆಮನೆಯ ಬೀಗದ ಮುದ್ರೆಯನ್ನು ನೋಡುತ್ತೇನೆ. ಅದರಲ್ಲಿ ಒಂದು ತುಸು ಹೆಚ್ಚುಕಡಿಮೆಯಾಗಿತ್ತೆಂದರೆ ನಿಮ್ಮ ರುಂಡ ಹಾರಾಡಿದವೆಂದೇ ತಿಳಿಯಿರಿ. ಆ ಜೋಕೆ.

**ಸೇವಕ**:— ( ಬಂದು ) ಅಗಸರ ಮರಿಯನು ಊರಲ್ಲಿಯೇ ಇಲ್ಲ. ಮನೆಗೆ ಬೀಗಹಾಕಿದೆ. ನಿನ್ನೆ ಯಾವುದೋ ಊರಿಗೆ ಹೋದನೆಂದು ಓಣಿಯುವರು ಹೇಳಿದರು.

**ಜಗ್ಗ**:— ಹಾಳಾಗಿ ಹೋಗಲಿ, ಅಗಸನನ್ನು ತೆಗೆದುಕೊಂಡು ಮಾಡುವುದೇನು? ಆ ರಾಮನನ್ನೂ ಎಚ್ಚಮನನ್ನೂ ಹುಡುಕಿ ಕೊನೆಗಾಣಿಸಬೇಕು. ಇನ್ನು ಕಾವಲು ಬಿಗಿಯಾಗಿದೆ ; ರಂಗನು ಇಲ್ಲಿಯೇ ಕೊನೆಗಾಣುವನು.

( ೧೦ )

ಕಂಜಾವರದಲ್ಲಿ—ಅಲ್ಲಿಯ ನಾಯಕನಾದ ರಘುನಾಥರಾಯ, ಎಚ್ಚಮನಾಯಕ.

**ರಘು**:— ರಾಜನಿಷ್ಠಶ್ರೇಷ್ಠನೇ, ನಿನ್ನ ಪ್ರಯತ್ನವನ್ನುನೋಡಿ ನನಗೆ ಆನಂದವಾಯಿತು. ನಿನಗೆ ಸಹಾಯನಾಗುವುದು ನನ್ನ ಕರ್ತವ್ಯವಲ್ಲವೇ? ಈ ಹುಡುಗನನ್ನು ನನ್ನಾಶ್ರಯದಲ್ಲಿ ಇಡಬಹುದು. ಇವನಿಗಾಗಿ ನನ್ನ ಸರ್ವಸ್ವವನ್ನರ್ಪಿಸಲು ನಾನು ಸಿದ್ಧನಿದ್ದೇನೆ.

**ಎಚ್ಚಮ**:— ಮಿತ್ರರೇ, ಕೃತಕೃತ್ಯನಾದೆನು. ಇನ್ನೂ ಕೆಲವು ನಾಯಕರನ್ನು ನನ್ನಕಡೆಗೆ ಮಾಡಿಕೊಂಡು ಜಗ್ಗರಾಯನಮೇಲೆ ಧುಮ್ಮಿಕ್ಕಿ ರಾಯರನ್ನು ಬಿಡಿಸಿಕೊಂಡು ತರಬೇಕು. ಅದಕ್ಕಿಂತ ಮೊದಲು ಈಗ ನನ್ನ ಇಪ್ಪತ್ತುಜನ ವಿಶ್ವಾಸಿಕರಾದ ಸೇವಕರನ್ನು ವೇಷಾಂತರದಿಂದ ಕೋಟೆಯೊಳಕ್ಕೆ ಕಳಿಸಿ ಬಿಡಿಸಿಕೊಂಡು ಬರುವ ಯತ್ನವನ್ನು ಮಾಡೋಣ. ನಮ್ಮ ಸೇವಕರಲ್ಲಿ ಕೆಲವರು ಅಲ್ಲಿ ಕಾವಲಗಾರರಾಗಿದ್ದುಕೊಂಡು ಮತ್ತೆ ಕೆಲವು ಜನ ಕಾರ್ಯಪ್ರವರ್ತಕರಿಗೆ ಸಹಾಯಕರಾಗಿರ

ಬೇಕು. ಇದರಿಂದ ಶ್ರೀರಂಗರಾಯರ ಬಿಡುಗಡೆಯಾದರಂತೂ ಜಗ್ಗರಾಯನನ್ನು ಬಗ್ಗುಬಡಿಯುವುದು ಸುಲಭವೇ ಆಗುವದು. ಇಲ್ಲದಿದ್ದರೆ ನಾನೇ ಜೀವದ ಹಂಗುದೊರೆದು ಕಾದಿ, ಜಗ್ಗನನ್ನು ಜವನ ಮನೆಗೋಡಿಸಿ, ರಾಜನನ್ನು ಬಿಡಿಸಿಕೊಂಡು ಬರುವ ಶಕ್ತಿಯನ್ನಾದರೂ ಶ್ರೀಪಂಪಾಪತಿಯು ಈ ಕನ್ನಡಿಗನಿಗೆ ಕೊಟ್ಟಿರುವನು.

**ರಘು**:— ಇದರಲ್ಲೇನು ಸಂಶಯ? " ಯತೋಧರ್ಮಸ್ತತೋಜಯಃ." ರಾಜಭಕ್ತಿಯ ಸದಾವೇಶದಿಂದ ಕಾದುವ ನಮ್ಮೆದುರಿಗೆ ಸ್ವಾರ್ಥದ ದುಷ್ಪ್ರವೃತ್ತಿಯು ಹೇಗೆ ನಿಲ್ಲಬೇಕು? ದುಷ್ಟನಾದ ಜಗ್ಗರಾಯನು ಚಿಕ್ಕರಾಯನ ಮೇಲೆ ಕುಲಗೇಡಿಯೆಂಬ ಸಂಶಯವುಂಟಾಗದಂತೆ ಮೋಸದಿಂದ ಕೆಲವು ನಾಯಕರನ್ನು ಒಳಪಡಿಸಿಕೊಂಡಿದ್ದರೂ, ಈಗ ಅವರೆಲ್ಲರೂ ಆತನನ್ನು ತಿರಸ್ಕರಿಸುತ್ತಿದ್ದಾರೆ. ಆತನ ದುರ್ನಡತೆಗೆ ಬೇಸರಪಟ್ಟಿದ್ದಾರೆ. ಅವನಿಗೆ ಯಾರೂ ಸಾಹಾಯ್ಯಮಾಡಲಾರರು. ಏನೇ ಆಗಲಿ, ರಾಜಬೀಜವನ್ನು ರಕ್ಷಿಸುವುದಕ್ಕಾಗಿ ನಾವು ಕಂಕಣಬದ್ಧರಾಗಿರಬೇಕು.

**ಎಚ್ಚಮ**:—ನಾನು ಹೋಗಿ ಇಪ್ಪತ್ತು ಜನ ರಾಜನಿಷ್ಠರಾದ ಸೇವಕರನ್ನು ಕಳಿಸುವೆನು.

( ೧೧ )

ಸೆರೆಮನೆಯಲ್ಲಿ—ಶ್ರೀರಂಗರಾಯನು ರಾತ್ರಿಯಲ್ಲಿ ಸಚಿಂತನಾಗಿ ಕುಳಿತಿರುವಾಗ ಒಕ್ಕಟ್ಟಿನ ಮೂಲೆಯಲ್ಲಿ ಕಿಂಡಿ ಬೀಳಲು ಕೌತುಕದಿಂದ ನೋಡುತ್ತಿರುವನು. ಅದರೊಳಗಿಂದ ಒಬ್ಬ ಸೇವಕನು ಅತ್ತಿತ್ತ ನೋಡುತ್ತ ಸಾವಕಾಶವಾಗಿ ಬರುವನು.

**ಶ್ರೀರಂಗ**:—ಯಾರವರು ?

**ಸೇವಕ**:—ಮಹಾರಾಜ, ಗಾಬರಿಯಾಗಬಾರದು; ಮೆಲ್ಲನೆ ಮಾತಾಡಿರಿ. ನಾನು ಎಚ್ಚಮನಾಯಕನ ಸೇವಕನು, ತಮ್ಮ ದಾಸಾನುದಾಸನು.

**ಶ್ರೀರಂಗ**:—(ಆನಂದದಿಂದ) ಎಚ್ಚಮನ ಸೇವಕನೆ? ಇಂಥ ಕಠಿನವಾದ ಕಾವಲಿನಲ್ಲಿ ನೀನು ಹೀಗೆ ಮಾರ್ಗವನ್ನು ಮಾಡಿಕೊಂಡು ಹೇಗೆ ಬಂದೆ?

**ಸೇವಕ**:—ಸ್ವಾಮೀ, ನಾಯಕರು ಅಗಸನಿಂದ ಕುಮಾರರನ್ನು ಬಿಡಿಸಿಕೊಂಡು ಹೋದ ಬಳಿಕ ತಂಜಾವರದ ರಘುನಾಥರಾಯರ ಬಳಿಗೆ ಹೋದರು. ಅಲ್ಲಿಂದ ನಮ್ಮನ್ನು ಇಪ್ಪತ್ತು ಜನರನ್ನು, ನಿಮ್ಮನ್ನು ಬಿಡಿಸಿಕೊಂಡು ಬರುವಂತೆ ಆಜ್ಞಾಪಿಸಿ ಕಳಿಸಿದರು. ನಾವು ಇಲ್ಲಿ ಬಂದು ಕೆಲವರು ಕಾರಾಗೃಹರಕ್ಷಕರಾಗಿಯೂ ಕೆಲವರು ಈ ಪ್ರಕಾರದ ನೆಲದಾರಿಯನ್ನು ಮಾಡುವುದರಲ್ಲಿಯೂ ಸೇರಿಕೊಂಡೆವು.

ಕಾವಲುಗಾರರಾಗಿದ್ದವರು ನಮ್ಮ ಕಾರ್ಯವು ಸುಸೂತ್ರವಾಗಿ ನಡೆಯುವಂತೆ ತಮ್ಮ ಕಾವಲಿದ್ದಾಗ ನಡೆಸಿಕೊಡುತ್ತಿದ್ದರು. ದೇವರ ದಯೆಯಿಂದ ಇಂದಿಗೆ ಕಾರ್ಯವು ಅರ್ಧಪೂರ್ತಿಯಾಯಿತು. ಇನ್ನು ತಮ್ಮನ್ನು ಕರೆದುಕೊಂಡು ಹೋದೆವೆಂದರೆ ಉಳಿದರ್ಧವೂ ಮುಗಿದಂತಾಗುವುದು.

**ಶ್ರೀರಂಗ**:— ಭಲೆ ಭಲೆ, ರಾಜನಿಷ್ಠನಾದ ಎಚ್ಚಮನಾಯಕಾ, ನೀನೇ ಧನ್ಯನು ! ಈ ಪವಿತ್ರಸಿಂಹಾಸನಕ್ಕಾಗಿ, ನನ್ನ ಪೂಜ್ಯಪಿತೃವ್ಯನ ವಚನಪಾಲನಕ್ಕಾಗಿ, ನನ್ನ ಪ್ರಾಣರಕ್ಷಣೆಗಾಗಿ ಇಷ್ಟೊಂದು ಸಾಹಸಪಡುತ್ತಿರುವೆಯಲ್ಲವೆ? ಭಾಪು ಭಾಪು! ಸ್ವಾಮಿಭಕ್ತರಾದ ಸೇವಕರೇ, ನೀವೂ ಕೀರ್ತಿಶೇಷರು! ನನ್ನ ಬಿಡುಗಡೆಗಾಗಿ ಹೀಗೆ ಜೀವದಾಸೆಯಿಲ್ಲದೆ ಹೆಣಗುತ್ತಿರುವಿರಿ.

**ಸೇವಕ**:—ಮಹಾರಾಜ, ಈ ಸಿಂಹಾಸನದಧಿಪತಿಗಳ ಸೇವೆಮಾಡಿ, ಈ ಬೊಕ್ಕಸದ ದ್ರವ್ಯದಿಂದ ಜೀವಿಸಿದ್ದು ಪ್ರಪುಷ್ಟಕಾಯರಾದ ನಾವು ನಿಮಗೆ ಈ ಪ್ರಾಣಸಂಕಟದಲ್ಲಿಯೂ ಸಾಹಾಯ್ಯಮಾಡಬಾರದೇ ? ಒಡೆಯನು ಸೆರೆಮನೆಯಲ್ಲಿ ಬಳಲುತ್ತಿರಲು ಸೇವಕರಾದವರು ನೋಡುತ್ತ ಕುಳಿತುಕೊಳ್ಳಬೇಕೆ? ನಾವಂಥ ಕೃತಘ್ನರೆ? ಜೀಯಾ, ನಿಮಗೋಸ್ಕರ ನಮ್ಮ ಪ್ರಾಣಗಳ ಮೇಲಿನ ಕಕ್ಕುಲತೆಯನ್ನು ಬಿಡದಿದ್ದರೆ ನಾವು ತಮ್ಮ ಸೇವಕರಾಗಿದ್ದು ಏನುಮಾಡಿದಂತಾಯಿತು ? ನಿಮ್ಮ ಬಿಡುಗಡೆಯಲ್ಲಿ ನಮ್ಮಿಪ್ಪತ್ತುಜನರ ಪ್ರಾಣವು ಹೊದರೆ ಹೋಗಲಿ. ಸಿಂಹಾಸನದ ಪಾವಿತ್ರ್ಯವುಳಿಯುವುದು. ಯೋಗ್ಯನಾದವನು ರಾಜನಾಗುವನು. ಪ್ರಜೆಗಳಿಗೆ ಸುಖವಾಗುವುದು.

**ಶ್ರೀರಂಗ**:—ಸೇವಕರೇ, ನಾನು ನಿಮಗೆಲ್ಲರಿಗೆ ಉಪಕೃತನಾಗಿರುವೆನು. ನನಗೆ ಹಿಡಿಸಲಾರದಷ್ಟಾನಂದವಾಗಿದೆ. ಆದರೇನು ಮಾಡಲಿ? ಅದನ್ನು ಮನದಣಿಯಾಗಿ ಮಾತಾಡಿ ವ್ಯಕ್ತಮಾಡಿಯೇನೆಂದರೂ ಮಾರ್ಗವಿಲ್ಲ.

**ಸೇವಕ**:—ಈಗಿನ್ನು ಬೇಗನೆ ಹೊರಡಿರಿ.

**ಶ್ರೀರಂಗ**:—ಅದೋ ಯಾವನೋ ಕೆಮ್ಮುತ್ತಿರುವನು. ಪಹರೆಯವರು ಬರುತ್ತಿರುವಂತೆ ಕಾಣುವುದು. ನೀನೀಗ ಹೋಗು. ಪೂರ್ವರಾತ್ರಿಯು ಕಳೆದು ಮಧ್ಯರಾತ್ರಿಯು ಪ್ರಾಪ್ತವಾಗಿ ಮತ್ತೆ ಪ್ರಶಾಂತವಾಯಿತೆಂದರೆ ನಾನು ಈ ಕಿಂಡಿಯೊಳಗಿಂದ ಪಾರಾಗಿ ಬರುತ್ತೇನೆ. ನೀನಿನ್ನಿಲ್ಲಿ ನಿಲ್ಲಬೇಡ, ಘಾತವಾದೀತು. ನಿನ್ನ ಕೈಯೊಳಗಿನ ಆ ಹಲಗೆಯನ್ನು ತಾ. ಅದನ್ನಿದರ ಬಾಯಿಗಿಟ್ಟು ಮೇಲೆ ಕಂಬಳಿಯನ್ನು ಹಾಸಿಕೊಂಡು ಮಲಗಿಕೊಳ್ಳುತ್ತೇನೆ.

(೧೨)

ಕೋಟೆಯ ಒಂದೆಡೆಗೆ—ಇಬ್ಬರು ಪಹರೆಯವರು.

ಒಬ್ಬ:— ( ನೆಲದಲ್ಲಿ ಕಾಲು ಸಿಕ್ಕಿಬೀಳಲು ) ಎಲಾ, ಇದೇನಲೇ, ಕಾಲೇ ಸಿಗುಬೀಳುತ್ತದೆಯಲ್ಲ!

ಇನ್ನೊಬ್ಬ:—ನಾನು ಮೊದಲೇ ಹೇಳಲಿಲ್ಲವೇ ಅಲ್ಲಿ ಹಾವಿನ ಹುತ್ತುಗಳು ಬಹಳವೆಂದು ? ನೀನೇ ಜುಲುಮೆಯಿಂದ ಬಂದೆ.

ಒಬ್ಬ:—ಇದು ಹಾವಿನ ಹುತ್ತವಲ್ಲ ಬಿಡಲೇ. ಹುತ್ತವಾಗಿದ್ದರೆ ಇಷ್ಟು ಪೊಳ್ಳಿರುತ್ತಿತ್ತೇ ? ಇಲ್ಲೇನೋ ಮೋಜಿದೆ !

ಇನ್ನೊಬ್ಬ:—ಒಂದೊಂದು ಹಾವಿನ ಹುತ್ತು ಎಂಥ ದೊಡ್ಡವಿರುತ್ತವೆಂದಿ. ಇದಕ್ಕಿಂತ ದೊಡ್ಡವಿರುತ್ತವಪ್ಪ ! ಹುಳಹುಪ್ಪಡಿ ಕಚ್ಚಿಗಿಚ್ಚಿಯಾವು ಹೋಗೋಣ ಬಾ. ಸೆರೆಮನೆಯನ್ನು ಕಾಯುವವರಿಗೆ ರಾತ್ರಿಯ ಹೊತ್ತು ಈ ಹೋರಿನ ಗೊಡವೆಯೇಕೆ ? ಮುಂಜಾನೆ ಬಂದು ನೋಡಿಕೊಳ್ಳೋಣವಂತೆ.

ಒಬ್ಬ:—ನನಗೆ ಬಹಳ ಸಂಕಯು ಬರುತ್ತದೆಯಪ್ಪ. ಇದನ್ನು ನೋಡಿಕೊಂಡೇ ಹೋಗೋಣ. ಕಡ್ಡಿಯನ್ನು ಕೊರೆಯುತ್ತೇನೆ. ( ಕಡ್ಡಿಯನ್ನು ಕೊರೆದು ನೋಡುವನು ) ನೋಡೋ, ಇದು ಹಾವಿನ ಹೋರು ಎನ್ನುತ್ತಿರುವೆ ? ಕಳ್ಳದಾರಿ.

ಇನ್ನೊಬ್ಬ:—ಹೌದಪ್ಪ; ಹಾವಿನ ಹುತ್ತವೆಂದು ಮಾಡಿದ್ದೆನು. ಹಾಗೇ ಸುಮ್ಮನೆ ಹೋಗಿದ್ದರೆ ಯದ್ವಾತದ್ವಾ ಆಗುತ್ತಿತ್ತು. ಬಹಳ ಚೆಲೋ ಮಾಡಿದಿ.

ಒಬ್ಬ:—ಈ ಸುದ್ದಿಯನ್ನು ಮಹಾರಾಜರಿಗೆ ತಿಳಿಸಬೇಕು.

ಇನ್ನೊಬ್ಬ:—ಈಗ ಐದು ತಾಸು ರಾತ್ರಿಯಾಗಿದ್ದೀತು. ಈಗ ಹೋಗಿ ಎಬ್ಬಿಸಿದರೆ ಮಹಾರಾಜರು ಕೋಪಿಸಿಕೊಳ್ಳಲಿಕ್ಕಿಲ್ಲವೇ ? ಮುಂಜಾನೆ ತಿಳಿಸೋಣ.

ಒಬ್ಬ:—ಹಾಗೆಂದೂ ಆಗದು. ಏನಾದರೂ ದುಷ್ಟಪ್ರಸಂಗಗಳೊದಗಿದಾಗ ಕೂಡಲೇ ಬಂದು ತಿಳಿಸಬೇಕೆಂದು ಅವರ ಅಪ್ಪಣೆಯಾಗಿದೆ.

ಇನ್ನೊಬ್ಬ:—ಹಾಗಾದರೆ ನೀನು ಹೋಗಿ ಕರೆದುಕೊಂಡು ಬಾ. ನಾನಿಲ್ಲಿಯೇ ಕಾಯುತ್ತ ಕುಳಿತುಕೊಳ್ಳುತ್ತೇನೆ.

( ಆ ಪಹರೆಯವನು ಹೋಗುವನು. )

ಇನ್ನೊಬ್ಬ:—ನಾವು ಮಾಡಿದ ಕಾರ್ಯವೆಲ್ಲ ವ್ಯರ್ಥವಾಯಿತು. ನೆಲದಾರಿಯನ್ನು ಸಿದ್ಧಗೊಳಿಸಿ ಇಂದೇ ಇನ್ನೊಂದು ತಾಸಿಗೆ ಮಹಾರಾಜರನ್ನು ಪಾರುಮಾ

ಡುವವರಿದ್ದೆವು. ಈಗ ಈ ಕಂಟಕವು ಬಂದೊದಗಿತು. ಅವರು ಬರುವಷ್ಟರಲ್ಲಿ ಇಲ್ಲಿಂದ ಹೋಗಿ ಶ್ರೀರಂಗರಾಯರನ್ನೆಬ್ಬಿಸಿಕೊಂಡು ಹೋಗಲೇನು ? ಇಷ್ಟು ಅವಸರವಾದರೆ ಕೆಲಸವು ಹೇಗೆ ನೆರವೇರಬೇಕು ? ಗೊತ್ತಾಗಬಾರದೆಂದು ನಾನಾದರೂ ಬಹಳ ಪ್ರಯತ್ನಮಾಡಿದೆನು. ಕಡೆಗೆ ಈ ಗತಿಯಾಯಿತು ! ಗೊತ್ತಂತೂ ಆಯಿತು; ಇನ್ನು ಮೇಲೆ ಆದದ್ದಾಗಲಿ. ಬೇಗನೆ ಹೋಗಿ ಮಹಾರಾಜರನ್ನು ಹೊರಡಿಸಿಕೊಂಡು ಬರುವೆನು. ( ಕಿಂಡಿಯೊಳಗಿಂದಿಳಿದು ಹೋಗುವನು ).

( ಜಗ್ಗನು ಆರೇಳು ಆಳುಗಳೊಡನೆ ಬಂದು )

**ಜಗ್ಗ**:—ಇದೇ ಅಹುದೊ ಅಲ್ಲೊ ?

**ಪಹರೆಯುವ**:—ಅಹುದು ಮಹಾರಾಜ.

**ಜಗ್ಗ**:—ಇಲ್ಲಿ ಈಗ ಅಗಿಯಿರಿ.

( ಆಳುಗಳು ಅಗಿಯುವರು )

**ಜಗ್ಗ**:—ಇದು ನೆಲವಾರಿ. ಶ್ರೀರಂಗರಾಯನು ಮೋಸಮಾಡಬೇಕೆಂದಿದ್ದನು. ರಾತ್ರಿಯಾಗಿದ್ದರೂ ಬಂದು ನನ್ನನ್ನೆಬ್ಬಿಸಿ, ನೀನು ಬಹಳ ಲೇಸುಮಾಡಿದೆ. ಈ ಮಾರ್ಗವನ್ನು ಎಲ್ಲಿಂದ ಎಲ್ಲಿಯವರೆಗೆ ಮಾಡಿರುವರೆಂಬುದನ್ನು ನೋಡೋಣ ನಡೆಯಿರಿ. ಇದನ್ನು ಯಾರೂ ಅರಿಯದಂತೆ ತೋಡಿದ ಚತುರರಾರು ? ಆ ಎಚ್ಚಮನೇ ಮಾಡಿಸಿರಬೇಕು. ಎಂಥ ಸಾಹಸಿಯವನು ? ತನ್ನ ಸಾಹಸವು ವಿಜಯಿಯಾಗುವುದೆಂದು ಹಿಗ್ಗುತ್ತಿರಬಹುದು. ಆದರೆ ಈಗ ಹೇಗಾಯಿತು ?

( ಗವಿಯಲ್ಲಿ ಇಳಿದು ನಾಲ್ಕೈದು ಹೆಜ್ಜೆ ಹೋಗುವಷ್ಟರಲ್ಲಿ ಒಬ್ಬ ಸೇವಕನೊಂದಿಗೆ ಶ್ರೀರಂಗರಾಯನು ಎದುರಿಗೆ ಬರುವನು. ಅವನನ್ನು ಹಿಡಿದುಕೊಂಡು ಜಗ್ಗರಾಯನು ಹೊರಗೆ ಬರುವನು.)

**ಜಗ್ಗ**:—ಹೀಗೆ ಮೋಸಮಾಡಿ ಪಾರಾಗಬೇಕೆಂದು ಮಾಡಿದೆಯೇನು ? ಇದು ನನಗೆ ಗೊತ್ತಾಗಿ, ಮೈಮೇಲೆ ಕಠಿನ ಪ್ರಸಂಗವು ಬಂದೀತೆಂದು ನಿನ್ನ ಕಲ್ಪನೆಯಲ್ಲಿ ಬರಲಿಲ್ಲವೇ ?

**ಶ್ರೀರಂಗ**:—ನೀನು ಸಂಭಾವಿತನಲ್ಲವೆ ? ಕುಲಗೇಡಿಯನ್ನು ಪಟ್ಟಕ್ಕೆ ಕೂಡ್ರಿಸಿ ನನ್ನನ್ನು ಸೆರೆಯಿಡಲಿಕ್ಕೆ ನೀನೇನು ಮೋಸವಿಲ್ಲದೆ ಯತ್ನಿಸಿದೆಯಾ ? ನಿನ್ನ ಸ್ವಾರ್ಥದ ಮೋಸಕ್ಕಿಂತ ನನ್ನ ದೇಶಾಭಿಮಾನದ—ಸಿಂಹಾಸನಾಭಿಮಾನದ ಮೋಸವು ಜಗತ್ತಿಗೆ ಲೇಸಾಗಿ ತೋರುವುದು. ನೀನು ಹೀಗೆ ಜನರನ್ನೆಲ್ಲ ಬೊಗಳೆದು

ಕರ್ನಾಟಕ ಸಿಂಹಾಸನವನ್ನು ಕುಲಗೇಡಿಯಾದ ಚಿಕ್ಕರಾಯನಿಗೆ ಕೊಟ್ಟಂತೆ ಮಾಡಿ ನೀನೇ ಮಹಾರಾಜನಂತೆ ಮೆರೆಯುತ್ತಿರುವೆಯಲ್ಲವೆ ? ಇದು ಕರ್ನಾಟಕ ಸಿಂಹಾಸನಾಭಿಮಾನಿಗಳಾದ ವೀರರ ಮನಸ್ಸಿಗೆ ಬಾರದೆ ನಿನ್ನ ನಾಶಕ್ಕೆ ಕಾರಣವಾದೀತೆಂದು ಬಗೆಯಲಿಲ್ಲವೇ ! ಛೀ, ರಾಷ್ಟ್ರದ್ರೋಹೀ !

**ಜಗ್ಗ**:— ಎಲೋ, ಹೆಚ್ಚು ಗಳಹಬೇಡ. ಯಾರಮುಂದೆ ನಿಂತಿರುವಿಯೆಂಬುದರ ಅರಿವು ನಿನಗಿಲ್ಲವೇನು ?

**ಶ್ರೀರಂಗ**:—ಹೋಹೋ ಗೊತ್ತಿದೆ! ತೊತ್ತಿನ ಮಗನನ್ನು ಸಿಂಹಾಸನದ ಮೇಲೆ ಕೂಡ್ರಿಸಿ, ಮಹಾರಾಜನಾದ ನನ್ನ ಕಕ್ಕನ ಶಾಸನವನ್ನು ಮುರಿದ ರಾಜದ್ರೋಹಿ! ಕರ್ನಾಟಕಸಿಂಹಾಸನದ ಪಾವಿತ್ರ್ಯಘಾತುಕ! ಸ್ವಜನದ್ವೇಷಿ! ನೀಚ ! ಸ್ವಾರ್ಥಿ! ಜಗ್ಗನಲ್ಲವೇ ನೀನು? ನನಗೆಲ್ಲ ಗೊತ್ತಿದೆ!

**ಜಗ್ಗ**:— ಸಾಕು, ನಿನ್ನ ರಗಳೆಯನ್ನು ಸಾಕುಮಾಡು. ಸಿಂಹಾಸನದ ಪಾವಿತ್ರ್ಯವೇ ? ಸಿಂಹಾಸನವು ರಾಜವಂಶಕ್ಕಾಗಬೇಕೇ ? ನೋಡೋಣ, ಯಾವನು ಹಾಗೆ ಮಾಡುವನೋ ನೋಡೋಣ. ನಿನ್ನನ್ನಿಲ್ಲಿಯೇ ಇಲ್ಲೆನಿಸಿಬಿಟ್ಟು ನಿನ್ನ ಕುನ್ನಿಯನ್ನೊಯ್ದ ಆ ಕಳ್ಳನನ್ನೂ ರಾಮನನ್ನೂ ಅಲ್ಲಿಯೇ ನಾಶಮಾಡಿ ಬಿಡುತ್ತೇನೆ. ಆ ಮೇಲೆ ಯಾರು ಯಾರಿಗೆ ಸಿಂಹಾಸನವನ್ನು ಕೊಡಿಸುವರು?

**ಶ್ರೀರಂಗ**:— ಈ ಕಾರ್ಯವು ಸುಲಭಸಾಧ್ಯವೆಂದು ತಿಳಿದಿರುವಿಯಾ ? ರಾಷ್ಟ್ರವು ಎಚ್ಚತ್ತಿರುವುದು. ನಿಮ್ಮ ಈ ನೀಚರಾಜತ್ವವು ಬೇಡಾಗಿರುವುದು. ಸಿಂಹಾಸನದ ಮಾನ, ದೇಶದ ಮಾನ, ಸ್ವಾಭಿಮಾನ ಇವುಗಳನ್ನು ಕಾಯ್ದುಕೊಳ್ಳುವ ಕಡೆಗೆ ಕನ್ನಡಿಗರ ಮನಸ್ಸು ಹರಿಯಹತ್ತಿದೆ. ವಿಜಯನಗರದ ಸಿಂಹಾಸನದ ಪಾವಿತ್ರ್ಯ ರಕ್ಷಣೆಗೆಂದರೆ ಪ್ರಾಣವನ್ನು ಕಃಪದಾರ್ಥವೆಂದು ಬಗೆಯುವ ವೀರನಾಯಕರು ಎಷ್ಟೋಮಂದಿಯಿರುವರು! ಎಚ್ಚತ್ತ ರಾಷ್ಟ್ರವನ್ನು ನೀನಿನ್ನು ಬಗ್ಗುಬಡಿಯವುದು ಶಕ್ಯವಿಲ್ಲ. ನಿನ್ನ ನೀಚತನಕ್ಕಾಗಿ ನಿನಗೆ ಶಿಕ್ಷೆಯಾಗುವುದು. ರಾಜಭಕ್ತಿಯಿಂದಲೂ, ಸಿಂಹಾಸನಾಭಿಮಾನದಿಂದಲೂ, ದೇಶಾಭಿಮಾನದಿಂದಲೂ, ಪ್ರಯತ್ನಪಡುತ್ತಿರುವ ಶೂರನಾದ ಕೆಚ್ಚೆದೆಯ ಕನ್ನಡಿಗನಾದ ಎಚ್ಚಮನ ಬೆನ್ನಿನಲ್ಲಿದ್ದ ನನ್ನ ಕುಮಾರಕನು ಯಾವನಿಗೂ ಸಿಕ್ಕಲಾರನು. ಇಷ್ಟುದಿನ ಸೆರೆಯಲ್ಲಿ ಕೊಳೆತು, ಈಗ ನಿನ್ನ ಕೈಯಲ್ಲಿ ಆಯತ್ತವಾಗಿ ಸಿಲುಕಿರುವೆನು. ನನ್ನನ್ನು ನಿನ್ನ ನೀಚವಾದ ಕತ್ತಿಯು ಕಡಿಯ ಬಹುದು. ಆದರೆ ಸಿಂಹಾಸನವು ನಿನಗೆ ಸ್ಥಿರವಾಗಲಾರದು ! ನಿನ್ನ ಪ್ರತಿಷ್ಠೆಯು ಸ್ಥಿರವಾಗಲಾರದು ! ನಿನ್ನ ಅಧಿಕಾರವು ಸ್ಥಿರವಾಗಲಾರದು ! ಕನ್ನಡಿಗರ ಏಕೀಕರಣ

ವಾಗಿ ನಿನ್ನ ಮದವು ಝುರ್ರನೆ ಇಳಿಯುವುದು! ಸ್ವಾರ್ಥವು ಮಣ್ಣುಗೂಡುವುದು! ನಿನ್ನ ಪಾಪಮಯವಾದ ರಕ್ತವು ಹಳ್ಳವಾಗಿ ಹರಿಯುವುದು! ಸಿಂಹಾಸನವು ಪವಿತ್ರವಾದ ರಾಜವಂಶಕ್ಕೆ ಹೊಂದಿಕೆಯಾಗುವುದು!

**ಜಗ್ಗ:**— ಇವನನ್ನೀಗಳೇ ಹೊಡೆದು ಬಿಡಿರಿ.

**ಶ್ರೀರಂಗ:**— ಕನ್ನಡಿಗನು ಸಾವಿಗಂಜುವುದಿಲ್ಲ. ಅಪವಿತ್ರವಾದ ಕಾರ್ಯಕ್ಕೆ ಒಪ್ಪಿಕೊಳ್ಳುವುದಿಲ್ಲ. ನೀಚಸ್ವಾರ್ಥಿಗಳ ಕಡೆಗೆ ಸೀತುಸಿಂಬಳವನ್ನೂ ಹಾಕುವುದಿಲ್ಲ. ನೀನು ಎಷ್ಟೆಷ್ಟು ಉರಿಯುವೆಯೋ ಅಷ್ಟಷ್ಟು ನಿನ್ನ ನಾಶವು ಸಮೀಪಿಸಿತೆಂದು ತಿಳಿ.

**ಜಗ್ಗ:**— ಏಕೆ ನಿಂತಿರಿ? ಇವರಿಬ್ಬರನ್ನೂ ಕಟ್ಟಿಕೊಂಡು ಗಲ್ಲಿನ ಸ್ಥಳಕ್ಕೆ ಹೋಗಿರಿ. ಇವನ ಪಕ್ಷದವರಾರಾರೆಂಬುದನ್ನು ಗೊತ್ತುಹಚ್ಚಿ ಅವರಿಗೆಲ್ಲರಿಗೂ ಈ ಗತಿಯನ್ನೇ ಕೊಡಿಸಬೇಕು.

( ಆಳುಗಳು ಶ್ರೀರಂಗನೂ—ಸೇವಕರನ್ನು ಒಯ್ಯುವರು. )

( ೧೩ )

ತಂಜಾವರದಲ್ಲಿ—ಎಚ್ಚಮನಾಯಕ, ರಘುನಾಥರಾಯ.

**ಎಚ್ಚಮ:**— ಆ ಜಗ್ಗನ ನೀಚತನವು ಮಿತಿಮೀರಿರುವದು. ನನ್ನವರು ನಡೆಯಿಸಿದ ಪ್ರಯತ್ನವು ಆತನಿಗೆ ಗೊತ್ತಾಗಿ ರೊಚ್ಚಿಗೆದ್ದು ರಾಜನನ್ನೂ ಕೆಲವು ಜನ ಸೇವಕರನ್ನೂ ಕೊಲ್ಲಿಸಿದನಂತೆ. ಈಗ ಉಳಿದುಕೊಂಡಿರುವ ಈ ರಾಜಬೀಜವೊಂದನ್ನು ಸುಡಬೇಕೆಂದು ಹೊರಟಿರುವನಂತೆ!

**ರಘು:**— ಆಗಲಿ, ಆ ಮೋಸಗಾರನಾದ ಮುದುವನ ಮೈಯೊಳಗೆ ಜಿಗಟಿಪ್ಪಿದೆಯೆಂದು ಗೊತ್ತಾಗಿಹೋಗಲಿ. ಧೂಳುಹಾರಿಸೋಣ.

**ಎಚ್ಚಮ:**— ಮೈಯೆಲ್ಲ ಧಗಧಗನೆ ಉರಿಯುತ್ತಿರುವುದು! ಆ ಜಗ್ಗ ಕುನ್ನಿಯನ್ನು ಏನುಮಾಡಲಿ! ಜಗ್ಗನು ಜೀವಿಸಿರುವವರೆಗೆ ಈ ಕತ್ತಿಯನ್ನು ಕೆಳಗಿಡಲಾರೆ! ಜಗ್ಗನನ್ನು ಯಮನೂರಿಗೆ ಕಳಿಸಿಯೇ ನನಗೆ ವಿಶ್ರಾಂತಿ! ಶ್ರೀಭುವನೇಶ್ವರಿಯ ಪಾದಸಮಕ್ಷದಲ್ಲಿ ಮಾಡಿದ ಕೆಚ್ಚೆದೆಯ ಕನ್ನಡಿಗನ ಪ್ರತಿಜ್ಞೆಯಿದು!

**ರಘು:**— ನಾವು ಹೋಗುವ ತ್ರಾಸವಿಲ್ಲ. ತಾನಾಗಿಯೇ ಸಾವಿಗೆ ಮೆಚ್ಚಿ ನಮ್ಮ ಕತ್ತಿಯ ಕೆಳಗೆ ಗೋಣನ್ನು ತರುತ್ತಿರುವನು. ಬರಲಿ.

**ಎಚ್ಚಮ:**—ಹೀಗೆ ಆತನನ್ನು ಇಲ್ಲಿಯ ವರೆಗೆ ಬರಗೊಡುವುದು ಹಿತಕರವಲ್ಲ. ನೀಚನು ಮೋಸಮಾಡಿಯಾನು. ಈ ರಾಜಪಿಂಡದಿಂದ ಆ ಜೋಡಿಯು

ದೂರವೇ ಇರಲಿ. ನಾವೇ ಇಲ್ಲಿಂದ ಹೋಗಿ ದಾರಿಯಲ್ಲಿ ಎದುರಿಸಿ ಧೂಳುಹಾರಿಸ ಬೇಕು.

**ರಘು**:— ಹಾಗೆಯೇ ಆಗಲಿ. ನನ್ನ ಸೈನ್ಯದೊಡನೆ ಹೊರಡೋಣ. ರಾಜ ನನ್ನು ನುಂಗಿದ ಆ ರಾಕ್ಷಸನೊಡಲನ್ನು ಸೀಳುವ ವರೆಗೆ ಸಮಾಧಾನವೆನಿಸಲಾರದು.

**ಎಚ್ಚಮ**:— ನೀವು ರಾಮರಾಯನ ರಕ್ಷಣೆಗಾಗಿ ಇಲ್ಲಿಯೇ ಇರಬೇಕು. ನಾನು ತಮ್ಮ ಸೈನ್ಯದೊಡನೆ ಜಗ್ಗನಿಗೆ ಇದಿರಾಗುವೆನು. ಇಲ್ಲಿ ಚತುರನೂ ಶೂರನೂ ಆದ ರಕ್ಷಕನು ರಾಮರಾಯನ ಹತ್ತರ ಇರಲಿಕ್ಕೇಬೇಕು.

**ರಘು**:— ನನಗೂ ಯುದ್ಧದ ಮಹಾಸಮಾರಾಧನೆಗೆ ಬರಗೊಟ್ಟರೆ ಚೆನ್ನಾಗುವುದು.

**ಎಚ್ಚಮ**:— ರಘುನಾಥರಾಯರೇ, ನೀವು ಬರುವಷ್ಟು ಆವಶ್ಯಕತೆಯೇ ನೂ ಇಲ್ಲ. ಅಲ್ಲದೆ ನಿಮ್ಮ ರಕ್ಷಣೆಯಿಲ್ಲಿ ಅವಶ್ಯವಾಗಿರಬೇಕು. ಆ ನರಿಯ ಬೇಟೆಗೆ ಈ ಎಚ್ಚಮನೊಬ್ಬನೆ ಸಾಕು. ತಾವು ಇಲ್ಲಿಯೇ ಇರಬೇಕು. ನಾನು ಹೋಗುವೆನು; ಅಪ್ಪಣೆಯನ್ನು ಕೊಡಿರಿ.

**ರಘು**:— ನಾಯಕರೇ, ನಿಮ್ಮ ಕತ್ತಿಯು ರಾಜನಿಷ್ಠವಾಗಿ ಸಿಂಹಾಸನದ ಪಾವಿತ್ರ್ಯರಕ್ಷಣೆಗಾಗಿ ಹೆಣಗಾಡುತ್ತಿರಲು, ನನ್ನ ಕತ್ತಿ ಒರೆಯಲ್ಲಿಯೇ ಕೂಡ್ರ ಬೇಕೇ ?

**ಎಚ್ಚಮ**:— ಹಾಗೆಂದು ಭಾವಿಸಕೂಡದು. ಯುದ್ಧಮಾಡಿದರೆಯೇ ರಾಜನಿಷ್ಠೆಯೇನು? ಅದು ಹೃದಯದಲ್ಲಿ ಪ್ರಜ್ವಲಿಸುತ್ತಿರಲು ಯುದ್ಧವನ್ನೇ ಮಾಡ ಬೇಕೆಂಬ ನಿಯಮವಿಲ್ಲ. ಅಲ್ಲದೆ ನೀವೇನು ಬೆಂಕೆಂತಲೆ ಸುಮ್ಮನೆ ಹಿಂದುಳಿ ಯುವಿರಾ ? ರಾಜಬೀಜದ ರಕ್ಷಣೆಗಾಗಿ ಇರುವಿರಿ!

**ರಘು**:— ಆಗಲಿ, ನಿಮ್ಮ ಮಾತನ್ನಾದರೂ ಯಾಕೆ ಮೀರಬೇಕು. ನೀವು ವಿಜಯವನ್ನು ತರಲಿಕ್ಕೆ ಹೊರಡಿರಿ.

( ಎಚ್ಚಮನು ಹೊರಡುವನು )

(೧೪)

( ಮಾರ್ಗದಲ್ಲಿ—ಓಲೆಕಾರ )

**ಓಲೆ**:— ದುಷ್ಟನಾದ ಜಗ್ಗರಾಯನು ಶ್ರೀರಂಗರಾಜನನ್ನು ಕೊಂದು ಅವರ ಮಕ್ಕಳನ್ನು ಕೊಲ್ಲಬೇಕೆಂದು ಹೊರಟಾಗ ಎಚ್ಚಮನು ಆತನನ್ನು ಯುದ್ಧದಲ್ಲಿ

ಕೊಂಡನು. ರಾಮರಾಯರನ್ನು ಕರೆದುಕೊಂಡು ಬರುವಂತೆ ರಘುನಾಥರಾಯರಿಗೆ ಪತ್ರಬರೆದಿರುವನು. ಮತ್ತೆ ನಮ್ಮ ನಾಡಿನಲ್ಲಿ ಶಾಂತತೆಯುಂಟಾಯಿತು. ನಾಡಿದು ರಾಮರಾಯರ ಪಟ್ಟಾಭಿಷೇಕವಾಗುವದು. ಎಚ್ಚಮನಾಯಕನದು ಎಷ್ಟು ಭಕ್ತಿ ! ಎಷ್ಟು ಶೌರ್ಯ! ಎಷ್ಟು ಚಾತುರ್ಯ! ಕೊನೆಗೆ ತನ್ನ ಪ್ರತಿಜ್ಞೆಯನ್ನು ಕೊನೆಗಾಣಿಸಿ ರಾಜವಂಶಕ್ಕೆ ಸಿಂಹಾಸನವನ್ನೊಪ್ಪಿಸಿದನು.

(೧೫)

(ಚಂದ್ರಗಿರಿಯಲ್ಲಿ—ರಾಮರಾಜ್ಯಾಭಿಷೇಕ)

**ಎಲ್ಲರೂ:—**

ಚಂ ವೃ॥ ಜಯ ಜಯ ರಾಜ ರಾಜ ರವಿತೇಜ
ಪ್ರಜಾಮರಭೂಜ ಸದ್ಗುಣಾ— ।
ಶ್ರಯ ಜಯ ರಾಮರಾಯ ವಿಜ—
ಯಾಸನ ಭೂಷಣ ಧೀರ ವೀರ ಭೋ ॥
ಜಯತು ಜಿತಾರಿಭೂಪಗಣ
ಕನ್ನಡನಾಡಿನ ಜೀವ ದೇವ ಭೋ ॥
ಜಯ ಜಯ ಪಾಲಿಸೆಮ್ಮನು ಕೃ—
ತಾರ್ಥರು ನಾವಹುದಿಂದು ಭೂವರಾ ॥

**ಜಯಕರ್ನಾಟಕ ಸಿಂಹಾಸನಾಧೀಶ್ವರ !**
**ಜಯ ಶ್ರೀ ರಾಮರಾಜಮಹಾರಾಜ !!**

---

# ಕರ್ತವ್ಯಗಳ ತಾರತಮ್ಯ

ಅಥವಾ

## ವ್ಯಕ್ತಿಧರ್ಮವೋ ? ರಾಷ್ಟ್ರಧರ್ಮವೋ ?

ಆಂಗ್ಲ ಸಾರ್ವಭೌಮಸತ್ತೆಯನ್ನು ನೆಲೆಗೊಳಿಸುವದಕ್ಕಾಗಿ ರಾಜನೀತಿ ಕುಶಲನಾದ ಮಾರ್ಕ್ವಿಸ ವೆಲ್ಲಸ್ಲಿಯು ಒಡ್ಡಿದ ಸಹಾಯಕಸೇನಾಕ್ರಮದ (ಸಬ್ ಸಿಡಿಯರಿ ಸಿಸ್ಟಿಮಿನ) ಬಲೆಯಲ್ಲಿ ಆ ಕಾರಣದಿಂದೊಬ್ಬನು, ಈ ಕಾರಣದಿಂದಿನ್ನೊಬ್ಬನು ಹೀಗೆ ಒಬ್ಬೊಬ್ಬರಾಗಿ ದೇಶೀಯ ಅರಸರು ತೊಡಕಿಕೊಂಡು ತಮ್ಮ ಸ್ವತಂತ್ರತೆಯನ್ನು ಮಾರಿಕೊಂಡರು. ಪೇಶವೆ ಬಾಜೀರಾಯನಾದರೂ ಸ್ವಕೃತಾಪರಾಧ, ಪರಿಸ್ಥಿತಿಪ್ರತಿಕೂಲತೆ ಮೊದಲಾದ ಕಾರಣಗಳ ಮೂಲಕ ಅನನ್ಯಗತಿಕನಾಗಿ ಕ್ರಿ. ಶ. ೧೮೦೨ ನೆಯ ವರ್ಷದ ವಸಯಿಯಲ್ಲಾದ ಒಡಂಬಡಿಕೆಯಿಂದ ಆ ಬಂಧನಕ್ಕೊಳಪಟ್ಟನು.

ಆ ಮಾತಿಗೆ ಈಗ ಹದಿನಾಲ್ಕು ವರ್ಷಗಳು ಕಳೆದಿವೆ. ಪರಾಧೀನತೆಯ ತಾಪದಿಂದ ಬಾಜೀರಾಯನು ಬೆಂದುಹೋಗಿರುವನು. ಅವನಿಗೀಗ ಸ್ವಾತಂತ್ರ್ಯದ ನೀರಡಿಕೆ ಹೆಚ್ಚಾಗಿರುವದು. ಅಳುಕಿನೊಳಗಿಂದ ಎಂದು, ಹೇಗೆ ಪಾರಾದೇನೆಂಬ ನಿದಿಧ್ಯಾಸದಲ್ಲಿಯೇ ಅವನ ಹಗಲಿರುಳುಗಳು ಕಳೆಯಹತ್ತಿರುವವು. ಮಹಾರಾಷ್ಟ್ರರ ಕ್ಷಾತ್ರತೇಜವಿನ್ನೂ ಪೂರ್ಣ ಲುಪ್ತವಾಗಿಲ್ಲ; ಕೆಲಕಾಲ ಸುಪ್ತವಾಗಿದೆ; ತಕ್ಕ ಮುಂದಾಳು ದೊರೆತರೆ, ಪರಿಸ್ಥಿತಿಯು ಅನುಕೂಲವಾದರೆ, ಸ್ವಾತಂತ್ರ್ಯ ಸೂರ್ಯನಿಗೆ ಆವರಿಸಿದ ಮೇಘಪಟಲಗಳನ್ನು ಅತ್ಯಲ್ಪಕಾಲದಲ್ಲಿಯೇ ಕರಗಿಸಿ ಬಿಡುವಷ್ಟು ಪ್ರಖರತೆಯು ಅದರಲ್ಲಿರುವದು; ಎಂದು ಆತನು ನಂಬಿದ್ದನು.

ಈಚೆಗೆ, ಇಂಗ್ಲಿಷರೊಂದಿಗೆ ಯುದ್ಧಮಾಡುವ ಸಿದ್ಧತೆಯನ್ನು ಗುಪ್ತವಾಗಿ ನಡಿಸಿದ್ದನು. ತ್ರಿಂಬಕಜಿ ಡೆಂಗಳೆಗೆ ವಿಪುಲಧನವನ್ನು ಒದಗಿಸಿಕೊಟ್ಟು ಸೈನ್ಯವನ್ನು ಕಲೆಹಾಕುವದಕ್ಕೆ ನಿಯಮಿಸಿದನು. ಅಲ್ಲಲ್ಲಿ ಮರಾಠಾ ತರುಣರು ನೆರೆಯಹತ್ತಿದರು. ಅವರಿಗೆ ಆವಶ್ಯಕವಾದ ಸೈನಿಕಶಿಕ್ಷಣವು ದೊರೆಯಹತ್ತಿತು. ಪುಣೆಯ ನೆರೆಯಲ್ಲಿದ್ದ ಬ್ರಿಟಿಶ ರೆಸಿಡೆಂಟನಾದ ಎಲ್‌ಫಿನ್ನಸ್ಟನ್ನನಿಗೆ ಇದು ತಿಳಿಯಿತು. ಅವನು ಕೂಡಲೆ ಪತ್ರ ಬರೆದು ಬಾಜೀರಾಯನನ್ನು ಎಚ್ಚರಿಸಿದನು. “ತನಗಿದಾವುದೂ ಗೊತ್ತಿಲ್ಲ; ಇದು ಪೆಂಡಾರಿಗಳ ಕೃತಿಯಾಗಿರಬಹುದು. ಅವ

ರನ್ನು ದಂಡಿಸುವವಕ್ಕೆ ಇಂಥಿಂಥ ಸರದಾರರಿಗೆ ಹೀಗೆ ಹೀಗೆ ಆಜ್ಞಾಪತ್ರಗಳನ್ನು ಹೊರಡಿಸಿರುವೆನು.” ಎಂದು ಉತ್ತರ ಕೊಟ್ಟು, ತಾನು ಕಡೆಗಾಗುವ ಪ್ರಯತ್ನವನ್ನು ಅವನು ಮಾಡಿದನು. ಆದರೆ ಇದರಿಂದ ಬಾಜೀರಾಯನ ರಹಸ್ಯವು ರೆಸಿಡೆಂಟನಿಗೆ ತಿಳಿಯದೆ ಇರಲಿಲ್ಲ. ಅವನು ಹೆಚ್ಚು ಬಿಗಿಯಾದ ಕಟ್ಟುಗಳನ್ನು ಹಾಕಿ, ಬಾಜೀರಾಯನ ಅವಶಿಷ್ಟಸ್ವಾತಂತ್ರ್ಯವನ್ನು ಕೂಡ ಸಂಪುಷ್ಟದಲ್ಲಿ ಹಾಕಿಬಿಟ್ಟನು. ಇದುವರೆಗೆ ಕೂಡಿಸಿದ ಸೈನ್ಯವನ್ನೆಲ್ಲ ಮನೆಗೆ ಕಳಿಸುವ ಪ್ರಸಂಗವು ಬಾಜೀರಾಯನ ಪಾಲಿಗೆ ಬಂದಿತು.

ಆದರೆ ಆ ಸೈನಿಕರನ್ನು ಕಳಿಸುವಾಗ ಪ್ರತಿಯೊಬ್ಬ ಶಿಲೇದಾರನಿಗೆ ಬಾಜೀರಾಯನು ಏಳೇಳು ತಿಂಗಳುಗಳ ಸಂಬಳವನ್ನು ಮುಂಗಡ ಕೊಟ್ಟನು. ದಸರೆಯ ತರುವಾಯ ಸರಕಾರವು ಕರೆದಾಗ ಬರಲಿಕ್ಕೆ ಸನ್ನದ್ಧರಾಗಿರಬೇಕು. ಕರೆದಕೂಡಲೆ ನೆರೆಹೊರೆಯ ಶಿಪಾಯಿರನ್ನು ಕೂಡಿಕೊಂಡು ರಾಜಧಾನಿಗೆ ಬರಬೇಕು. ಎಂದು ಅಪ್ಪಣೆಮಾಡಿದನು.

ಸಾಂಪ್ರದಾಯದಂತೆ ಈ ವರ್ಷವೂ ಬಾಜೀರಾಯನು ಯಾತ್ರೆಗೆಂದು ರಾಜಧಾನಿಯನ್ನು ಬಿಟ್ಟನು. ಪ್ರತಿವರ್ಷದಂತೆ ಜೇಗ ಮರಳಿ ಬರಲಿಲ್ಲ. ಪಂಢರಪುರ, ಮಾಹುಲಿ ಮುಂತಾದ ಕ್ಷೇತ್ರಗಳಲ್ಲಿ ಎರಡು ಮೂರು ತಿಂಗಳುಗಳನ್ನು ಕಳೆದನು. ಈ ಅವಧಿಯಲ್ಲಿ ಆತನು ವೀರಾಗ್ರಣಿಯಾದ ಬಾಪೂ ಗೋಖಲೆಗೆ ಸರ್ವಸೈನ್ಯಾಧಿಪತ್ಯವನ್ನು ಕೊಟ್ಟು, ಇಂಗ್ಲಿಷರೊಂದಿಗೆ ಜೇಗನೆ ಯುದ್ಧವನ್ನಾರಂಭಿಸುವದಕ್ಕೆ ತಕ್ಕ ಏರ್ಪಾಡು ಮಾಡಲು ಆಜ್ಞಾಪಿಸಿದನು.

ಇತ್ತ ಇಂಗ್ಲಿಷರು ಪೆಂಡಾರಿಗಳನ್ನು ಒಕ್ಕಲಿಕ್ಕುವ ಸಿದ್ಧತೆಯನ್ನು ನಡೆಯಿಸಿದ್ದರು. ಈ ಕಾರ್ಯದಲ್ಲಿ ಅವರಿಗೆ ಬಾಜೀರಾಯನೂ ನೆರವಾಗಬೇಕೆಂದು ಗೊತ್ತಾಗಿತ್ತು.

## (೨)

ದಸರೆಯ ದಿನ ಪೇಶವೆಯ ಸೈನ್ಯದ ಮೆರೆವಣಿಗೆ ಹೊರಟಿತು. ಆದರೆ ಇಂದಿನ ವೈಭವವೂ, ಆಡಂಬರವೂ, ಉತ್ಸಾಹವೂ ಅಪೂರ್ವವಾಗಿದ್ದವು. ಬಾಜೀರಾಯನಿಂದ ಮೊದಲ್ಗೊಂಡು ಸಣ್ಣ ಶಿಲೇದಾರನ ವರೆಗೆ ಪ್ರತಿಯೊಬ್ಬನು ಉತ್ಸಾಹಾತಿರೇಕದಿಂದ ಮತ್ತನಾಗಿದ್ದನು.

ಮರುದಿವಸದಿಂದ ಸೈನ್ಯವು ಬೆಳೆಯುಹತ್ತಿತು. ಹಗಲು ರಾತ್ರಿಗಳೆನ್ನದೆ, ಮಹಾರಾಷ್ಟ್ರದ ಬೇರೆ ಬೇರೆ ಭಾಗಗಳಿಂದ ಮರಾಠಾ ರಾವುತರು ತಂಡತಂಡವಾಗಿ ಬರಹತ್ತಿದರು. ರಾಮೋಶೀ, ಭಿಲ್ಲ ಮುಂತಾದ ಕಾಟಕ ಜನರು ಹಿಂಡುಗಟ್ಟಿ ಬಂದು ರಾಜಧಾನಿಯನ್ನು ಸೇರಹತ್ತಿದರು. ನಗರದಲ್ಲಿ ನೋಡಿದತ್ತೆಲ್ಲ ಮರಾಠರ ಭಾಲೆಗಳು ಲಕಲಕಿಸಹತ್ತಿದವು. ಅವರ ಕುದುರೆಗಳು ಹೇಕರಿಸಹತ್ತಿದವು. ಪ್ರತಿಯೊಬ್ಬ ಮರಾಠನು ರಾಜಧಾನಿಗೆ ಮೂರು ಮೈಲಿನ ಮೇಲಿರುವ ಬ್ರಿಟಿಶ ರೆಸಿಡೆನ್ಸಿಯನ್ನು ವಕ್ರದೃಷ್ಟಿಯಿಂದ ನೋಡಹತ್ತಿದನು.

ತಾನು ಈಗ ಸೈನ್ಯವನ್ನು ಶೇಖರಿಸುತ್ತಿರುವದೂ, ಸಂಭಾರವನ್ನು ಸಂಗ್ರಹಿಸುತ್ತಿರುವದೂ ಪೆಂಡಾರಿಗಳ ಪಾರುಪತ್ಯಕ್ಕಾಗಿ ಹೊರಡುವ ಬ್ರಿಟಿಶ ಸೇನೆಯ ಸಹಾಯಾರ್ಥವಾಗಿಯೇ ಎಂದು ಬಾಜೀರಾಯನು ಹೇಳುತ್ತಿದ್ದನು. ಅದು ನಿಜವೆಂದು ತೋರುವಂತಿತ್ತು. ಎಲ್‌ಫಿನಸ್ಟನ್ನನಾದರೂ ಹಾಗೆಯೇ ತಿಳಿದಿದ್ದನು. ತನ್ನ ಈಗಿನ ಪರಿಸ್ಥಿತಿಯಲ್ಲಿ ಇಂಗ್ರೇಜರ ಮೇಲೆ ತಿರುಗಿಬಿದ್ದು ತನ್ನ ಸರ್ವಸ್ವವನ್ನು ಸೂರೆಗೊಳ್ಳುವ ಅವಿಚಾರವನ್ನು ಬಾಜೀರಾಯನು ಮಾಡಲಾರನೆಂದು ಅವನು ನಂಬಿದ್ದನು.

(೩)

ಆಶ್ವಿನ ಶುದ್ಧ ಪೌರ್ಣಿಮೆ. ಸಾಯಂಕಾಲ; ಹಗಲು ಹನ್ನೆರಡು ತಾಸುಗಳಲ್ಲಿಯೂ ತಾನೇ ತಾನಾಗಿ ಮೆರೆದ ದಿನಕರನ ಪ್ರಭೆಯು ಕ್ಷಣಶಃ ಕುಂದುತ್ತ ನಡೆದಿದೆ. ಕಡಿಮೆಯಾಗುತ್ತಿರುವಾ ಪ್ರಭೆಯನ್ನು ಮತ್ತೆ ದೊರಕಿಸಬೇಕೆಂಬ ಆಶೆಯಿಂದ ಆತನು ತನ್ನ ಮುಂದೆ ಬಂದ ಮೇಘಶಕಲಗಳನ್ನು ಭರದಿಂದ ಓಡಿಸಿ ಮುಖವನ್ನೆತ್ತುತ್ತಿರುವನು. ಅವನ ಅಂತರಂಗದಲ್ಲಿ ಈಗ ಕ್ರೋಧ, ಶೋಕ, ತಾಪಗಳ ತಾಕಲಾಟವು ನಡೆದಿರಲಿಕ್ಕೆ ಬೇಕು. ಅಂತೇ ಅವನ ಮುಖದಲ್ಲಿ ಈಪರಿ ಕೆಂಪಡರಿರುವದು.

ಆದರೆ ಆತನ ಈ ಪ್ರಯಾಸವು ವ್ಯರ್ಥವಾಯಿತು. ಸೂರ್ಯನು ಎಷ್ಟು ದೊಡ್ಡವನಾದರೇನು? ಎಷ್ಟು ತೇಜಸ್ವಿಯಾದರೇನು? ವಿಶ್ವದ ಅನೇಕಾನೇಕ ವಸ್ತುಜಾತದಂತೆ ಅವನೂ ನಿಯತಿಚಕ್ರದ ಗತಿಗೆ ಅಧೀನನಾದವನಲ್ಲವೆ? ಆದುದರಿಂದ ಈಗ ಆತನು ತೇಜೋಹೀನನಾದನು. ತನ್ನ ಕರಿಮೋರೆಯನ್ನು ಜಗತ್ತಿಗೆ ತೋರಿಸಲು ನಾಚಿಕೊಂಡು ಕಣ್ಮರೆಯಾದನು.

ಇಂಥ ಸಮಯದಲ್ಲಿ ಸಂಗಮದ ಕಡೆಯಿಂದ ಒಂದು ಅರಬೀ ಕುದುರೆಯು ಭರದಿಂದ ಓಡುತ್ತ ಬಂತು. ಶನಿವಾರ ವಾಡೆಯ ಬಾಗಿಲಿಗೆ ಬರುತ್ತಲೆ, ಸವಾರನು ಕಡಿವಾಣವನ್ನು ಜಗ್ಗಿ ಹಿಡಿದು ಕೆಳಗಿಳಿದನು. ಅಗಸೆಯ ಕಾವಲುಗಾರರು ಮುಂದೆ ಬಂದು ನಗೆಮೊಗದಿಂದ ಅವನ ಸ್ವಾಗತವನ್ನು ಮಾಡಿದರು.

ವಸಯಿಯ ಒಪ್ಪಂದವಾದ ಬಳಿಕ ಪುಣೆಯ ಬಳಿಯ ಮುಳಾ ಮುಠಾ ನದಿಗಳ ಸಂಗಮದ ಸ್ಥಳದಲ್ಲಿ ಬ್ರಿಟಿಶ ರೆಸಿಡೆನ್ಸಿಯು ತಳವೂರಿತು. ಅದರೊಳಗಿನ ಕ್ಯಾಪ್ಟನ್ ಫೋರ್ಡನೆಂಬವನಿಗೂ ಪೇಶವೆಯ ಸರದಾರನಾದ ಮೋರೋ ದೀಕ್ಷಿತನಿಗೂ ಗೆಳೆತನ ಕೂಡಿತು. ಇಬ್ಬರೂ ವೈಹಾಳಿಯಲ್ಲಿ ಬಲ್ಲಿದರು. ಇಬ್ಬರಿಗೂ ಬೇಟೆಯಲ್ಲಿ ಅನುರಾಗವು. ಅವರು ಪುಣೆಯ ನೆರೆಯ ಅಡವಿಗಳಲ್ಲಿ ಬೇಟೆಗಾಗಿ ಕೂಡುವರು. ಪ್ರೇಮದಿಂದ ಮಾತುಕಥೆಗಳನ್ನಾಡುವರು. ಬರಬರುತ್ತ ಅವರ ಸ್ನೇಹಭಾವವು ವೃದ್ಧಿಂಗತವಾಯಿತು. ಎರಡು ದಿನಕ್ಕೊಮ್ಮೆಯಾದರೂ ಭೆಟ್ಟಿಯಾಗದಿದ್ದರೆ ಇಬ್ಬರಿಗೂ ಸಮಾಧಾನವೆನಿಸುತ್ತಿರಲಿಲ್ಲ.

ಬಾಪೂ ಗೋಖಲೆಯು ಮೋರೋದೀಕ್ಷಿತನನ್ನು ರಾವುತರ ದಂಡಿನ ಒಂದು ವಿಭಾಗಕ್ಕೆ ಅಧಿಪತಿಯನ್ನು ಮಾಡಿದ್ದನು. ಯುದ್ಧವು ಬೇಗನೆ ಆರಂಭವಾಗತಕ್ಕದ್ದು. ಆದುದರಿಂದ ತನ್ನ ದಂಡನ್ನು ಸರಿಪಡಿಸುವದರಲ್ಲಿಯೂ, ಅದಕ್ಕೆ ಅವಶ್ಯವಾದ ಸಾಮಗ್ರಿಗಳನ್ನು ಕೂಡಿಸುವದರಲ್ಲಿಯೂ ದೀಕ್ಷಿತನು ತೊಡಗಿದ್ದನು. ಕಳೆದ ಹದಿನೈದು ದಿನಗಳಲ್ಲಿ ಫೋರ್ಡನ ಭೆಟ್ಟಿಯನ್ನು ತಕ್ಕೊಳ್ಳುವದಕ್ಕೆ ಆತನಿಗೆ ಅವಕಾಶ ದೊರೆತಿದ್ದಿಲ್ಲ. ಅದರಿಂದ ಫೋರ್ಡನು ವ್ಯಾಕುಲನಾಗಿ ಇಂದು ದೀಕ್ಷಿತನ ಬಳಿಗೆ ಸವಾರನನ್ನು ಕಳಿಸಿದ್ದನು.

ಅತಿಮಹತ್ವದ ಪ್ರಸಂಗವಿದ್ದ ಹೊರತು ತನ್ನ ಬಳಿಗೆ ಯಾರನ್ನೂ ಬಿಡಕೂಡದೆಂದು ಕಾವಲುಗಾರನಿಗೆ ದೀಕ್ಷಿತನ ಕಟ್ಟಪ್ಪಣೆಯಾಗಿತ್ತು. ಈ ಹದಿನೈದು ದಿನಗಳಲ್ಲಿ ಆದನ್ನವನು ಉಲ್ಲಂಘಿಸಿದ್ದಿಲ್ಲ. ತನ್ನ ಯಜಮಾನನೊಂದಿಗಿರುವ ಫೋರ್ಡನ ಮೈತ್ರಿಯನ್ನೂ, ಮೇಲಿಂದಮೇಲೆ ಬರುವ ಇದೇ ಸವಾರನು ಯಾವ ತಡೆಯೂ ಇಲ್ಲದೆ ತನ್ನ ಯಜಮಾನನನ್ನು ಕಾಣುವದನ್ನೂ ಅವನು ಅರಿತಿದ್ದನು. ಈಗ ಈತನನ್ನು ತಡೆದರೆ ದೀಕ್ಷಿತನು ಕೋಪಿಸುವನೆಂದು ನಂಬಿ ಆತನು ಸವಾರನನ್ನು ಒಳಗೆ ಬಿಟ್ಟನು.

ದೀಕ್ಷಿತನು ದಿವಾಣಖಾನೆಯೊಳಗಿನ ಕೆಲಸ ತೀರಿಸಿ, ಸಂಧ್ಯಾವಂದನೆಗಾಗಿ ಇನ್ನು ಒಳಗೆ ಹೋಗತಕ್ಕವನು. ಅಷ್ಟರಲ್ಲಿ ಸವಾರನು ಬಂದು, ವಿನಯದಿಂದ ಕುರ್ನಿಸಾತಮಾಡಿದನು. ದೀಕ್ಷಿತನ ಮುಖವು ಅರಳಿತು. ಅವನು ಮುಗುಳ್ನಗೆಗೂಡಿ–"ಕ್ಯಾಪ್ಟನ್ ಸಾಹೇಬರಿಗೆ ಕುಶಲವಷ್ಟೆ! ಈಗ ನನಗೆ ಅವರ ಆಜ್ಞೆಯೇನಾಗಿರುವದು?" ಎಂದು ಉತ್ಸುಕತೆಯಿಂದ ಕೇಳಿದನು. ಸವಾರನು ಲೀನತೆಯಿಂದ ಕೈಮುಗಿದು–"ಮಹಾರಾಜ, ಅವರಿಗೀಗ ಕುಶಲವು. ಆದರೆ ಕಳೆದ ಹದಿನೈದು ದಿನಗಳಲ್ಲಿ ಒಮ್ಮೆಯೂದರೂ ತಮ್ಮ ಸಮಾಗಮಸುಖವು ದೊರೆಯದಿದ್ದುದರಿಂದ ಅವರು ಉದ್ವಿಗ್ನರಾಗಿರುವರು. ನಾಳೆ ಸೂರ್ಯೋದಯದ ಸಂಧಿಗೆ ತಳೇಗಾವದ ಅಡವಿಗೆ ಬೇಟೆಗಾಗಿ ಬರುವರು. ತಾವೂ ಬರಬೇಕೆಂದು ಅವರು ಅಪೇಕ್ಷಿಸುವರು. ಇದನ್ನು ಅರುಹುವದಕ್ಕಾಗಿ ನನ್ನನ್ನೀಗ ಕಳಿಸಿರುವರು." ಎಂದನು.

ಸವಾರನಿಗೆ ಉತ್ತರವನ್ನೇನು ಕೊಡಬೇಕೆಂಬದು ದೀಕ್ಷಿತನಿಗೆ ಒಮ್ಮೆಲೆ ಹೊಳೆಯದಾಯಿತು. "ಭಾವಿಯುದ್ಧದ ಸಿದ್ಧತೆಗಾಗಿ ಪ್ರತಿಯೊಬ್ಬ ಸಿಪಾಯಿಯು ಹಗಲಿರುಳು ದುಡಿಯುತ್ತಿರುವ ಈ ಸಂಧಿಯಲ್ಲಿ ನನ್ನಂಥ ಒಬ್ಬ ಸೈನ್ಯಾಧಿಕಾರಿಯು ಕರ್ತವ್ಯವನ್ನು ತೊರೆದು, ಪುಣೆಯಿಂದ ಒಂದರಕ್ಷಣ ಕೂಡ ಅಗಲುವದು ಸರಿಯಲ್ಲ. ಸ್ವಾಮಿಸೇವೆ–ದೇಶಸೇವೆಯೇ– ನನ್ನ ಕರ್ತವ್ಯವು. ಅದನ್ನು ಏಕನಿಷ್ಠೆಯಿಂದ ನೆರವೇರಿಸಲೇ ಬೇಕು." ಎಂಬ ವಿಚಾರವು ಅವನ ಮನಸ್ಸಿನಲ್ಲಿ ಬಂದಿತು. ಉತ್ತರಕ್ಷಣದಲ್ಲಿಯೇ, "–ಆದರೆ ಹತ್ತೆಂಟು ದಿನಗಳಲ್ಲಿ ಅಭಾವಿತರೀತಿಯಿಂದಾಗುವ ಆಕ್ರಮಣದಲ್ಲಿ ರೆಸಿಡೆನ್ಸಿಯೊಳಗಿನ ಒಂದು ಪಿಳ್ಳೆಯು ಕೂಡ ಉಳಿಯುವ ಸಂಭವವಿಲ್ಲ. ಫೋರ್ಡನಂಥ ಪ್ರಿಯಮಿತ್ರನನ್ನು ಕಾಣುವದಕ್ಕೂ, ಅವನೊಡನೆ ಆನಂದದಿಂದ ಒಂದು ದಿನವನ್ನು ಕಳೆಯುವದಕ್ಕೂ ಇನ್ನುಮುಂದೆ ಸಮಯ ಸಿಕ್ಕಲಾರದು." ಎಂಬ ವಿಚಾರಲಹರಿಯೊಂದು ಅವನ ಅಂತಃಕರಣವನ್ನು ಕಲಕುಮಾಡಿತು. ಕಡೆಗೆ ಕರ್ತವ್ಯಪ್ರೇಮಕ್ಕಿಂತ ಮಿತ್ರಪ್ರೇಮವು–ರಾಷ್ಟ್ರಧರ್ಮಕ್ಕಿಂತ ವ್ಯಕ್ತಿಧರ್ಮವು–ಬಲವತ್ತರವಾಗಿ ಅವನ ವಿವೇಕಬುದ್ಧಿಯನ್ನು ಮೋಹಗೊಳಿಸಿತು. "ನಾಳೆ ಸೂರ್ಯೋದಯಕ್ಕಿಂತ ಮೊದಲೇ ತಳೇಗಾವದ ಅಡವಿಗೆ ಬಂದು, ಫೋರ್ಡ ಸಾಹೇಬರ ಬರವನ್ನು ನಿರೀಕ್ಷಿಸುತ್ತ ನಿಂತಿರುವೆನೆಂದು ಅವರಿಗೆ ತಿಳಿಸು." ಎಂದು ಹೇಳಿ, ಸವಾರನಿಗೆ ಅಪ್ಪಣೆ ಕೊಟ್ಟನು.

(೪)

ಸೂರ್ಯಾಸ್ತವಾಗಿ ಕೆಲವು ನಿಮಿಷಗಳಾಗಿವೆ. ಸಂಗಮದ ಮೇಲೆ ರೆಸಿಡೆನ್ಸಿಯ ಹಾಗು ನಗರದ ದಾರಿಗಳ ಕೂಟದಲ್ಲಿ ದೀಕ್ಷಿತನೂ ಫೋರ್ಡನೂ ಕುದುರೆಯನ್ನೇರಿ ನಿಂತಿರುವರು. ಹಗಲೆಲ್ಲ ಬೇಟೆಯಾಡಿದ ದಣುವಿನಿಂದ ಅವರ ಮುಖಗಳು ಬಾಡಿವೆ. ಆದರೆ ಪರಸ್ಪರರು ಪ್ರೇಮದಿಂದಲೂ ಸಲಿಗೆಯಿಂದಲೂ ಆಡುತ್ತಿರುವ ನುಡಿಗಳಿಂದ ಆನಂದೋರ್ಮಿಗಳು ಎದ್ದು, ಅವರ ಆ ಬಾಡಿದ ಮೊಗಗಳಲ್ಲಿಯೂ ಮೃದುಸ್ಮಿತವನ್ನುಂಟುಮಾಡುತ್ತಲಿವೆ. ಈಗ ಅವರು ತಮ್ಮ ತಮ್ಮ ಬೀಡಿಗೆ ತೆರಳತಕ್ಕವರು. ಫೋರ್ಡನು ಸರಲಭಾವದಿಂದ ಮಾತಾಡುತ್ತಿರುವನು. ಆದರೆ ದೀಕ್ಷಿತನಿಗೆ ಮನಸ್ಸಿನಲ್ಲಿ ಸಮಾಧಾನವಿಲ್ಲ. ಅಂತಃಕರಣದಿಂದ ಏಳುವ ವಿಚಾರತರಂಗಗಳನ್ನು ತಡೆಯುವದರಲ್ಲಿಯೂ, ನಾಲಗೆಯ ತುದಿಯ ವರೆಗೆ ಬರುತ್ತಿರುವ ಶಬ್ದಗಳನ್ನು ನುಂಗುವದರಲ್ಲಿಯೂ ಅವನು ಗಾಸಿಯಾಗುತ್ತಿರುವನು. ಈ ಸ್ಥಿತಿಯಲ್ಲಿ ಕೆಲವು ವೇಳೆಯನ್ನು ಕಳೆದು, ಅವರು ಪರಸ್ಪರರ ಪ್ರೇಮದ ನಿರೋಪವನ್ನು ಪಡೆದು ತಮ್ಮ ತಮ್ಮ ದಾರಿಗಳಿಂದ ಕುದುರೆಗಳನ್ನು ಬಿಟ್ಟರು.

ತುಸುಹೊತ್ತಿನಲ್ಲಿ ದೀಕ್ಷಿತನು ಕುದುರೆಯನ್ನು ತಿರುವಿ ಫೋರ್ಡನನ್ನು ಕೂಡುವ ತವಕದಿಂದ ಅದನ್ನು ಭರದಿಂದ ಬಿಟ್ಟನು. ಹಿಂಬದಿಯಲ್ಲಾಗುವ ಖುರಪುಟ ಧ್ವನಿಯನ್ನು ಕೇಳಿ, ಫೋರ್ಡನು ಹೊರಳಿನೋಡಿದನು. ದೀಕ್ಷಿತನ ಬರವನ್ನು ಕಂಡು ಅವನು ಚಕಿತನಾಗಿ ಅಲ್ಲಿಯೇ ನಿಂತುಬಿಟ್ಟನು.

ದೀಕ್ಷಿತನು ಸಮೀಪಕ್ಕೆ ಬಂದನು. ಯಾವದೋ ಒಂದು ಮಹತ್ವದ ಮಾತನ್ನಾಡುವದು ದೀಕ್ಷಿತನ ಮನಸ್ಸಿನಲ್ಲಿದೆ. ಆದರೆ ಮನಸ್ಸಿನ ದ್ವಿಧಾಭಾವವು ಅವನನ್ನು ಈ ಅವಸ್ಥೆಗೊಳಪಡಿಸಿದೆ ಎಂದು ಚತುರನಾದ ಫೋರ್ಡನಿಗೆ ತಿಳಿಯಿತು. ಅವನು ಸಲಿಗೆಯಿಂದ–"ಮಿತ್ರರೇ, ಯಾಕೆ ತಿರುಗಿದಿರಿ! ಇಂದು ನಿಮ್ಮ ಮನಸ್ಸಿನ ಹೊಯ್ದಾಟವನ್ನು ಕಂಡು ನನಗೆ ಖೇದವೆನಿಸುತ್ತದೆ. ನಮ್ಮ ನಿಮ್ಮ ಹದಿನಾಲ್ಕು ವರ್ಷಗಳ ಅಕೃತ್ರಿಮಸ್ನೇಹಭಾವವನ್ನು ಲಕ್ಷ್ಯಕ್ಕೆ ತಂದರೆ ನಿಮ್ಮ ಮನಃಸ್ಥಿತಿಯ ಕಾರಣವನ್ನು ನನಗೆ ತಿಳಿಸುವದಕ್ಕೆ ಅನುಮಾನಿಸಲಾರಿರೆಂದು ನಂಬಿರುವೆನು." ಎಂದು ದೀಕ್ಷಿತನ ಮುಖವನ್ನು ಎವೆಯಿಕ್ಕದೆ ನೋಡಹತ್ತಿದನು.

ದೀಕ್ಷಿತನು ಗದ್ಗದಸ್ವರದಿಂದ–"ಅಹುದು, ಮಿತ್ರರೇ, ನಮ್ಮಿಬ್ಬರಲ್ಲಿ ಅಂತಹ ಪ್ರೇಮವಿರುವದೇನೂ ಸುಳ್ಳಲ್ಲ. ಆದುದರಿಂದಲೇ, ಕರ್ತವ್ಯವನ್ನು ಅನುಲಕ್ಷಿಸಿ 'ಹೇಳಬಾರದು, ಹೇಳಬಾರದು.' ಎಂದು ಇದುವರೆಗೆ ಬಚ್ಚಿಟ್ಟಿದ್ದ ಸುದ್ದಿಯನ್ನು ಮಿತ್ರಕಲ್ಯಾಣಕ್ಕಾಗಿ ಹೇಳಿಯೇ ಬಿಡುವ ನಿಶ್ಚಯದಿಂದ ಈಗ ತಿರುಗಿ ಬಂದೆನು." ಎಂದನು."

"ಅಂಥ ಸುದ್ದಿ ಯಾವದು?" ಎಂದು ಫೋರ್ಡನು ಉತ್ಕಂಠೆಯಿಂದ ಕೇಳಿದನು.

"ಇನ್ನು ಏಳೆಂಟು ದಿನಗಳಲ್ಲಿ ರೆಸಿಡೆನ್ಸಿಯ ಮೇಲೆ ನಾವು ಆಕ್ರಮಣ ಮಾಡತಕ್ಕವರು."

"ಏನು? ನಿಮ್ಮ ಆಕ್ರಮಣವೇ? ನಮ್ಮ ಮೇಲೆ! ಮಿತ್ರರೇ, ಇದೇನು ವಿನೋದವನ್ನು ನಡಿಸಿರುವಿರಿ?"

"ವಿನೋದವಲ್ಲ; ಸತ್ಯಸಂಗತಿಯಿದು. ಮೈಮರೆತಿದ್ದ ನಿಮ್ಮ ಮೇಲೆ ನಾವು ಏರಿಬಂದಾಗ ಬಹುಶಃ ರೆಸಿಡೆನ್ಸಿಯೊಳಗಿನ ಯಾವ ನರಪ್ರಾಣಿಯೂ ಉಳಿಯಲಾರದು. ಆದದರಿಂದ ನಿಮ್ಮ ಜೀವದ ಮೇಲಿನ ಗಂಡಾಂತರವೇ ಇರುವದು. ತಿಳಿದೂ ತಿಳಿದೂ ನಿಮಗೆ ಸೂಚಿಸದಿದ್ದರೆ ನಾನು ಮಿತ್ರದ್ರೋಹಿಯೆನಿಸುವೆನು. ಆದುದರಿಂದಲೇ ನಿಮಗೆ ಈ ಗುಪ್ತವಾರ್ತೆಯನ್ನು ತಿಳಿಸಿರುವೆನು. ಮಿತ್ರವರ್ಯರೇ, ನೀವು ನಮ್ಮ ವಿರುದ್ಧವಾಗಿ ಶಸ್ತ್ರವನ್ನು ಹಿಡಿಯಬೇಡಿರಿ. ನಿಮ್ಮ ಹೆಂಡಿರು ಮಕ್ಕಳನ್ನು ಕಟ್ಟಿಕೊಂಡು ನನ್ನ ವಾಡೆಗೆ ಬಂದು ಬಿಡಿರಿ. ನಾನು ಪೇಶವೆಯವರಿಗೆ ಹೇಳಿಕೊಂಡು, ನಿಮ್ಮ ಕೂದಲು ಸಹ ಕೊಂಕದಂತೆ ಮಾಡುವೆನು."

ಫೋರ್ಡನ ಕಣ್ಣು ಕೆಂಪಾದವು. ತುಟಿಗಳು ನಡುಗಹತ್ತಿದವು. ಅವನ ಹುರಿಮಾಡಿದ ಮೀಸೆಯ ಕೊನೆಗಳು ಕುಣಿಯ ಹತ್ತಿದವು. ಅವನು ತಿರಸ್ಕಾರ ವ್ಯಂಜಕಧ್ವನಿಯಿಂದ ದೀಕ್ಷಿತನನ್ನು ಕುರಿತು–"ಏನು? ನನ್ನ ಹಾಗು ನನ್ನ ಹೆಂಡಿರು ಮಕ್ಕಳ ಜೀವದಾಸೆಯಿಂದ ಯುನಿಯನ್‌ಜಾಕಿನ ಆಶ್ರಯವನ್ನು ತೊರೆಯಬಹುದೇ? ದೀಕ್ಷಿತರೇ, ಬಹುಕಾಲ ನನ್ನ ಸಹವಾಸವು ಘಟಿಸಿದ್ದರೂ, ನಿಮಗೆ ನನ್ನ ಗುಣಗಳ ನಿಜವಾದ ಪರಿಚಯವಾಗದೆಯಿದ್ದುದು ಬಹುಖೇದದ ಸಂಗತಿಯು. ನಿಮ್ಮ ಈ ಸಲಹೆಯನ್ನು ನಾನು ಒಪ್ಪುವೆನೆಂದು ನೀವು ಭಾವಿಸಿದ್ದು ಚೋದ್ಯವು. ಮಿತ್ರರೇ, ನೀವು ಸೂಚಿಸಿದ ಪ್ರಸಂಗವು ನಿಜವಾಗಿಯೂ ಒದಗಿ

ದರೆ, ಈ ಫೋರ್ಡನು ಮಾತೃಭೂಮಿಯ ಅಭಿಮಾನವನ್ನು ವಹಿಸಿ, ರಾಷ್ಟ್ರ ಧ್ವಜದ ಕೆಳಗೆ ನಿಂತು, ರಣಭೂಮಿಯಲ್ಲಿ ದೇಹವನ್ನು ಅರ್ಪಿಸುವನಲ್ಲದೆ, ತನ್ನ ಕ್ಷುದ್ರದೇಹದೊಂದಿಗೆ ಆ ದೇಹಕ್ಕೆ ಸಂಬಂಧಿಸಿದ ನಚ್ಚಿನ ಹೆಂಡಿರುಮಕ್ಕಳನ್ನು ಆ ರಾಷ್ಟ್ರಮಾತೆಗಾಗಿ ಬಲಿಕೊಡುವನಲ್ಲದೆ, ಜೀವಗಳ್ಳತನದಿಂದ ವೈರಿಯ ಆಶ್ರಯನ್ನು ಬಯಸುವಂಥ ದೇಶದ್ರೋಹಿಯಾಗಲಾರನೆಂದು ಖಂಡಿತವಾಗಿ ತಿಳಿದುಕೊಳ್ಳಿರಿ. ಮಿತ್ರರೇ, ಈ ವಿಷಯದಲ್ಲಿ ನಾನು ನಿಮ್ಮ ವಿಚಾರವನ್ನು ಅನುಮೋದಿಸಲಾರೆನು. ಆದರೆ ಮಿತ್ರಕಲ್ಯಾಣಬುದ್ಧಿಯಿಂದ ಈ ಸಂಗತಿಯನ್ನು ನನಗೆ ತಿಳಿಸಿದ್ದಕ್ಕಾಗಿ ಮಾತ್ರ ನಾನು ನಿಮ್ಮ ಉಪಕಾರವನ್ನು ಬಹಳವಾಗಿ ಸ್ಮರಿಸುವೆನು.”

ಬಳಿಕ ಅವರಲ್ಲಿ ಯಾರೂ ಮಾತಾಡಲಿಲ್ಲ. ಅವರು ಕುದುರೆಗಳನ್ನು ತೀರ ಸಮೀಪಕ್ಕೆ ತಂದರು. ಕುದುರೆಯ ಮೇಲಿಂದಲೇ ಒಬ್ಬರನ್ನೊಬ್ಬರು ಗಟ್ಟಿಯಾಗಿ ಅಪ್ಪಿಕೊಂಡರು. ಮೂಕವೃತ್ತಿಯಿಂದಲೇ ತಮ್ಮ ದಾರಿ ಹಿಡಿದರು.

ಫೋರ್ಡನು ರೆಸಿಡೆನ್ಸಿಗೆ ಬಂದಬಳಿಕ ಇಂಗ್ರೇಜೀ ಸೇನೆಯಲ್ಲಿ ವಿಲಕ್ಷಣವಾದ ಗಡಿಬಿಡಿಯುಂಟಾಯಿತೆಂಬದನ್ನು ಬರೆಯುವ ಕಾರಣವೇ ಇಲ್ಲ.

(೫)

ತಾವು ಎಷ್ಟು ಗುಪ್ತವಾಗಿರಿಸಿದರೂ ಯುದ್ಧದ ಸೌರಣೆಯು ನಿಜವಾದ ಕಾರಣವು ಇಂಗ್ರೇಜರಿಗೆ ತಿಳಿಯಿತು; ಸ್ವಸಂರಕ್ಷಣೆಯ ಏರ್ಪಾಡುಗಳನ್ನು ಅವರು ನಡಿಸಿದರು; ಪುಣೆಯ ನೆರೆಯ ರೆಸಿಡೆನ್ಸಿಯನ್ನು ಬಿಟ್ಟು, ಖಡಕಿಯ ಸುರಕ್ಷಿತ ಸ್ಥಳದಲ್ಲಿ ಅವರು ತಳವೂರಿದರು; ಇನ್ನು ತಾವು ದಿನಗಳೆದರೆ, ಅವರಿಗೆ ಹೆಚ್ಚು ಅವಕಾಶ ಕೊಟ್ಟಂತಾಗುವದು; ಅದರಿಂದ ಬೇಗನೆ ಅಭಿಯೋಗಿಸತಕ್ಕದ್ದು; ಎಂದು ಗೋಖಲೆಯು ನಿರ್ಧರಿಸಿದನು.

ಮರಾಠರ ಸೇನೆಯಲ್ಲಿ ಹಲವು ಕಾಳಗಗಳಲ್ಲಿ ನುರಿತಂಥ ವೀರರು ಅನೇಕರಿದ್ದರು. ಅವರಿಗೆ ಗೋಖಲೆಯಂಥ ಕೆಚ್ಚೆದೆಯ ಕಡುಗಲಿಯು ನಾಯಕನಾಗಿದ್ದನು. ಹೀಗಾಗಿ ಅವರಲ್ಲಿ ಈಗ ಬಲವೂ, ಆ ಬಲದ ಅರಿವಿನಿಂದ ಮೊಳೆತ ಆತ್ಮವಿಶ್ವಾಸವೂ, ಆ ಆತ್ಮವಿಶ್ವಾಸದ ಸ್ಫೂರ್ತಿಯಿಂದ ಉದ್ಭವಿಸಿದ ಆವೇಶವೂ ಏಕೀಭವಿಸಿದ್ದವು. ಈ ಬಾರಿ ತಾನು ಜಯಶಾಲಿಯಾಗುವೆನೆಂದೂ, ಪಾರತಂತ್ರ್ಯಶೃಂಖಲೆಯನ್ನು ಹರಿದೊಗೆದು ಪೂರ್ವಜರ ಗೌರವವನ್ನು ಮತ್ತೆ ಸಂಪಾದಿಸುವೆನೆಂದೂ ಪೇಶವೆಯು ನಂಬಿದ್ದನು.

ನೊವ್ಹೆಂಬರದ ಅಯ್ದನೆಯ ತಾರೀಖು. ಜಗಜ್ಜೀವನನಾದ ಭಾನುವಿನ ಉದಯುಸನುಯ. ಪೇಶವೆಯುವರ ದಂಡಿನಲ್ಲಿ ರಣಭೇರಿಯು ಬಾಜಿಸಿತು. ಸೇನಾಧೀಶನ ಆಜ್ಞೆಯೂಯಿತು. ಮರಾಠಾ ರಾವುತರ ಬೇರೆ ಬೇರೆ ತಂಡಗಳು ಆಜ್ಞಾನುಸಾರವಾಗಿ ಖಡಕಿಯ ಮೇಲೆ ಸಾಗಿದವು. ಇದನ್ನೆಲ್ಲ ಮುಂದಾಗಿ ಅರಿತಿದ್ದ ವೀರ ಧೀರ ಇಂಗ್ರೇಜರಾದರೂ ಸನ್ನದ್ಧರಾಗಿಯೇ ಇದ್ದರು.

ಮಹಾರಾಷ್ಟ್ರ ಸೈನಿಕರು ತಮ್ಮ ಕಿರಿಗುದುರೆಗಳನ್ನು ಭರದಿಂದ ನೂಕಿ ದರು; ಚಪಲವಾದ ಕತ್ತಿಗಳನ್ನು ಆವೇಶದಿಂದ ಹಿರಿದರು; ಉದ್ದವಾದ ಭಾಲೆ ಗಳನ್ನು ಕಸುವಿನಿಂದ ಬೀಸಿದರು. ನಿಕರದ ಕಾಳಗವೆಸಗಿತು. ವೈರಿಗಳ ಬಲವು ಹೆಚ್ಚಿದ್ದ ಸ್ಥಳವನ್ನು ಅರಿಸಿ, ಜೀವದ ಹಂಗು ದೊರೆದು ಗೋಖಲೆಯು ತಾನೇ ಅಲ್ಲಿ ಧುಮ್ಮಿಕ್ಕಿದನು. ಅದರಿಂದ ಹುರುಪುಗೊಂಡ ಮರಾಠರು ಹರ ಹರ ಮಹಾದೇವ ಎಂದು ವೀರಗರ್ಜನೆಯನ್ನು ಮಾಡುತ್ತ ಅವನನ್ನು ಹಿಂಬಾ ಲಿಸಿದರು. ಅವರು ಉತ್ಸಾಹದಿಂದ ಅರಿಗಳನ್ನು ಹಣಿದರು.

ಇಂಥ ಆವೇಶದ ವೈರಿಗಳಿಗೆ ಇಂಗ್ರೇಜರು ಕೆಲವು ಹೊತ್ತು ಕೈಗೊಟ್ಟು ನಿಂತರು. ಬರಬರುತ್ತ ಅವರ ಕಾಲ್ಬಲದ ಉತ್ಸಾಹವು ಕುಗ್ಗಹತ್ತಿತು. ಅವರು ಮೆಲ್ಲನೆ ಹಿಂದಕ್ಕೆ ಸರಿಯಲಾರಂಭಿಸಿದರು.

ಆದರೆ ಅವರ ತೋಫಖಾನೆಯು ಇನ್ನೂ ರಭಸದಲ್ಲಿತ್ತು. ಅದರಿಂದ ಮರಾಠರ ದಂಡಿನ ನಾಶವು ಹೆಚ್ಚಾಗಹತ್ತಿತು. ವೈರಿಗಳ ತೋಫಖಾನೆ ಯೊಂದು ಗುಡುಗುಡಿಸುತ್ತಿದ್ದರೆ, ತಮ್ಮ ಶೌರ್ಯೋತ್ಸಾಹಗಳನ್ನೆಲ್ಲ ನುಂಗಿ ನೀರು ಕುಡಿಯಬಲ್ಲದೆಂಬದನ್ನೂ, ವೈರಿಗಳಿಗೆ ಜಯಶ್ರೀಯನ್ನು ದೊರಕಿಸಿ ಕೊಡಬಲ್ಲದೆಂಬದನ್ನೂ ಲಕ್ಷ್ಯಕ್ಕೆ ತಂದು, ಎಷ್ಟು ಪ್ರಾಣಹಾನಿಯಾದರೂ ಅದನ್ನು ತಕ್ಕೊಂಡೇ ತೀರಬೇಕೆಂದು ಬಾಪೂ ಗೋಖಲೆಯು ನಿರ್ಧರಿಸಿದನು.

ಕೂಡಲೆ ಅವನು ತನ್ನ ಹಸ್ತಕನಾದ ಮೋರೋ ದೀಕ್ಷಿತನನ್ನು ಕರಿಸಿ, ಪರಿಸ್ಥಿತಿಯನ್ನೆಲ್ಲ ವಿವರಿಸಿದನು. ಅಯ್ನೂರು ರಾವುತರೊಂದಿಗೆ ನೀವು ಸ್ವತಃ ಹೋಗಿ, ತೋಫಖಾನೆಯುನ್ನು ಹಸ್ತಗತಮಾಡಿಕೊಂಡರೇನೇ ನಮಗೆ ಜಯುವು. ಇಲ್ಲದಿದ್ದರೆ ನಾಶವು ನಿಶ್ಚಿತವು! ಎನ್ನಲು, ವೀರನಾದ ದೀಕ್ಷಿತನು ಆ ಕೆಲಸವು ತನಗೊಪ್ಪಿತೆಂದು ಗೋಖಲೆಯ ಅಪ್ಪಣೆಯನ್ನು ತಕ್ಕೊಂಡು ಹೊರಟನು.

(೬)

ಇಂಗ್ರೇಜರ ತೋಫುಗಳು ಭಯಂಕರವಾದ ಬೆಂಕಿಯನ್ನೇ ಕಾರುತ್ತಿದ್ದವು. ದೀಕ್ಷಿತನೂ ಅವನ ಅಯ್ನೂರು ರಾವುತರೂ ತಮ್ಮ ಕುದುರೆಗಳನ್ನು ಭರದಿಂದ ಮುಂದೆ ಹಾಕಿದರು. ಆಗಿನ ಅವರ ಸಾಹಸವು ವರ್ಣನೀಯವಾಗಿತ್ತು. ಅವರು ಬ್ರಿಟಿಶರ ತೋಫಿನ ಗುಂಡುಗಳ ಅಗ್ನಿವೃಷ್ಟಿಗಂಜದೆ, ಹಂಗುದೊರೆದು ಕಾದಿದರು. ತುಸು ಹೊತ್ತಿನಲ್ಲಿಯೇ ತೋಫಖಾನೆಯ ಸಂರಕ್ಷಕಸೇನೆಯನ್ನೆಲ್ಲ ಸದೆಬಡಿದರು. ಇಂಗ್ರೇಜೀ ಸೇನೆಯು ಕಾಲ್ದೆಗೆಯಲಾರಂಭಿಸಿತು. ದಿನ್ನೆಯ ಮೇಲಿದ್ದ ಅವರ ತೋಫಖಾನೆಗೆ ಈಗ ರಕ್ಷಕರಿಲ್ಲದಾಯಿತು. ಇದೇ ಪ್ರಸಂಗದಲ್ಲಿ ಇನ್ನೊಂದಾವರ್ತಿ ಹುರುಪಿನಿಂದ ಏರಿ ಹೋಗಿ, ತೋಫಿನ ಗೋಲಂದಾಜರನ್ನು ಸವರಿ ಬಿಟ್ಟರೆ, ಜಯಲಕ್ಷ್ಮಿಯು ತಮ್ಮನ್ನು ವರಿಸುವಳೆಂದು ಮರಾಠರು ನಂಬಿದರು. ಅವರ ಆ ನಂಬುಗೆಯು ನಿಜವೂ ಆಗಿತ್ತು.

ಉತ್ಸಾಹಭರದಿಂದ ತೋಫಖಾನೆಯ ಗೋಲಂದಾಜರನ್ನು ಅಭಿಯೋಗಿಸಲು ದೀಕ್ಷಿತನು ತನ್ನ ಸೈನಿಕರಿಗೆ ಇನ್ನು ಆಜ್ಞೆಯನ್ನು ಕೊಡತಕ್ಕವನು. ಅಷ್ಟರಲ್ಲಿ ಗೋಲಂದಾಜರ ಬಳಿಯಲ್ಲಿರುವ ಕ್ಯಾಪ್ಟನ್ ಫೋರ್ಡನನ್ನು ಕಂಡನು. ಸೈನ್ಯದ ಅಧಿಕಾರಿಯಾಗ ಆತನು ಈ ವಿಪತ್ಪ್ರಸಂಗದಲ್ಲಿ ಸಾಮಾನ್ಯಸೈನಿಕನಂತೆ ಸ್ವತಃ ತೋಳೇರಿಸಿ ತೋಫು ಹೊಡುತ್ತಿರುವದು ಅವನ ಕಣ್ಣಿಗೆ ಬಿತ್ತು. ಕರ್ತವ್ಯನಿಷ್ಠೆಯಲ್ಲಿ ಇದು ವರೆಗೆ ಮುಳುಗಿದ್ದ ದೀಕ್ಷಿತನ ಮಿತ್ರಪ್ರೇಮವೀಗ ಮತ್ತೆ ತಲೆಯೆತ್ತಿತು. ಮಿತ್ರಪ್ರಾಣವನ್ನು ಉಳಿಸಬೇಕು; ಮಿತ್ರವಧೆಯನ್ನು ಮಾಡಬಾರದು; ಎಂಬ ಮೈತ್ರಿಯ ದೃಷ್ಟಿಯಿಂದ ಸ್ತುತ್ಯವಾದ, ಆದರೆ ಕರ್ತವ್ಯದೃಷ್ಟಿಯಿಂದ ಜಘನ್ಯವಾದ—ವ್ಯಕ್ತಿಯ ದೃಷ್ಟಿಯಿಂದ ಉದಾತ್ತವಾದ, ಆದರೆ ರಾಷ್ಟ್ರಹಿತದೃಷ್ಟಿಯಿಂದ ಅಧಮಾಧಮವಾದ—ವಿಚಾರವು ಅವನಲ್ಲಿ ಪ್ರಬಲವಾಯಿತು. ಅವನು ತನ್ನ ಸೈನಿಕರನ್ನು ಸುಮ್ಮನಿರುವದಕ್ಕೆ ಆಜ್ಞಾಪಿಸಿ, ತೋಫಖಾನೆಯ ಕಡೆಗೆ ತನ್ನ ಕುದುರೆಯನ್ನು ಬಿಟ್ಟನು.

ಇನ್ನೊ ಒಮ್ಮೆ ಫೋರ್ಡನನ್ನು ಕಂಡು, ವ್ಯರ್ಥವಾಗಿ ಜೀವಕ್ಕೆರವಾಗಬೇಡವೆಂದು ತಿಳಿಹೇಳಿ, ಅವನನ್ನು ತೋಫಖಾನೆಯಿಂದ ಕಡೆಗೆಳೆಯುವ ಪ್ರಯತ್ನವನ್ನು ಮಾಡಬೇಕು. ಪ್ರತ್ಯಕ್ಷ ಯಮನ ದಾಡೆಯಲ್ಲಿ ಸಿಕ್ಕಿರುವದರಿಂದ

ಮೊನ್ನಿನ ಪೌರುಷದ ಮಾತುಗಳು ಈಗ ಆತನ ಬಾಯಿಂದ ಹೊರಡಲಿಕ್ಕಿಲ್ಲ. ನನ್ನ ಮಾತಿನಂತೆ ನಡೆಯಬಹುದು. ಎಂದು ಅವನು ನಂಬಿದನು. ತಾನು ಯುದ್ಧವನ್ನು ನಿಲ್ಲಿಸಿ, ಒಂಟಿಗನಾಗಿ ಹೊರಟಿರುವದನ್ನು ಕಂಡು, ಫೋರ್ಡನಾದರೂ ತೋಫು ಹೊಡುವದನ್ನು ಬಿಟ್ಟು, ನಗೆಮೊಗದಿಂದ ತನ್ನನ್ನು ಮಾತಾಡಿಸುವನೆಂದು ಅವನು ಭಾವಿಸಿದನು.

ಮಹಾರಾಷ್ಟ್ರ ರಾವುತರ ಸ್ತಬ್ಧತೆಯ ಹಾಗು ದೀಕ್ಷಿತನ ಬರುವಿಕೆಯ ಕಾರಣವು ಫೋರ್ಡನಿಗೆ ತಿಳಿಯದಿರಲಿಲ್ಲ. ದೀಕ್ಷಿತನ ಮಿತ್ರಪ್ರೇಮವನ್ನು ಕಂಡು, ಉದಾರನಾದ ಅವರ ಅಂತಃಕರಣವು ಉಕ್ಕಿಬಂದಿತು. ಆದರೆ ಆ ಮಿತ್ರನು ಈಗ ವ್ಯಕ್ತಿಧರ್ಮಕ್ಕೆ ಪ್ರಾಧಾನ್ಯವನ್ನು ಕೊಟ್ಟು, ರಾಷ್ಟ್ರಧರ್ಮಕ್ಕೆ ಪರಾಙ್ಮುಖನಾಗುತ್ತಿರುವದನ್ನು— ಮಿತ್ರದ್ರೋಹವನ್ನು ಮಾಡಲಾರದೆ ಅದಕ್ಕಿಂತ ಘೋರತರವಾದ ದೇಶದ್ರೋಹ ಮಾಡಲು ಸಿದ್ಧನಾದದ್ದನ್ನು—ಕಂಡು ಅವನು ಕನಿಕರಪಟ್ಟನು. ಅವನ ಹೃದಯದ ಒಂದು ಮೂಲೆಯಲ್ಲಿ ಮಿತ್ರಪ್ರೇಮವು ಮನೆಮಾಡಿಕೊಂಡಿತ್ತು. ಆದರೆ ಆ ಹೃದಯ ರಾಜ್ಯದಲ್ಲಿ ಈಗ ಸ್ವದೇಶಪ್ರೇಮವು ತನ್ನ ಅಕುಂಠಿತವಾದ ಸಾಮ್ರಾಜ್ಯಾಧಿಕಾರವನ್ನು ಸ್ಥಾಪಿಸಿತ್ತು.

" ದೀಕ್ಷಿತನು ವ್ಯಕ್ತಿಶಃ ನನ್ನ ಜೀವದ ಗೆಳೆಯನು. ಶಾಂತತೆಯ ಪ್ರಸಂಗದಲ್ಲಿ ಈತನ ಸಲುವಾಗಿ ನನ್ನ ಈ ದೇಹವನ್ನು ಕೂಡ ಬಲಿಕೊಡಬಹುದಾಗಿತ್ತು. ಆದರೆ ನಾವೀಗ ಪರಸ್ಪರರಿಗೆ ವೈರಿಗಳಾಗಿ ಕಣದಲ್ಲಿ ನಿಂತಿರುವೆವು. ಕ್ಷುದ್ರವ್ಯಕ್ತಿಧರ್ಮಪಾಲನೆಯ ಮೋಹಕ್ಕೊಳಪಟ್ಟು, ಮಹತ್ತ್ವದ್ದಾದ ರಾಷ್ಟ್ರಧರ್ಮವನ್ನು ತುಚ್ಛೀಕರಿಸಲಾರೆನು. ಆ ರಾಷ್ಟ್ರಧರ್ಮಪಾಲನೆಗಾಗಿ ವ್ಯಕ್ತಿಗತವಾದ ನನ್ನ ಮಿತ್ರಧರ್ಮವನ್ನೂ, ಆ ಮಿತ್ರಪ್ರೇಮವನ್ನೂ, ಈ ಸನ್ಮಿತ್ರನ ಪ್ರಾಣಗಳನ್ನೂ ಬಲಿಕೊಡುವದೇ ನನ್ನ ಈಗಿನ ಉಚ್ಚತಮಕರ್ತವ್ಯವು. ಇದರಿಂದ ನನ್ನ ಸೇನೆಗೆ ಜಯವು ಲಭಿಸುವದು; ನನ್ನ ಜನಾಂಗದ ಮೂಗು ಮೇಲಾಗುವದು; ನನ್ನ ರಾಷ್ಟ್ರಧ್ವಜದ—ನನ್ನ ಯುನಿಯನ್ ಜಾಕಿನ—ಪ್ರತಿಷ್ಠೆ ಬೆಳೆಯುವದು."

ಇಷ್ಟೆಲ್ಲ ವಿಚಾರಗಳು ಫೋರ್ಡನ ಮನಸ್ಸಿನಲ್ಲಿ ಕ್ಷಣಮಾತ್ರದಲ್ಲಿ ಮಿಂಚಿ ಹೋದವು. ಕೂಡಲೆ ಅವನು ಅನ್ವರ್ಥವಾದ ಗುರಿಯನ್ನಿಟ್ಟು ತೋಫಿಗೆ

ಕೊಳ್ಳಿ ಕೊಟ್ಟನು. ತೋಫು 'ಧಡಲ್' ಎಂದಿತು. ದೀಕ್ಷಿತನು ಗತಾಸು ವಾಗಿ ಸಿಡಿದುಬಿದ್ದನು.

ಯುದ್ಧದ ಸ್ಥಿತಿಯು ಪೂರ್ಣವಾಗಿ ಬದಲಿಸಿತು. ಸೇನಾಪತಿಯ ಪತನ ವನ್ನು ಕಂಡು, ಮರಾಠರ ಎದೆಯೊಡೆಯಿತು; ಬಲವು ಕುಂದಿತು; ಆವೇಶವು ಕುಗ್ಗಿತು. ಇಂಗ್ರೇಜರ ಹೊಸ ಹುರುಪಿನ ಹೊಡೆತಕ್ಕೆ ಎದೆಗೊಟ್ಟು ನಿಲ್ಲಲಾ ರದೆ ಅವರು ಹಿಮ್ಮೆಟ್ಟಹತ್ತಿದರು. ಇಂಗ್ರೇಜರ ತೋಫಖಾನೆಯು ಹೆಚ್ಚು ಆರ್ಭಟದಿಂದ ಮರಾಠರನ್ನು ಸಂಹರಿಸಿ, ದೆಸೆಗೇಡು ಮಾಡಿತು. ಜಯ ಲಕ್ಷ್ಮಿಯು ಗೋಖಲೆಯನ್ನು ವರಿಸಲಿಲ್ಲ!

*　　*　　*　　*

ಗೋಖಲೆಯು ಇದರಿಂದ ಹತಾಶನಾಗಲಿಲ್ಲ. ಚದರಿ ಹೋದ ಬಲವನ್ನು ಕೂಡಿಸಿಕೊಂಡು ಮತ್ತೆ ಕೋರೇಗಾವದಲ್ಲಿ ಕಾಳಗಕ್ಕೆ ಅಣಿಯಾದನು. ಆದರೆ ಮರಾಠರ ದುರ್ದೈವದ ಲೀಲೆಯಿಂದ ಅಲ್ಲಿಯೂ ಅವನಿಗೆ ಅಪಜಯವೇ ಆಯಿತು. ಅಷ್ಟೆಯ ಕಾಳಗದಲ್ಲಂತೂ ಆ ವೀರಾಗ್ರೇಸರನು ಕಾದುತ್ತ ಕಾದುತ್ತ ರಣ ಭೂಮಿಯಲ್ಲಿ ಬಿದ್ದನು. ಅವನೊಡನೆ ಪೇಶವೆಯ ಸ್ವಾತಂತ್ರ್ಯಸಂಪಾದನೆಯ ಆಶಾಮಂದಿರವೂ ಕುಸಿಬಿತ್ತು.

ಬಾಜೀರಾಯನು ರಾಜ್ಯವನ್ನು ಕಳಕೊಂಡು, ವಾನಪ್ರಸ್ಥಾಶ್ರಮಿಯಾಗಿ ಬ್ರಹ್ಮಾವರ್ತದಲ್ಲಿ ನಿಂತನು. ಮಹಾರಾಷ್ಟ್ರ ಸ್ವಾತಂತ್ರ್ಯಸೂರ್ಯನು ಅಸ್ತಂ ಗತನಾದನು!

*　　*　　*　　*

ಹಿಂದುಜನರ ಸ್ವಾತಂತ್ರ್ಯನಾಶದ ಅನೇಕಕಾರಣಗಳಲ್ಲಿ ಅವರ ರಾಷ್ಟ್ರ ಧರ್ಮಪರಾಙ್ಮುಖತೆಯೂ ಒಂದಾಗಿರುವದೆಂಬದು ಇತಿಹಾಸವನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸುವವರಿಗೆ ಹೊಳೆಯದಿರದು.



## ವಿಚಿತ್ರಘಟನೆ

ಒಂದು ದಿವಸ ನಾನು ಪೋಲೀಸ ಸುಪರಿಂಟೆಂಡೆಂಟರ ಸಂಗಡ ಆ ಸುದ್ದಿ ಈ ಸುದ್ದಿ ಮಾತಾಡುತ್ತ ಕುಳಿತುಕೊಂಡಿದ್ದೆನು. ಇಷ್ಟರಲ್ಲಿ ಟೆಲಿಫೋನದ ಗಂಟೆ ಬಾರಿಸಿತು. ಆಗ ಜಮಾದಾರನನ್ನು ಕರೆದು—"ಟೆಲಿಫೋನ ಯಾರದಿದೆ ? ನೋಡಿರಿ." ಎಂದು ಹೇಳಿದೆನು. ಜಮಾದಾರನು ಟೆಲಿಫೋನ ರಿಸೀವ್ಹರವನ್ನು ಕಿವಿಗೆ ಹಚ್ಚಿಕೊಂಡು ಮಾತಾಡಲಿಕ್ಕೆ ಹತ್ತಿದನು.

"ಹಲಾವ, ಕೋನ ಹೈ ?"

"ನೀವು ಯಾರಿರುವಿರಿ ?"

"ಮೈ ಜಮಾದಾರ್ ಹುಂ, ಆಪ್ ಕ್ಯಾ ಮಂಗತೇ ಹೈ ?"

"ನಾನು ಸಿ. ಆಯ್. ಡಿ. ಇನಸ್ಪೆಕ್ಟರ ರಮಾಕಾಂತನಿದ್ದೇನೆ. ನಿಮ್ಮ ಇನಸ್ಪೆಕ್ಟರ ಸಾಹೇಬರು ಇದ್ದಾರೆಯೋ ?"

"ಹೈ."

"ಹಾಗಾದರೆ ಅವರನ್ನೇ ಇಲ್ಲಿ ಮಾತಾಡಲಿಕ್ಕೆ ಕಳಿಸಿರಿ."

ಜಮಾದಾರನಿಂದ ಈ ಸಂಗತಿಯನ್ನು ತಿಳಿದ ಬಳಿಕ ಟೆಲಿಫೋನ ರಿಸೀವ್ಹರವನ್ನು ಅವನ ಕೈಯ್ಯಲ್ಲಿಂದ ತೆಗೆದುಕೊಂಡು ನಾನು ಮಾತಾಡಲಿಕ್ಕೆ ಪ್ರಾರಂಭಿಸಿದೆನು.

"ಮಿಸ್ಟರ ರಮಾಕಾಂತ, ಏನು ಕೆಲಸವಿದೆ? ಹೇಳಿರಿ. ತಾವು ಎಲ್ಲಿಂದ ಮಾತಾಡುತ್ತಿದ್ದೀರಿ ?"

"ನಾನು ಭಾಲಚಂದ ಸೆಟ್ಟಿಯ ಮನೆಯಲ್ಲಿದ್ದೇನೆ. ಸಾಹೇಬರು ಎಲ್ಲಿದ್ದಾರೆ ?"

"ಇಲ್ಲಿಯೇ ಇದ್ದಾರೆ."

"ಇದ್ದರೆ ನೀವೆಲ್ಲರು ಅಲ್ಲಿಂದ ತೀವ್ರ ಬರಬೇಕು. ಇಲ್ಲಿ ಎರಡು ಕೊಲೆಗಳು ಆಗಿರುತ್ತವೆ."

"ಏನು? ಕೊಲೆಗಳಾಗಿವೆಯೇ! ಭಾಲಚಂದಸೆಟ್ಟಿಯ ಮನೆಯಲ್ಲಿಯೇ!"

"ಹೌದು, ಭಾಲಚಂದನ ಮಗ ಮತ್ತು ಸೊಸೆ ಇವರಿಬ್ಬರ ಹೆಣಗಳು ಬಿದ್ದಿರುತ್ತವೆ. ತೀವ್ರ ಬರಬೇಕು."

ಭಾಲಚಂದ ಸೆಟ್ಟಿಯು ಪಟ್ಟಣದಲ್ಲಿ ಹೆಸರಾದ ಸಾವುಕಾರನು. ಸರಕಾರ ದರಬಾರದಲ್ಲಿ ಅವನಿಗೆ ಮಾನಮರ್ಯಾದೆ ಬಹಳ. ಅವನ ಹೆಸರನ್ನು ಕೇಳದವರು ಒಬ್ಬರೂ ಇದ್ದಿಲ್ಲ. ಅವನಿಗೆ ಲಕ್ಷ್ಮೀಕಾಂತನೆಂಬ ಒಬ್ಬನೇ ಒಬ್ಬ ಮಗನಿದ್ದನು. ಸೆಟ್ಟಿಯ ಅಪಾರ ಸಂಪತ್ತಿಗೆ ಇವನೊಬ್ಬನೇ ಬಾಧ್ಯಸ್ಥನಾಗಿದ್ದನು. ಇದೇ ವರ್ಷ ಅವನು ಬೀ. ಏ. ಪದವಿಯನ್ನು ಪಡೆದಿದ್ದನು. ಹುಡುಗನು ಒಳ್ಳೆಯ ಕುಶಾಗ್ರಬುದ್ಧಿಯುಳ್ಳವನೂ ಸದಾಚಾರಸಂಪನ್ನನೂ ಇದ್ದನು. ಅವನ ಮದುವೆಯಾಗಿ ಈಗ ತಾನೆ ಹದಿನೈದು ದಿವಸಗಳಾಗಿದ್ದವು. ಇಷ್ಟರೊಳಗೇ ಅವನ ಕೊಲೆಯಾದ ಸಂಗತಿಯನ್ನು ಕೇಳಿ ನಾನು ಬಹಳ ಆಶ್ಚರ್ಯಚಕಿತನಾದೆನು. ಆದದರಿಂದ ಮೂವರು ನಾಲ್ವರು ಪೋಲೀಸ ಜವಾನರನ್ನು ಸಂಗಡ ಕರೆದುಕೊಂಡು, ಪೋಲೀಸ ಸುಪರಿಂಟೆಂಡೆಂಟರೂ, ನಾನೂ ಮೋಟರಿನಲ್ಲಿ ಕುಳಿತು ಭಾಲಚಂದನ ಮಂದಿರದ ಕಡೆಗೆ ನಡೆದೆವು !

ಆಗ ಸೆಟ್ಟಿಯ ಮನೆಯಲ್ಲಿ ಎಲ್ಲಿ ನೋಡಿದರೂ ಹಾಹಾಕಾರವೇ ಕಂಡು ಬರುತ್ತಿತ್ತು. ಹೊರಗಿನ ಎಷ್ಟೋ ಜನರು ಅಲ್ಲಿ ಕಲೆತಿದ್ದರು. ಮನೆಯಲ್ಲಿಯು ಅಳು ಹೋಳು ಮೊದಲುಮಾಡಿಕೊಂಡು ಎಲ್ಲರೂ ರೋದಿಸುತ್ತಿದ್ದರು. ನಮ್ಮನ್ನು ನೋಡಿದ ಕೂಡಲೆ ಭಾಲಚಂದನ ಕುತ್ತಿಗೆಯ ನರಗಳು ಉಬ್ಬಿದವು; ಅಳುತ್ತ ಅವನು ಹೀಗೆಂದನು:—

"ಸಾಹೇಬರೇ, ನನ್ನ ಸರ್ವಸ್ವವೂ ನಷ್ಟವಾಯಿತು. ನನ್ನ ಮನೆತನವು ಮುಳುಗಿತು. ನನ್ನ ಕುಲದೀಪವು ಆರಿತು. ನನ್ನ ನೆನಸು ಕನಸಾಯಿತು"

ಸೆಟ್ಟಿಗೆ ಧೈರ್ಯಹೇಳಿ ಸಮಾಧಾನಬಡಿಸಿ ನಾವು ಹೆಣಗಳ ಹತ್ತರ ಹೋದೆವು. ಗುಲಾಬಿಯ ಎರಡು ಹೂವುಗಳು ಒತ್ತಟ್ಟಿಗಿದ್ದರೆ ಹೇಗೆ ಕಾಣುವವೋ, ಹಾಗೆಯೇ ಆ ತರುಣ ದಂಪತಿಗಳು ಚಂದ ಕಾಣುತ್ತಿದ್ದರು ! ಒಬ್ಬರನ್ನೊಬ್ಬರು ಅಪ್ಪಿಕೊಂಡೇ ಸತ್ತಿದ್ದರು ! ಇಬ್ಬರ ತುಟಿಗಳೂ ಕಪ್ಪಾಗಿದ್ದವು; ಕಣ್ಣುಗಳು ಪೂರ್ಣ ತೆರೆದಿದ್ದವು. ಇದನ್ನೆಲ್ಲ ನೋಡಿ ನಾನು ಸಾಹೇಬರಿಗೆ:—

"ವಿಷಪ್ರಯೋಗದಿಂದಲೇ ಇವರಿಬ್ಬರು ಸತ್ತಿರಬೇಕೆಂದು ತೋರುತ್ತದೆ." ಎಂದೆನು.

ಸಾಹೇಬರ ಸಂಗಡ ನಾನು ಮಾತನಾಡುತ್ತಿದ್ದಾಗ ಒಬ್ಬ ಜವಾನನು, ಆ ಇಬ್ಬರ ಹೆಣಗಳನ್ನು ಎತ್ತಿ ಬೇರೆ ಕಡೆಗೆ ಸರಿಸಿದನು. ಆಗ ಅವರ ಬುಡದಲ್ಲಿ ಒಂದು ಪತ್ರವು ಬಿದ್ದದ್ದು ಗೋಚರವಾಯಿತು !

ಆ ಪತ್ರವನ್ನು ಜವಾನನಿಂದ ತೆಗೆದುಕೊಂಡು— "ಇವರು ಬಹುತರ ವಾಗಿ ಆತ್ಮಹತ್ಯೆಯನ್ನು ಮಾಡಿಕೊಂಡಿರುವರೆಂಬಂತೆ ಕಾಣುವದು." ಎಂದು ಆಲೋಚಿಸುತ್ತ, ಅವನ್ನು ಬಿಚ್ಚಿ ಓದಹತ್ತಿದೆನು.

ಅದರಲ್ಲಿ ಮೊದಲಿಗೇ ಹೀಗೆ ಬರೆದಿತ್ತು.

"ನಾವು ಸ್ವತಃ ಆತ್ಮಹತ್ಯೆಯನ್ನು ಮಾಡಿಕೊಂಡಿದ್ದೇವೆ. ನಮ್ಮ ಹತ್ಯೆಗೆ ನಾವೇ ಸಂಪೂರ್ಣ ಹೊಣೆಗಾರರು; ಇದಕ್ಕೆ ಉಳಿದವರಾರೂ ಕಾರಣ ವಲ್ಲ! ನಾನು ನನ್ನ ಚರಿತ್ರೆಯನ್ನು ನಮ್ಮ ಸಮಾಜಕ್ಕೆ ತಿಳಿಸಲು ಬಯಸು ತ್ತೇನೆ. ವಿಶೇಷವಾಗಿ ಯುವಕಯುವತಿಯರು ಈ ಆತ್ಮಚರಿತ್ರೆಯನ್ನು ಓದ ಬೇಕೆಂದು ನನ್ನ ಇಚ್ಛೆಯಿದೆ. ಇದಕ್ಕೂ ಹೆಚ್ಚಿನ ಪ್ರಸ್ತಾವವು ಅನಾವಶ್ಯಕವು. ಎಲ್ಲರಿಗೂ ಸವಿನಯ ನಮಸ್ಕಾರ.

ತಮ್ಮ

**ಲಕ್ಷ್ಮೀಕಾಂತ.**"

ಲಕ್ಷ್ಮೀಕಾಂತನ ಇಚ್ಛೆಯಂತೆ ಅವನ ಆತ್ಮವೃತ್ತವನ್ನು ವಾಚಕಮಹಾ ಶಯರ ಅವಗಾಹನೆಗಾಗಿ ಇದ್ದಕ್ಕಿದ್ದಂತೆಯೇ ಇವರಡಿಯಲ್ಲಿ ಕೊಡುತ್ತೇನೆ.

---

# ಆತ್ಮಚರಿತ್ರೆ

## ಪೂರ್ವಾರ್ಧ

### (೧)

ನನ್ನ ದುರ್ದೈವದ ಚರಿತ್ರೆಯನ್ನು ಬರೆಯಬೇಕೆಂದು ಮೊದಲಿನಿಂದಲೂ ನಾನು ಇಚ್ಛಿಸಿದ್ದಿಲ್ಲ. ಆದರೂ ನನ್ನ ಹತ್ಯೆಯು ಸಲುವಾಗಿ ಸುಮ್ಮಸುಮ್ಮನೆ ಸುಳ್ಳು ಸಂಶಯದಿಂದ ಯಾವನೊಬ್ಬ ನಿರಾಪರಾಧಿಯು ಸಂಕಟದಲ್ಲಿ ಬೀಳುವ ಪ್ರಸಂಗವು ಬರಬಾರದು; ಮತ್ತು ನನ್ನ ಚರಿತ್ರೆಯಿಂದ ಸಮಾಜವು ಏನಾ ದರೂ ಕಲಿಯುವಂತಿದ್ದರೆ ಕಲಿಯಬೇಕು. ಈ ಎರಡು ಉದ್ದೇಶಗಳಿಂದ ಇದ್ದ ಹಿಂದೆರಡು ಮಾತುಗಳನ್ನು ಇಲ್ಲಿ ಬರೆದಿದ್ದೇನೆ.

ನಾನು ಹತ್ತು ವರುಷದವನಾದ ಕೂಡಲೆ ನನ್ನನ್ನು ಇಂಗ್ಲಿಷ ಸಾಲೆಗೆ ಹಾಕಿದರು. ಆ ಸಾಲೆಯಲ್ಲಿದ್ದಾಗ ನಾನು ಒಂದು ಇಂಗ್ಲಿಷ ಪುಸ್ತಕವನ್ನು ಓದುತ್ತಿದ್ದೆನು. ಈಗ ಆ ಪುಸ್ತಕದ ಹೆಸರು ನನ್ನ ಜ್ಞಾಪಕದಲ್ಲಿಲ್ಲ. ಅದರಲ್ಲಿ ಒಬ್ಬ ಹಿಂದೂ ಲೇಖಕನು "ನಮ್ಮ ಹಿಂದುಸ್ಥಾನದ ಅಧಃಪಾತ" ಎಂಬ ವಿಷಯುವನ್ನು ಬರೆದಿದ್ದನು. ಬಾಲವಿವಾಹ ಮತ್ತು ವಿಷಮವಿವಾಹಗಳನ್ನು ಕುರಿತು ಬಹಳೇ ಉತ್ತಮವಿಚಾರಗಳು ಅದರಲ್ಲಿದ್ದವು. ಆ ಪುಸ್ತಕವನ್ನು ಓದಿದಂದಿನಿಂದ "ಪೂರ್ಣ ಯೋಗ್ಯತೆಯು ಬಂದ ಹೊರತು ಮತ್ತು ಮದುವೆಯೆಂದರೇನು? ಏಕೆ ಮದುವೆಯಾಗಬೇಕು? ಎಂಬ ತಿಳವಳಿಕೆಯುಂಟಾದ ಹೊರತು ಗಂಡಸಾಗಲಿ ಹೆಂಗಸಾಗಲಿ ಎಂದೂ ಮದುವೆಯನ್ನು ಮಾಡಿಕೊಳ್ಳಬಾರದು." ಎಂಬದು ನನ್ನ ಅಭಿಪ್ರಾಯವಾಗಿತ್ತು. ಅದರಂತೆಯೇ ನಾನಾದರೂ ಎಲ್ಲ ಬಗೆಯಿಂದ ತಕ್ಕವನಾದ ಹೊರತು ವಿವಾಹಿತನಾಗಬಾರದೆಂದೇ ನಿಶ್ಚಯಿಸಿದೆನು. ಆದರೆ ಅಂಧಸಮಾಜವು ನನ್ನ ನಿಶ್ಚಯವನ್ನು ಕೆಡಿಸಲು ಪ್ರಯತ್ನಮಾಡಹತ್ತಿತು. ಹಲವರು ನನ್ನ ತಂದೆಯ ಬಳಿಗೆ ಬಂದು :—

"ಏನು ? ಶ್ರೇಷ್ಠಿಯವರೇ, ನೀವು ದೊಡ್ಡ ಲಕ್ಷಾಧೀಶರು. ನಿಮ್ಮ ಹುಡುಗನು ಇಪ್ಪತ್ತು ವರ್ಷದವನಾದರೂ ಅವಿವಾಹಿತನೇ ? ಸ್ವತಃ ನಿಮ್ಮ ಲಗ್ನವು ನಿಮ್ಮ ಹತ್ತನೆಯ ವರ್ಷಕ್ಕೆ ಆಗಿತ್ತೆಂಬುದು ಜ್ಞಾಪಕದಲ್ಲಿರುವದೋ ? ಛೇ, ಛೇ, ನಿಮ್ಮಂಥ ದೊಡ್ಡ ಜನರಿಗೆ ಇದು ಸ್ವಲ್ಪವೂ ಶೋಭಿಸುವದಿಲ್ಲ. ಈಗಿನ ದಿವಸದಲ್ಲಿ ಹುಡುಗರ ಮದುವೆಯನ್ನು ಎಷ್ಟು ತೀವ್ರ ಮಾಡುವಿರೋ ಅಷ್ಟು ವಿಹಿತ ! ಇಲ್ಲದಿದ್ದರೆ ಸಮಾಜದ ದ್ರೋಹಮಾಡಿದಂತಾಗುವದು." ಎಂದು ಮುಂತಾಗಿ ನುಡಿಯಹತ್ತಿದರು.

ಈ ಬಗೆಯ ಮಾತುಕಥೆಗಳಿಂದ ಮುಂದೆ ಮುಂದೆ ಒಂದು ವಿಧದ ಒತ್ತಾಯಕ್ಕೂ ಮೊದಲಾಯಿತು ! ಹುಡುಗೆಯ ಕಕ್ಕನೂ, ಸೋದರಮಾವನೂ ಇವರೇ ಮೊದಲಾದವರು ನನ್ನ ಮದುವೆಯ ಸಲುವಾಗಿ ಮಾತನಾಡಲು ಬರುಹೋಗುವದೂ ನಡೆಯಿತು. ಕೊಡುತೆಗೆದುಕೊಳ್ಳುವ ಮಾತುಗಳ ಪ್ರಸ್ತಾವವೂ ನಡೆಯಿತು. ಆದರೆ ಎಮ್. ಏ. ಪರೀಕ್ಷೆಯಲ್ಲಿ ಉತ್ತೀರ್ಣನಾದ ಹೊರತು ನಾನು ಮದುವೆಯನ್ನು ಖಂಡಿತವಾಗಿಯೂ ಮಾಡಿಕೊಳ್ಳುವದಿಲ್ಲೆಂದು ನನ್ನ ನಿಶ್ಚಯವನ್ನು ತಂದೆಯವರಿಗೆ ತಿಳಿಸಿದೆನು. ಹೇಗೆ ಹೇಗೆ ನಾನು ನನ್ನ ನಿಶ್ಚಯುವನ್ನು ಹೇಳುತ್ತಿದ್ದೆನೋ, ಹಾಗೆ ಹಾಗೆ ನನ್ನ ಮೇಲೆ ಸಿಟ್ಟಿಗೇಳಹತ್ತಿದರು. ಮತ್ತು ನನ್ನ ಮಾತು ಎಂದಿಗೂ ನಡೆಯಲಾರದೆಂದೂ ಹೇಳಿದರು.

ಮೊದಮೊದಲು ನನ್ನ ತಾಯಿಯೂ ನನ್ನ ತಂದೆಯ ಪಕ್ಷವನ್ನೇ ಹಿಡಿದಿದ್ದಳು. ಆದರೆ ನಾನು ಬಹಳೇ ಶ್ರಮಪಟ್ಟು ಆಕೆಯ ಮನವನ್ನು ನನ್ನ ಕಡೆಗೆ ಎಳೆದುಕೊಂಡೆನು. ಆದದರಿಂದ ತಾಯಿಯು ನನ್ನ ಪಕ್ಷವನ್ನು ಪ್ರತಿಪಾದಿಸಿ ತಂದೆಯನ್ನು ಸಮಾಧಾನಬಡಿಸಿದಳು. ನಾನು ತಾಯಿಗೆ ಅಂಜಿಕೆ ಹಾಕಿದ್ದೇನಂದರೆ:—“ನೀವು ಒಂದು ವೇಳೆ ನನ್ನ ಲಗ್ನವನ್ನು ಬಲಾತ್ಕಾರದಿಂದ ಮಾಡಿದರೆ, ಸ್ವಾಮೀ ರಾಮತೀರ್ಥರ ಹಾಗೆ ಮನೆಬಿಟ್ಟು ಹೋಗಿ ಸನ್ಯಾಸಿಯಾಗುವೆನು.” ಆದದರಿಂದ ನನ್ನ ತಾಯಿಯು ನನ್ನ ಇಚ್ಛೆಯಂತೆ ಲಗ್ನಮಾಡುವದನ್ನು ಮುಂದೆ ಹಾಕಿಸಿ “ನೀನು ಎಲ್ಲಿಯೂ ಓಡಿ ಹೋಗಕೂಡದು.” ಎಂದು ತನ್ನ ಕುತ್ತಿಗೆ ಮುಟ್ಟಿಸಿ ನನ್ನ ಕಡೆಯಿಂದ ಆಣೆಯನ್ನು ಮಾಡಿಸಿಕೊಂಡಳು. ಮತ್ತು ನನ್ನ ತಂದೆಯನ್ನು ಸುಮ್ಮನೆ ಕೂಡ್ರಿಸಿದಳು.

ಹೀಗೆ ಲಗ್ನದ ಗಡಬಿಡಿಯು ಶಾಂತವಾಗಿ ನನ್ನ ಅಭ್ಯಾಸವು ಮೊದಲಿನಂತೆ ಪ್ರಾರಂಭವಾಯಿತು. ನನ್ನ ಹಿರಿಯರು ಲಗ್ನದ ಸಂಬಂಧವಾಗಿ ಮೌನವನ್ನು ಧರಿಸಿದರೂ, ಆ ಹುಡುಗೆಯ ಪಾಲಕರ ಗಡಬಿಡಿಯು ಮಾತ್ರ ಕಡಿಮೆಯಾಗಿದ್ದಿಲ್ಲ. ವಾರದಲ್ಲಿ ನಾಲ್ಕೈದು ಬಾರಿ ಬಂದು ಹೋಗುತ್ತಿದ್ದರು. ಆದರೆ ನನ್ನ ತಾಯಿಯು, ನನ್ನ ನಿಶ್ಚಯವನ್ನು ಮತ್ತೆ ನನ್ನ ತಂದೆಗೆ ತಿಳಿಸಿದ್ದರಿಂದ, ಅವನು ಲಗ್ನದ ಸಂಬಂಧವಾಗಿ ಚಕಾರ ಶಬ್ದವನ್ನಾದರೂ ಮಾತಾಡುತ್ತಿದ್ದಿಲ್ಲ.

(೨)

ಒಂದು ದಿವಸ ಕಾಲೇಜದಿಂದ ಹೊರಟು ಕ್ರಿಕೆಟ್ ಆಡಲಿಕ್ಕೆ ಹೋಗುತ್ತಿದ್ದೆನು. ಆಗ ಮುಂಜಾಸಂಜೆಯ ಸಮಯವಾಗಿತ್ತು. ನನಗೆ ಹಸಿವೆಯು ಬಹಳವಾದದ್ದರಿಂದ ಕಾಲಗಾಡಿಯ ಮೇಲೆ ಕುಳಿತುಕೊಂಡು ಮನೆಗೆ ಹೋಗಲು ಹೊರಟೆನು. ತೀವ್ರವಾಗಿ ಮನೆಗೆ ಹೋಗಬೇಕೆಂದು ಕಾಲಗಾಡಿಯನ್ನು ಒತ್ತರದಿಂದ ಹೊಡೆಯ ಹತ್ತಿದೆನು. ಆ ಭರದಲ್ಲಿ ನನ್ನ ಜೋಲಿ ಹೋಯಿತು; ಮುಂದೆ ಬರುವ ಮೋಟರಕ್ಕೆ ನನ್ನ ಕಾಲಗಾಡಿಯು ಬಡಿಯಿತು; ನಾನು ನೆಲದ ಮೇಲೆ ಮೂರ್ಛಿತನಾಗಿ ಬಿದ್ದೆನು!

ಸ್ವಲ್ಪ ಹೊತ್ತಿನ ಮೇಲೆ ಎಚ್ಚರಾಗಿ ಕಣ್ತೆರೆದು ನೋಡಿದೆನು. ನಾನು ನನ್ನ ಕಾಲೇಜದ ಓದುವ ಮನೆಯಲ್ಲಿದ್ದೆನು! ನನ್ನ ಸಹಾಧ್ಯಾಯಿಯು ನನ್ನ ಹತ್ತರ ಕುಳಿತದ್ದನ್ನು ನಾನು ಕಂಡೆನು. ಅಲ್ಲಿಯೇ ಒಬ್ಬ ತರುಣಿಯೂ ನನ್ನ ದೃಷ್ಟಿಗೆ ಬಿದ್ದಳು. ಮೊದಲು ನಾನು ಎಂದೂ ಆ ನವತರುಣಿಯನ್ನು ನೋಡಿದ್ದಿಲ್ಲ. ಅವಳು ಅತ್ಯಂತ ಸುಂದರಿಯು. ತನ್ನ ಪ್ರೇಮಪೂರ್ಣವಾದ ಮತ್ತು

ಕೋಮಲವಾದ ನೋಟದಿಂದ ಪರರನ್ನು ತಟಸ್ಥರನ್ನಾಗಿ ಮಾಡಿ ಬಿಡುತ್ತಿದ್ದಳು! ನಾನಾದರೋ ತರುಣಿಯ ನೋಟಕ್ಕೆ ಮೋಹಿತನಾಗುವಂಥ ತರುಣನಾಗಿದ್ದಿಲ್ಲ. ನಾನು ಕಣ್ದೆರೆಯುವಷ್ಟರಲ್ಲಿಯೇ ಅವಳು ನನ್ನ ಕಡೆಗೆ ಆಶ್ಚರ್ಯದಿಂದ ನೋಡುತ್ತ ಮಧುರಸ್ವರದಿಂದ—

" ಈಗ ತಮಗೆ ವಿರಾಮವೆನಿಸುತ್ತದೆಯೋ ? ಖಂಡಿತವಾಗಿಯೂ ತಾವು ಪರಮೇಶ್ವರನ ಕೃಪೆಯಿಂದಲೇ ಆ ಗಂಡಾಂತರದಿಂದ ಪಾರಾದಿರಿ. ದೊಡ್ಡ ಅನಿಷ್ಟಪ್ರಸಂಗವೇ ಒದಗಿಬಂದಿತ್ತು ! "

" ಆದರೆ ತಾವು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದು ; ಅಪರಾಧವು ನನ್ನದಾಗಿದೆ. ಮೈಮೇಲೆ ಎಚ್ಚರಿಕೆ ಇಲ್ಲದೆ ಕಾಲಗಾಡಿಯನ್ನು ಬಿಟ್ಟಿದ್ದೆನು, ಆ ಮೋಟರವು ತಮ್ಮದೇ ? "

ನನ್ನ ಪ್ರಶ್ನೆಯನ್ನು ಕೇಳಿ ಅವಳು ಲಜ್ಜಾಯುಕ್ತಳಾಗಿ ಹೀಗೆಂದಳು.

" ನನ್ನ ಮೋಟರಿನಿಂದಲೇ ಈ ಹೊತ್ತು ತಾವು ಇಂಥ ಕಷ್ಟಕ್ಕೆ ಗುರಿಯಾದಿರಿ. ಖಂಡಿತವಾಗಿ ನಾನು ನನ್ನ—"

" ಛೇ, ಛೇ, " ನಾನು ನಡುವೆ ಬಾಯಿ ಹಾಕಿ ಮಾತಾಡಿದೆನು. " ಇದರಲ್ಲಿ ಎಲ್ಲ ತಪ್ಪು ನನ್ನದಾಗಿದೆ. !"

" ತಮಗೆ ಈಗ ಗುಣವೆನಿಸುತ್ತಿದ್ದರೆ ನಾನು ತಮ್ಮನ್ನು ಮನೆಗೆ ಮುಟ್ಟಿಸುವೆನು. ನನ್ನ ಮೋಟರವು ಹೊರಗೆ ನಿಂತಿದೆ. "

" ಬೇಡ ಬೇಡ. ಈಗ ನನಗೆ ಚೆನ್ನಾಗಿ ಗುಣವಾಗಿದೆ. ನನ್ನ ಸಲುವಾಗಿ ತಮಗೆ ತೊಂದರೆ ಕೊಡುವದು ನನ್ನ ಮನಸ್ಸಿಗೆ ಬರುವದಿಲ್ಲ. ಸ್ವಲ್ಪ ವೇಳೆಯಲ್ಲಿಯೇ ನಾನು ಮನೆಗೆ ಹೋಗುತ್ತೇನೆ. "

ಆ ತರುಣಿಯು ಬಹಳ ಆಗ್ರಹ ಮಾಡಿದಳು. ಆದುದರಿಂದ ನಿರುಪಾಯನಾಗಿ ನಾನು ಅವಳ ಮೋಟರಿನಲ್ಲಿ ಹೋಗಿ ಕುಳಿತುಕೊಂಡೆನು. ಅವಳು ನನ್ನ ಪಕ್ಕದಲ್ಲಿಯೇ ಕುಳಿತುಕೊಂಡಳು. ನನ್ನ ಮನೆ ಎಲ್ಲಿದೆಯೆಂದು ಕೇಳಿದಳು. ಡ್ರಾಯವ್ಹರನಿಗೆ ನನ್ನ ಮನೆಯ ಗುರುತನ್ನು ಹೇಳಿದೆನು. ಅವನು ಮೋಟರನ್ನು ನನ್ನ ಮನೆಯ ಕಡೆಗೆ ಒತ್ತರದಿಂದ ನಡೆಯಿಸಿದನು. ನಾನು ದೀನಭಾವದಿಂದ ಆ ತರುಣಿಯನ್ನು ಉದ್ದೇಶಿಸಿ:—

ತಮ್ಮ ಉಪಕಾರವು ನನ್ನ ಮೇಲೆ ಬಹಳವಾಯಿತು. ದಯಮಾಡಿ ತಮ್ಮ ಹೆಸರನ್ನು ನನಗೆ ತಿಳಿಸುವಿರಾ ? "

“ ಎಂಥ ಉಪಕಾರವು ! ನಾನೇನು ನಿಮಗೆ ಅಂಥ ಉಪಕಾರವನ್ನು ಮಾಡಿರುವೆನು ? ಸ್ವಾರ್ಥಕ್ಕೋಸ್ಕರವೇ ನನ್ನ ಈ ಉಪಕಾರವೆಂದು ತಿಳಿಯಿರಿ. ಒಂದು ವೇಳೆ ತಮ್ಮ ಜೀವಕ್ಕೆ ಏನಾದರೂ ಅಪಾಯವಾಗಿದ್ದರೆ, ನಾನು ಪೋಲೀಸ ಚಾವಡಿಯನ್ನು ಕಾಣಬೇಕಾಗುತ್ತಿತ್ತು. ದೇವರು ಅಂಥ ಪ್ರಸಂಗ ವನ್ನು ನನ್ನ ಮೇಲೆಯೂ ತಮ್ಮ ಮೇಲೆಯೂ ತರಗೊಡಲಿಲ್ಲ ! ”

“ ತಮ್ಮ ಬಿಡಾರವೆಲ್ಲಿ ? ”

“ ನಾನು ಕ್ಷೇಮಚಂದ ಸಾವುಕಾರನ ಮಗಳು. ನನ್ನ ಹೆಸರು ರತ್ನ ಮಯಿ. ”

“ ಹೋದ ವರ್ಷ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಮೊದಲನೆಯ ಸ್ಥಾನವನ್ನು ಪಡೆದವರು ತಾವೇ ಏನು ? ” ಎಂದು ತರುಣಿಯ ಮುಖಮಂಡಲದ ಕಡೆಗೆ ನೋಡುತ್ತ ಕೌತುಕದಿಂದ ಕೇಳಿದೆನು. ಆದರೆ ಆ ತರುಣಿಯು ಯಾವ ಉತ್ತರ ವನ್ನೂ ನನ್ನ ಪ್ರಶ್ನೆಗೆ ಕೊಡಲಿಲ್ಲ. ಇಷ್ಟರಲ್ಲಿ ಮೋಟರು ನಮ್ಮ ಮನೆಯ ಹತ್ತರ ನಿಂತಿತು. ನಾನು ಮೋಟರದ ಬಾಗಿಲವನ್ನು ತೆರೆದು ಕೆಳಗಿಳಿದು ಹೀಗೆಂದೆನು :—

“ ನನ್ನ ಸಲುವಾಗಿ ಇಂದು ತಮಗೆ ಬಹಳ ತೊಂದರೆಯಾಯಿತು. ಆದದರಿಂದ ದಯಮಾಡಿ ನನ್ನನ್ನು ಕ್ಷಮಿಸಬೇಕೆಂದು ಬೇಡುತ್ತೇನೆ. ”

“ ಏನೋ ! ಇದೆಷ್ಟು ಹೊಗಳಿಕೆಯು ? ಆದರೆ ತಾವು ನಮ್ಮ ಮನೆಯ ಕಡೆಗೆ ಎಂದು ಬರುವಿರಿ ? ”

“ ತಾವೆಂದು ಬರಹೇಳುವಿರೋ ಅಂದು. ”

“ ನಾಳೆ ಮುಂಜಾವಿನಲ್ಲಿ ಬರಬೇಕು. ಅಂದರೆ ನಾನು ಮೋಟರನ್ನು ಕಳಿಸುತ್ತೇನೆ. ”

“ ಯಾಕಾಗಲೊಲ್ಲದು. ”

ರತ್ನಮಯಿಯು ಸ್ವಲ್ಪ ಸ್ಮಿತಭಾವದಿಂದ ನೋಡುತ್ತ ನೋಡುತ್ತ ಹೊರಟುಹೋದಳು.

( ೩ )

ಕ್ಷೇಮಚಂದನು ನನ್ನ ತಂದೆಯಹಾಗೆ ಒಬ್ಬ ಲಕ್ಷಾಧೀಶನಾಗಿದ್ದನು. ಅನಾಥವಾದ ಒಂದು ಶೂದ್ರಕುಟುಂಬಕ್ಕೆ ಆಶ್ರಯಕೊಟ್ಟು ಅವರ ಕಡೆಯಿಂದ ನೀರು ತೆಗೆದುಕೊಂಡದ್ದರಿಂದ ಅವನಿಗೆ ಸಮಾಜವು ಬಹಿಷ್ಕಾರವನ್ನು ಹಾಕಿತ್ತು. ನಮ್ಮ ಜ್ಞಾತಿಯವರು ಅವರ ಸಂಗಡ ಅನ್ನ ನೀರು ಮೊದಲಾದ ಯಾವ ವ್ಯವ

ಹಾರವನ್ನೂ ಮಾಡುತ್ತಿದ್ದಿಲ್ಲ. ನಮ್ಮ ಶಿಷ್ಟ ಜನರು ಕೆಳಗಿನ ಜ್ಞಾತಿಯವರಿಂದ ನೀರು ತೆಗೆದುಕೊಂಡರೆ ಪಂಚ ಮಹಾಪಾತಕಗಳಿಂದಲೂ ಹೆಚ್ಚಿನ ಪಾಪವೆಂದು ತಿಳಿಯುತ್ತಾರೆ. ಅಹಾ ಏನು ಇವರ ಬುದ್ಧಿ ! ಏನು ಇವರ ಚಾತುರ್ಯ ! ಏನು ಇವರ ಕುಟಿಲಸ್ವಾರ್ಥನೀತಿ ! ಆದದರಿಂದಲೇ ನಮ್ಮ ಧರ್ಮದ ಮೇಲೆ ಪರಧರ್ಮದವರ ಆಘಾತಗಳು ಮೇಲಿಂದ ಮೇಲೆ ಬಡಿಯುತ್ತಲಿವೆ. ನಾವು ಹಿಂದುಗಳು. ನಾವು ಒಂದೇ ದೇವರ ಮಕ್ಕಳಲ್ಲವೇ ? ಒಂದೇ ಭೂಮಿಯಲ್ಲಿ ಹುಟ್ಟಿಲ್ಲವೇ ? ಒಬ್ಬ ದೇವರಿಂದ ಸಂರಕ್ಷಿಸಲ್ಪಡುತ್ತಿಲ್ಲವೇ ? ಇಷ್ಟಿದ್ದು ಆ ಜನರಕೂಡ ವ್ಯವಹಾರಮಾಡಿದರೆ ಪಾಪವೇ ? ಇರಲಿ.

ಸಣ್ಣ ಹುಡುಗನಿದ್ದಾಗಿಂದಲೂ ನನ್ನ ಮನಸ್ಸಿನಲ್ಲಿ ಹಿಂದುಳಿದವರ ವಿಷಯಕ್ಕೆ ಕನಿಕರವು ಬಹಳ. ಒಂದು ವೇಳೆ ಸಮಾಜವು ನನ್ನನ್ನು ಬಹಿಷ್ಕರಿಸಿದರೂ, ನನ್ನ ತಾಯಿತಂದೆಗಳು ಒಂದು ಕವಡಿಯನ್ನು ಕೂಡ ಕೊಡದೆ ಮನೆಬಿಟ್ಟು ಹೊರಗೆ ಅಟ್ಟಿದರೂ ಬಾಧಕವಿಲ್ಲ; ಆದರೆ ಹಿಂದುಳಿದವರನ್ನು ಉನ್ನತಿಗೆ ತರಲು ಯತ್ನಿಸಬೇಕೆಂದು ನಾನು ನಿಶ್ಚಯಿಸಿದ್ದೆನು.

ಮೊದಲೇ ಗೊತ್ತಾದಂತೆ ಮರುದಿವಸ ಮುಂಜಾವಿನಲ್ಲಿ, ಆ ತರುಣಿಯು ಕಳಿಸಿದ ಮೋಟರಿನಲ್ಲಿ ಕುಳಿತು ಅವಳ ಮನೆಗೆ ಹೋದೆನು. ಅವಳು ನನಗೆ ಅತ್ಯಂತಾದರಪೂರ್ವಕವಾಗಿ ಸ್ವಾಗತವನ್ನು ಮಾಡಿದಳು. ಅಲ್ಲಿಂದ ಚಹಾ ಫಲಾಹಾರವನ್ನು ತೀರಿಸಿಕೊಂಡು, ನಾವು ಮೋಟರಿನಲ್ಲಿ ಕುಳಿತುಕೊಂಡು ತಿರುಗಾಡಲಿಕ್ಕೆ ಹೊರಟೆವು. ನಮ್ಮ ಈ ಕ್ರಮವು ಹಾಗೆಯೇ ಸಾಗಿತು. ವಾರದಲ್ಲಿ ಮೂರು ನಾಲ್ಕು ಸಾರೆ ಆ ತರುಣಿಯ ಮನೆಗೆ ಹೋಗಿ ಬರುತ್ತಿದ್ದೆನು. ನನ್ನ ಮತ್ತು ಅವಳ ಪ್ರೇಮವು ಬೆಳೆಯಲಿಕ್ಕೆ ಹತ್ತಿತು. ಬರಬರುತ್ತ ಅದು ಧೃಡತಮವಾಯಿತು. ನಾವು ಬರಬರುತ್ತ ದಿವಸದಲ್ಲಿ ಒಂದು ಕ್ಷಣ ಸಹ ಅಗಲಿ ಇರುತ್ತಿದ್ದಿಲ್ಲ. ನನ್ನ ಗೃಹಿಣಿಯಾಗಲು ಈ ತರುಣಿಯು ತಕ್ಕವಳಿರುವಳೆಂದು ನನಗೆ ಮನವರಿಕೆಯಾಯಿತು. ಒಬ್ಬರೊಬ್ಬರನ್ನು ನೋಡಿದ ಕೂಡಲೆ ನಮ್ಮ ಅಂತಃಕರಣಗಳು ತುಂಬಿ ಬರುತ್ತಿದ್ದವು. ಬಹಳ ಹೇಳುವದೇನು ? ನಮ್ಮ ಅಂತಃಕರಣಗಳು ಪ್ರೇಮವೆಂಬ ಪಾಶದಿಂದ ಬಿಗಿಯಲ್ಪಟ್ಟವು. ನಾವು ಪ್ರೇಮಸರೋವರದಲ್ಲಿ ಈಸಾಡಹತ್ತಿದೆವು. ಒಂದು ದಿವಸ ನಾನು ನನ್ನ ಮನೋಗತವನ್ನು ತಾಯಿಗೆ ತಿಳಿಸಿದೆನು. ಅದನ್ನು ಅವಳು ಕೇಳಿ ಆಶ್ಚರ್ಯದಿಂದ—

" ಅವ್ವಯ್ಯಾ ಕಲಿಯುಗವು ! ಕಲಿಯುಗವು ! ಇಂಗ್ರೇಜಿ ಸಾಲೆಗೆ ಹಾಕಿದ ಪರಿಣಾಮವು ! ತಂದೆ ತಾಯಿಗಳು ಇನ್ನೂ ಜೀವದಿಂದಿರಲು, ಹುಡುಗೆಯನ್ನು ತಾನೇ ಆರಿಸಿಕೊಂಡು ಮದುವೆಯಾಗಲಿಕ್ಕೆ ನಿಂತ ಕಾಲವೇಲೆ ಸಿದ್ಧನಾಗಿದ್ದಾನೆ. ಲಕ್ಷ್ಮೀಕಾಂತಾ, ನಿನ್ನ ಬುದ್ಧಿಯನ್ನು ಎಲ್ಲಿಟ್ಟಿರುವಿ ? ಇಷ್ಟು ದಿವಸ ಕಲಿತದ್ದರ ಪರಿಣಾಮವು ಇವೇ ಏನು ? ತಾಯಿತಂದೆಗಳೆಂದರೆ ಕಾಲಕಸವೆಂದು ತಿಳಿದಿರುವಿಯೋ ? "

" ಅವ್ವಾ, ನಾನು ಈಗ ತಾಯಿತಂದೆಗಳಿಗೆ ಯಾವ ಅಮರ್ಯಾದೆಯನ್ನು ಮಾಡಿದ್ದೇನೆ ? ಮದುವೆಯೆಂದರೆ ಜನ್ಮದ ಸುಖ-ದುಃಖದ ಸಂಬಂಧವು. ಪತಿಪತ್ನಿಯರ ಪ್ರೇಮವು ಇದ್ದರೆಯೇ, ಈ ಸಂಸಾರರೂಪದ ಹಡಗವು ನಿರ್ವಿಘ್ನದಿಂದ ಸಾಗುತ್ತದೆ. ಬರೇ ಹಿರಿಯರ ಅಜ್ಞೆಯೆಂದು ಸಿಕ್ಕ ಕನ್ಯೆಯ ಕೂಡ ಲಗ್ನವಾಗಿ ನನ್ನ ಜನ್ಮವನ್ನು ಕೆಡಿಸಿಕೊಳ್ಳಲಾರೆ. ಲಗ್ನದ ಮೊದಲೇ ಎಲ್ಲವನ್ನೂ ವಿಚಾರಿಸಬೇಕಾಗುವದು."

" ಲಕ್ಷ್ಮೀಕಾಂತ, ನಾವು ನಿನಗೆ ನಿಶ್ಚಯಿಸಿದ ಹುಡುಗೆಯಲ್ಲಿ ಯಾವ ಕುಂದನ್ನು ತೆಗೆಯುವಿ ? ಹುಡುಗೆಯು ಗೌರಿಯ ಹಾಗೆ ಇದ್ದಾಳೆ. ಮತ್ತು ದೊಡ್ಡ ಶ್ರೀಮಂತರ ಮನೆಯ ಕನ್ಯೆ!"

" ಅವ್ವಾ, ಯಾವ ಹುಡುಗೆಯನ್ನು ನನ್ನ ಗೃಹಿಣಿಯೆಂದೂ, ಯೋಗ್ಯಳೆಂದೂ, ತಿಳಿದಿರುವೆನೋ, ಆ ಹುಡುಗೆಯನ್ನು ನಾನು ಮದುವೆಯಾಗುವೆನು. ನನ್ನ ಹೃದಯಸ್ವಾಮಿನಿಯಾಗಲು ಅವಳೇ ತಕ್ಕವಳು. ಅನ್ಯಸ್ತ್ರೀಗೆ ಈ ಹೃದಯದ ಒಡತಿಯಾಗಲು ಅಧಿಕಾರವಿಲ್ಲ. ನಾನು ಯಾವಳನ್ನು ಲಗ್ನವಾಗಬೇಕೆಂದಿರುವೆನೊ, ಅವಳಿಗೆ ವಚನಕೊಟ್ಟು ಬದ್ಧನಾಗಿರುವೆನು."

" ಲಕ್ಷ್ಮೀಕಾಂತ, ತಾಯಿಯ ಸಂಗಡ ಹೀಗೆ ಮಾತನ್ನಾಡಲು ನಾಚಿಕೆಯಾದರೂ ಬರುವದಿಲ್ಲವೇ ನಿನಗೆ ? ಯಾವ ಮಡ್ಡಮ್ಮಳನ್ನು ನೀನು ಮದುವೆಯಾಗಬೇಕೆಂದು ಮಾಡಿರುವಿ ? "

" ಅವ್ವಾ, ಕ್ಷೇಮಚಂದನ ಮಗಳಾದ ರತ್ನಮಯಿಯನ್ನು !"

ನನ್ನ ವಾಕ್ಯವು ಇನ್ನೂ ಮುಗಿದಿದ್ದಿಲ್ಲ; ಅಷ್ಟರಲ್ಲಿಯೇ ನನ್ನ ತಂದೆಯು ಅಲ್ಲಿಗೆ ಬಂದನು. ಅವನು ಮರೆಗೆ ನಿಂತು ನಮ್ಮ ಎಲ್ಲ ಮಾತುಗಳನ್ನು ಕೇಳಿದ್ದನು. ಅವನು ಧಾವಿಸಿ ಬಂದು ಸಿಂಹನಂತೆ ಗರ್ಜಿಸಿ ಅಂದನೇನೆಂದರೆ " ಶತ್ರೋ, ನೀನೊಬ್ಬನಲ್ಲದೆ, ನಮ್ಮನ್ನೂ ಜಾತಿಭ್ರಷ್ಟರನ್ನಾಗಿ ಮಾಡುವಿಯಾ ? ಕ್ಷೇಮಚಂದನು ಜಾತಿಭ್ರಷ್ಟನಾಗಿದ್ದಾನೆ. ಆ ಹುಡುಗೆಯ ಕೂಡ ಎಂದಿಗೂ ನಿನ್ನ ಮದುವೆಯನ್ನು ಮಾಡಗೊಡಲಿಕ್ಕಿಲ್ಲ! ನಾನು ಯಾವ ಹುಡುಗೆಯನ್ನು ನಿಶ್ಚಯಿಸಿರುವೆನೊ, ಆ ಹುಡುಗೆಯನ್ನೇ ನಿನಗೆ ಮದುವೆಮಾಡುವದು ನಿಶ್ಚಯ!"

## ಉತ್ತರಾರ್ಧ

### (೧)

ಚೈತ್ರ ಪೌರ್ಣಿಮೆಯ ರಾತ್ರಿ. ಆಕಾಶದಲ್ಲಿ ರಜನೀಕಾಂತನು ಪೂರ್ಣ ಕಾಂತಿಯಿಂದ ಕ್ರೀಡೆಮಾಡುತ್ತಿದ್ದನು. ಹೆಣ್ಣು ಪಕ್ಷಿಗಳು ತಮ್ಮ ಪತಿಗಳ ಸಂಗಡ ಸರಸ-ಸಲ್ಲಾಪಗಳನ್ನಾಡುತ್ತಿದ್ದವು. ಕ್ಷೇಮಚಂದನ ಉದ್ಯಾನದಲ್ಲಿ ಸುಂದರವಾದ ಗುಲಾಬಿ, ಮಲ್ಲಿಗೆ, ಸಂಪಿಗೆ ಮೊದಲಾದವುಗಳ ಮೊಗ್ಗೆಗಳು, ಪ್ರಸನ್ನಮುಖದಿಂದ ಚಂದ್ರನಿಗೆ ಸ್ವಾಗತಮಾಡುತ್ತಿದ್ದವು. ಸುಗಂಧದಿಂದ ಕೂಡಿದ ಮಂದಮಾರುತನು ಉದ್ಯಾನದ ತುಂಬ ಪಸರಿಸಿದ್ದನು. ಇಂಥ ವೇಳೆಯಲ್ಲಿ ರತ್ನಮಯಿಯು ಒಂದು ಕಾರಂಜಿಯ ಮೇಲೆ ಕುಳಿತು ನೀರಾಟವಾಡುತ್ತಿದ್ದಳು. ಇಷ್ಟರಲ್ಲಿ ನಾನು:—"ರತ್ನಮಯೀ!" ಎಂದು ಅವಳ ಬೆನ್ನ ಚಪ್ಪರಿಸಿದೆನು. ಕೂಡಲೆ ಅವಳು ನನ್ನ ಕಡೆಗೆ ತಿರುಗಿ ನೋಡಿ ತನ್ನ ಮಧುರ ಕಂಠದಿಂದ—

" ಪ್ರಾಣಕಾಂತ ! "

" ಪ್ರಿಯೇ, ನಾನು ಬಹಳೇ ಹತಾಶನಾಗಿದ್ದೇನೆ. ಮುಂದೇನು ಮಾಡಬೇಕೆಂಬುದು ನನಗೆ ಸ್ವಲ್ಪವೂ ತೋಚದಾಗಿದೆ! "

" ತಾವು ಇಂಥ ಸಂಕಟಕ್ಕೇಕೆ ಈಡಾದಿರಿ ? ಆನಂದದಿಂದ ಲಗ್ನವಾಗಿರಿ ! "

" ಲಗ್ನವಾಗಿ ಏನ ಮಾಡಲಿ ? ಯಾರ ಸಂಗಡ ಎಂತು ಲಗ್ನವಾಗಲಿ ? ರತ್ನಮಯೀ, ನನ್ನ ತಂದೆಯು ನಿಶ್ಚಯಮಾಡಿದ ಹುಡುಗೆಯ ಕೂಡ ನಾನು ಲಗ್ನವಾದರೆ, ಅವಳಿಗೂ ನನಗೂ ಎಂದಾದರೂ ಸುಖವಾಗಬಹುದೋ ? ಬಂಧನದಿಂದ ಮದುವೆಯಾದ ಪತಿ-ಪತ್ನಿಯರ ಪ್ರೇಮವು ಎಂದಾದರೂ ಕೂಡುವದೇ? ಛೇ, ಎಂದಿಗೂ ಇಲ್ಲ. ರತ್ನಮಯೀ, ಈ ಹೃದಯಕ್ಕೆ ನಿನ್ನ ಹೊರತು ಮತ್ತೊಬ್ಬರು ಯಾರೂ ಒಡೆಯರಾಗರು ಕಂಡೆಯಾ ? "

" ಲಕ್ಷ್ಮೀಕಾಂತ, ನನ್ನ ದೆಸೆಯಿಂದ ತಾವೇಕೆ ಇಷ್ಟು ದುಃಖ ಸೋಸುವಿರಿ ? ಕೆಳಗಿನ ಜ್ಞಾತಿಯವರ ಹಿತದ ಸಲುವಾಗಿಯೇ ನಮ್ಮನ್ನು ಸಮಾಜವು ಬಹಿಷ್ಕರಿಸಿರುವದೆಂಬುದನ್ನು ಚೆನ್ನಾಗಿ ನೆನಪಿನಲ್ಲಿಡಿರಿ. ಲಕ್ಷ್ಮೀಕಾಂತ, ನಾನು ತಮಗೆ ಕೈಜೋಡಿಸಿ ಬೇಡಿಕೊಳ್ಳುವೆನು. ತಮ್ಮ ತಾಯಿತಂದೆಗಳು ತಮ್ಮ ಮದುವೆಗಾಗಿ ಯಾವ ಹುಡುಗೆಯನ್ನಾರಿಸಿದ್ದಾರೆಯೋ ಆ ಹುಡುಗೆಯ ಕೂಡ

ಲಗ್ನವಾಗಿ ಸುಖದಿಂದಿರಬೇಕು. ತಾವು ನನ್ನ ಚಿಂತೆಯನ್ನು ತುಸುವೂ ಮಾಡ ಬೇಡಿರಿ."

"ನಾನು ಲಗ್ನವಾದ ಮೇಲೆ ನೀನೇನ ಮಾಡುವಿ ?"

"ಮತ್ತೇನ ಮಾಡುವದು ? ಮುಂದಿನ ಜನ್ಮಕ್ಕಾದರೂ ತಮ್ಮ ಚರಣ ಸೇವೆಯು ಸಿಗಲೆಂದು, ಅಶ್ರುಗಳಿಂದ ಪರಮೇಶ್ವರನ ಪಾದಗಳಿಗೆ ಅಭಿಷೇಕ ಮಾಡುತ್ತ, ಪ್ರಾರ್ಥನೆಯಲ್ಲಿಯೇ ನಿರತಳಾಗಿ, ಜನ್ಮನೀಗುವ ವರೆಗೆ ಬ್ರಹ್ಮಚ ರ್ಯದಿಂದಲೇ ಇರುತ್ತೇನೆ ! ನನ್ನ ತಂದೆಯು ನನ್ನ ಈ ನಿಶ್ಚಯಕ್ಕೆ ಎಂದಿಗೂ ಅಡ್ಡಬರಲಿಕ್ಕಿಲ್ಲವೆಂದು ನಂಬಿಗೆಯಿದೆ. ದುರ್ದೈವದಿಂದ ಏನಾದರೂ ನನಗೆ ಅನಿಷ್ಟಪ್ರಸಂಗವು ಒದಗಿದರೆ ಆತ್ಮಹತ್ಯೆ ಮಾಡಿಕೊಂಡು, ಕೌಮಾರಾವಸ್ಥೆಯ ಲ್ಲಿಯೇ ಇಹಲೋಕಯಾತ್ರೆಯನ್ನು ಮುಗಿಸುವೆನು !"

"ವಲ್ಲಭೇ !"

"ಪ್ರಾಣಕಾಂತ !"

"ನನ್ನ ಪ್ರೇಮದ ಖಣಿಯೇ, ನಾನು ಲಗ್ನವಾಗಿ ಸುಖದಿಂದಿರುವೆನು ! ಆದರೆ ನೀನು—"

"ಪ್ರಾಣೇಶ್ವರಾ, ತಮ್ಮ ಸುಖವೇ ನನ್ನ ಸುಖವು ! ತಾವು ಆತ್ಯಾನಂದ ದಿಂದ ಲಗ್ನವಾಗಿರಿ. ಮಾತೃಋಣದ ಮುಂದೆ ಯಾವ ಋಣವೂ ಇಲ್ಲ. ಆ ಋಣವು ಬಹಳ ಹೆಚ್ಚಿನದು ! ಅಮೌಲ್ಯವಾದದ್ದು ! ಮಾತೃಋಣಕ್ಕಿಂತಲೂ ತರುಣಿಯ ಪ್ರೇಮವು ತೀರ ಕಡಿಮೆಯ ತರದ್ದು. ತಾವು ತಮ್ಮ ತಾಯಿಯವರ ಆಜ್ಞೆಯನ್ನು ಪಾಲಿಸಿ ಅವರನ್ನು ಪ್ರಸನ್ನಚಿತ್ತರನ್ನಾಗಿ ಮಾಡಿರಿ. ಅದರಲ್ಲಿಯೇ ನಿಜವಾದ ಆನಂದ ! ಅದರಲ್ಲಿಯೇ ನಿಜವಾದ ಸೌಖ್ಯ ! ಅದರಲ್ಲಿಯೇ ನಿಜವಾದ ಪುಣ್ಯ !"

"ಪ್ರಾಣಾಧಿಕೇ !"

"ಪ್ರಾಣಕಾಂತ !"

"ನಡೆ. ನಾವು ಎಲ್ಲಿಯಾದರೂ ಹೊರಟು ಹೋಗುವ. ಕೆಲವು ದಿವಸಗಳವರೆಗೆ ನಮಗೆ ಕಷ್ಟ ಭೋಗಿಸಬೇಕಾಗುವದು. ಆದರೆ ಹಿಂದುಗಡೆಗೆ ಪರಮೇಶ್ವರನ ಅನುಗ್ರಹದಿಂದ ಎಲ್ಲವೂ ಒಳಿತಾಗಬಹುದು !"

"ಬೇಡ. ಲಕ್ಷ್ಮೀಕಾಂತ, ಬೇಡ. ನಾವು ಹೀಗೆ ಹೋದರೆ ಸಮಾಜವು ಏನೆನ್ನುವದು ? ತಮ್ಮ ಮುಪ್ಪಿನ ತಾಯಿತಂದೆಗಳಿಗೆ ಎಷ್ಟು ದುಃಖವಾಗುವದು

ಓಡಿಯೂದರೂ ಎಲ್ಲಿ ಹೋಗುವಿರಿ ? ಛೆ! ಇದು ತರವಲ್ಲ! ನಿಮ್ಮ ಕರ್ತವ್ಯ ವನ್ನು ಪಾಲಿಸಿರಿ. ಧ್ರುವರಾಜನ ಉದಾಹರಣೆಯನ್ನು ಕಣ್ಣ ಮುಂದಿಟ್ಟುಕೊಳ್ಳಿರಿ. ಮಾತೃಕರ್ತವ್ಯಕ್ಕೆ ಜಾಗೃತರಾಗಿರಿ. ಓರ್ವ ಯಃಕಶ್ಚಿತ ತರುಣಿಯು ಸಲುವಾಗಿ ಕರ್ತವ್ಯಪರಾಙ್ಮುಖರಾಗಬೇಡಿರಿ. ಲಕ್ಷ್ಮೀಕಾಂತ, ತಾವು ಲಗ್ನ ವಾಗಿರಿ! ”

“ ನನ್ನ ಹೃದಯದ ಜೀವನವೇ, ನನ್ನ ಚಿತ್ತವು ಬಹಳ ಭ್ರಮಿಷ್ಟವಾಗಿದೆ. ನಿನ್ನ ಮಧುರಕಂಠದಿಂದ ಒಂದು ಇಂಪಾದ ಗಾಯನವನ್ನು ಈ ಪಾಮರನ ಕಿವಿಯಲ್ಲಿ ಹಾಕು. ”

ನನ್ನ ಹೃದಯದೇವತೆಯು ತನ್ನ ಮಧುರಗಾಯನವನ್ನು ಪ್ರಾರಂಭಿಸಿದಳು. ನಮ್ಮ ಪರಸ್ಪರರ ಆತ್ಮಗಳು ಆ ಮಧುರಗಾಯನದಲ್ಲಿ ಮಿಲಿತವಾದವು. ಅಶ್ರುಗಳ ಪ್ರವಾಹದಲ್ಲಿ ಆ ರಾತ್ರಿಯು ಕಳೆಯಿತು !

( ೨ )

ನನ್ನ ಮದುವೆಯಾಯಿತು. ನನ್ನ ಲಗ್ನವಾಗಿ ಹದಿನೈದು ದಿವಸಗಳಾದವು. ಆದರೆ ಈ ಹದಿನೈದು ದಿವಸಗಳಲ್ಲಿ ರತ್ನಮಯಿಯ ದರ್ಶನ ತೆಗೆದುಕೊಳ್ಳುವ ಧೈರ್ಯವು ನನಗೆ ಆಗಲಿಲ್ಲ. ಆದರೂ ಹೇಗೋ ಧೈರ್ಯಮಾಡಿ ರತ್ನಮಯಿಯ ಭೆಟ್ಟಿಗೆ ಹೋದೆನು.

“ ರತ್ನಮಯೀ !–”

“ ವಲ್ಲಭಾ, ಏನಪ್ಪಣೆ ? ”

“ ರತ್ನಮಯೀ, ಈ ಹೊತ್ತು ನನ್ನ ಸೌಭಾಗ್ಯದ ರಾತ್ರಿಯು. ನನ್ನ ಸ್ತ್ರೀಯೂ ನಾನೂ ಇಂದು ಸಂಯೋಗಹೊಂದತಕ್ಕವರು ! ಆದುದರಿಂದ ನಾನು ನಿನ್ನ ನಿರೋಪವನ್ನು ತೆಗೆದುಕೊಳ್ಳಲು ಬಂದಿರುವೆನು. ಇದೇ ಕೊನೆಯ ಅಪ್ಪಣೆ ! “

“ ಅದೇಕೆ ಕೊನೆಯ ಅಪ್ಪಣೆ ?”

“ ರತ್ನಮಯೀ, ನಾನು ಈಗ ಪರಪತಿಯಾಗಿದ್ದೇನೆ. ಪ್ರಾಣಕಾಂತ ಎಂದು.........”

“ ಆದರೆ ನಾನು ಇನ್ನೂ ಯಾರನ್ನೂ ಲಗ್ನವಾಗಿಲ್ಲ ! ಮತ್ತು ಮುಂದಾದರೂ ಯಾರನ್ನೂ ಆಜನ್ಮ ಲಗ್ನಮಾಡಿಕೊಳ್ಳುವದಿಲ್ಲ. ಎಂದ ಮೇಲೆ ನಾನು ಪರಸ್ತ್ರೀಯು ಹೇಗಾದೆನು ? ”

" ಪ್ರಿಯಕರನೇ, ಮುಂದೆ ನನ್ನ ನಿನ್ನ ಭೆಟ್ಟಿಯಾಗುವದಿಲ್ಲ ! ಆದದರಿಂದ ನನಗೆ ಕಡೆಯ ಆನಂದದ ನಿರೋಪವನ್ನು ಕೊಡು. ನನ್ನ ಸಲುವಾಗಿ ದುಃಖಬಡಬೇಡ ! "

ಇಷ್ಟು ಮಾತನಾಡಿ ನನ್ನ ಹೃದಯದೇವತೆಯನ್ನು ಮೊದಲನೆಯ ಮತ್ತು ಕಡೆಯ ಸಾರೆ ಆಲಿಂಗಿಸಿದೆನು! ನಾವು ಪರಸ್ಪರವಾಗಿ ಒಬ್ಬರ ಹೆಗಲಮೇಲೊಬ್ಬರು ತಲೆಯನ್ನಿಟ್ಟು ಅಶ್ರುಗಳನ್ನು ಸುರಿಸಿದೆವು ! ನಾನು ನನ್ನ ದೇವತೆಯ ಕಡೆಯ ದರ್ಶನತೆಗೆದುಕೊಂಡು ಆಗಲೇ ತಿರುಗಿದೆನು !

( ೩ )

ರಾತ್ರಿಯ ಊಟವಾಯಿತು; ಕಯ್ಯಲ್ಲಿ ಒಂದು ವಿಷದ ಕುಪ್ಪಿಯನ್ನು ತೆಗೆದುಕೊಂಡು ಮಲಗುವ ಕೋಣೆಗೆ ಬಂದೆನು, ನೋಡುತ್ತೇನೆ! ನನ್ನ ಭಾರ್ಯೆಯು ಮಂಚದಮೇಲೆ ಬಿದ್ದು, ಬಿಕ್ಕಿ ಬಿಕ್ಕಿ ಕಣ್ಣೀರಸುರಿಸುತ್ತಿದ್ದಳು! ನನ್ನನ್ನು ನೋಡಿದ ಕೂಡಲೇ ಎದ್ದು ಸ್ವಾಗತಮಾಡಿದಳು. ಮತ್ತು ಕೂಡಲೇ!—

" ನಾನು ತಮ್ಮ ನಿಜವಾದ ಪತ್ನಿಯಲ್ಲ! "

"ಯಾಕೆ? ನೋಡು. ನಾನು ನಿನ್ನ ನಿಜವಾದ ಪತಿಯಿದ್ದೇನೆ! ಓಹೋ, ನಿನಗೆ ನನ್ನ ರಹಸ್ಯವು ತಿಳಿದಹಾಗೆ ತೋರುತ್ತದೆ!"

" ಹಾಗೇನಿಲ್ಲ. ನನಗೆ ತಮ್ಮ ರಹಸ್ಯವಾವುದೂ ಗೊತ್ತಿಲ್ಲ. ಆದರೆ ನನ್ನದೇ ಒಂದು ದೊಡ್ಡ ರಹಸ್ಯವಿದೆ. ನನ್ನನ್ನು ತಮಗೆ ಬಲುಮೆಯಿಂದಲೇ ಪತ್ನಿಯನ್ನಾಗಿ ಮಾಡಿದ್ದಾರೆ! "

" ಅದು ಹೇಗೆ? ನಾನು ಮಾತ್ರ ಸ್ವತಃ ನಿನ್ನ ಕೂಡ ಲಗ್ನವಾಗಿದ್ದೇನೆ. ನೀನು ನನ್ನ ಗೃಹಿಣಿಯಾಗಿರುವಿ! "

" ಸಮಾಜದ ಮತ್ತು ನಿಮ್ಮ ದೃಷ್ಟಿಯಿಂದ ನಾನು ತಮ್ಮ ಗೃಹಿಣಿಯಿರಬಹುದು. ಆದರೆ ತಮ್ಮ ಸಂಗಡ ಕಪಟಾಚರಣೆಮಾಡಿ ಭ್ರಷ್ಟಳಾಗುವದಕ್ಕೆ ನನ್ನ ಇಚ್ಛೆಯಿಲ್ಲ. ನಾನು ಶುದ್ಧಳೆಂದಾದರೂ ತಿಳಿಯಿರಿ. ಚಾಂಡಾಲಿಗೆ ಸಮಾನಳೆಂದಾದರೂ ತಿಳಿಯಿರಿ. ನನ್ನ ತಾಯಿತಂದೆಗಳು ಬಲುಮೆಯಿಂದ ನನ್ನನ್ನು ಪರಪುರುಷನ ಸ್ವಾಧೀನಮಾಡಿದ್ದಾರೆ! "

" ಎಲ್ಲವನ್ನೂ ವಿವರವಾಗಿ ಹೇಳು."

ಅವಳು ಹೇಳಹತ್ತಿದಳು.

“ನನ್ನ ತಂದೆಯು ಒಬ್ಬ ಧನಾಢ್ಯವ್ಯಾಪಾರಸ್ಥನಿದ್ದಾನೆ. ಇದು ತಮಗೆ ಗೊತ್ತೇ ಇದೆ. ಅವನು ಒಬ್ಬ ಅನಾಥಬಾಲಕನನ್ನು ಪಾಲನೆಮಾಡಿದ್ದನು. ಅವನೂ ನಾನೂ ಸಣ್ಣವರಿದ್ದಾಗಿನಿಂದ ಕೂಡಿಯೇ ಇದ್ದೆವು. ಒತ್ತಟ್ಟಿಗೆ ಕಲಿಯುತ್ತಿದ್ದೆವು. ಹೇಗೆ ಹೇಗೆ ನಾವು ಯೌವನಾವಸ್ಥರಾಗಹತ್ತಿದೆವೋ ಹಾಗೆ ಹಾಗೆ ನಮ್ಮ ಸ್ನೇಹವು ಪ್ರೇಮವಾಯಿತು. ನಾವು ಅರೆಗಳಿಗೆಯಾದರೂ ಒಬ್ಬರನ್ನೊಬ್ಬರು ಬಿಟ್ಟು ಇರುತ್ತಿದ್ದಿಲ್ಲ! ನಾವು ಪ್ರೇಮವೆಂಬ ಪಾಶದಿಂದ ಪರಸ್ಪರ ಬಿಗಿಯಲ್ಪಟ್ಟಿದ್ದೆವು!

“ನನ್ನ ತಂದೆಗೆ ಇದೆಲ್ಲ ತಿಳಿಯಿತು. ನಮ್ಮ ನಡತೆ-ನಡಾವಳಿಗಳ ಕಡೆಗೆ ಪೂರ್ಣವಾಗಿ ಕಣ್ಣಿಟ್ಟನು. ಮೂರು ನಾಲ್ಕುಸಾರೆ ಏಕಾಂತದಲ್ಲಿ ಆ ಹುಡುಗ ನನ್ನು ಕರೆಸಿ ಸಿಟ್ಟುಮಾಡಿದನು. ಆ ಹುಡಗನಿಗೆ ಸಿಟ್ಟುಮಾಡಿದ್ದು ನನಗೆ ಯಾವಾಗ ತಿಳಿಯಿತೋ, ಆಗ ಅಳುತ್ತ ಅಳುತ್ತ ನನ್ನ ಎಲ್ಲ ಮನೋಗತವನ್ನು ತಾಯಿಗೆ ತಿಳಿಸಿದೆನು. ತಾಯಿಗೂ ಕರುಣೆಬಂದು, ಅವಳು ನನ್ನ ತಂದೆಯು ಮನವೊಲಿಸಲು ಪ್ರಯತ್ನಮಾಡಿದಳು. ಆದರೆ ಅದರಿಂದ ಏನೂ ಉಪಯೋಗ ವಾಗಲಿಲ್ಲ. ಕಟ್ಟಕಡೆಗೆ.........”

ಇಷ್ಟು ಹೇಳಿ ಅವಳು ರೋದಿಸಹತ್ತಿದಳು. ನಾನು ಇನ್ನು ಅವಳಿಗೆ ತಂಗಿಯೆಂದೇ ಸಂಬೋಧಿಸುವೆನು. ಯಾಕಂದರೆ ಅವಳು ಪರಸ್ತ್ರೀಯಾದಳು. ಅವಳು ನನ್ನನ್ನು ಮನಃಪೂರ್ವಕವಾಗಿ ಮದುವೆಯಾಗಿಲ್ಲ! ಅಂದಮೇಲೆ ಅವಳು ನನ್ನ ಹೆಂಡತಿಯಾಗಲಾರಳು! ಇರಲಿ. ಆಗ ನಾನು ಅವಳಿಗೆ ಧೈರ್ಯ ಕೊಟ್ಟು ಹೀಗೆಂದೆನು.

“ತಂಗೀ, ರೋದಿಸಬೇಡ. ನಾವಿಬ್ಬರೂ ಒಂದೇ ರೋಗದಿಂದ ಪೀಡಿತರು! ಸಮದುಃಖಿಗಳು!”

“ಮಹಾಶಯರೇ, ನಾನು ತಮ್ಮ ಸಂಗಡ ಲಗ್ನವಾಗದೆ, ಅಗ್ನಿಗೆ ಮಾಲೆಯನ್ನು ಹಾಕಿದ್ದೇನೆ. ನನ್ನ ನಿಜವಾದ ಪತಿಯು ಒಬ್ಬ ಬಾಲಮುಕುಂದನು. ಅವನೊಬ್ಬನ ಹೊರತು ಈ ಜಗತ್ತಿನಲ್ಲಿಯ ಎಲ್ಲ ಪುರುಷರು ನನ್ನ ತಂದೆಯ ಸಮಾನರಿರುತ್ತಾರೆ. ನನ್ನ ಮೇಲೆ ಒಂದು ವೇಳೆ ನಿಮ್ಮ ದಯವಿದ್ದರೆ ನನಗೆ ಸ್ವಲ್ಪ ವಿಷವನ್ನು ತಂದುಕೊಡಿರಿ. ಅಂದರೆ ನಾನು ಪವಿತ್ರಶೀಲದಿಂದ ಈ ಜನ್ಮವನ್ನು ನೀಗುವೆನು, ಮುಂದಿನ ಜನ್ಮದಲ್ಲಾದರೂ ನನ್ನ ಬಾಲಮುಕುಂದನ ಸೇವೆಯು ನನ್ನ ಕೈಯಿಂದಾಗಲಿ. ಎಂದು ಪರಮಾತ್ಮನ ಸ್ತೋತ್ರವನ್ನು ಮಾಡುವೆನು.”

ಅವಳ ಮುಖದಿಂದ ಇದನ್ನೆಲ್ಲ ಕೇಳಿ ನನ್ನ ಮನಸ್ಸಿಗೆ ಹಗುರೆನಿಸಿತು. ನನ್ನ ಮಾರ್ಗವು ನಿಷ್ಕಂಟಕವಾಯಿತು. ನಾನೂ ನನ್ನ ಎಲ್ಲ ಸಂಗತಿಯನ್ನು ಹೇಳಿದೆನು. ಮತ್ತು "ಭಗಿನೀ, ಹಾಗಾದರೆ ತೆಗೆದುಕೋ. ಈ ಅಮೃತವನ್ನು ನಾವು ಉಭಯತರೂ ಕುಡಿದು ಸ್ವರ್ಗದ ಹಾದಿಯನ್ನು ಹಿಡಿಯುವ! ಇನ್ನು ಈ ಜಗತ್ತಿನಲ್ಲಿ ನಮಗೆ ಇರಲು ಸ್ಥಳವಿಲ್ಲ!"

ಅರ್ಧ ಅರ್ಧ ವಿಷವನ್ನು ತೆಗೆದುಕೊಂಡು ಇಬ್ಬರೂ ಕುಡಿದೆವು. ಆದದರಿಂದ ಪೋಲೀಸರು ನಮ್ಮ ಕೊಲೆಯು ವಿಷಯವಾಗಿ ಯಾವ ಸಂಶಯವನ್ನೂ ತೆಗೆದುಕೊಳ್ಳಬಾರದು. ನಮ್ಮ ಕೊಲೆಯು ಸಮಾಜದ ಕ್ಷುದ್ರಭಾವನೆಯಿಂದಾಗಿದೆ! ಸಮಾಜವೇ ನಮ್ಮ ಕೊಲೆಯನ್ನು ಮಾಡಿದೆ!

*  *  *  *

ಈ "**ವಿಚಿತ್ರಘಟನೆ**"ಯನ್ನು ಕೇಳಿ ಮತ್ತು ನೋಡಿ ಎಲ್ಲರೂ ಬೆರಗಾದೆವು; ಮರುಗಿದೆವು. ಆ ಮೇಲೆ ಇದನ್ನು ಕೇಳಿದವರೆಲ್ಲರೂ ನಮ್ಮಂತೆಯೇ ಸಖೇದಾಶ್ಚರ್ಯಬಟ್ಟರು. ವಾಚಕರೇ, ನಿಮ್ಮ ಸ್ಥಿತಿಯಾದರೂ ಹಾಗೆಯೇ ಆಗಿರುವದೆಂದು ನಂಬಿಗೆ. ಸಮಾಜದಲ್ಲಿ ಇಂತಹ ವಿದ್ಯಮಾನಗಳು ನಡೆಯಲು ಕಾರಣವೇನು? ನಾವು ಎಲ್ಲಿ ತಪ್ಪು ಮಾಡುತ್ತೇವೆ? ಅವನ್ನು ಹೋಗಲಾಡಿಸಲು ಏನುಮಾಡಬೇಕು? ಇವೇ ಮೊದಲಾದ ಪ್ರಶ್ನೆಗಳನ್ನು ಬಿಡಿಸಲು ಮುಂದಾಳುಗಳು ಯತ್ನಿಸುವರೋ?



# ನಿಷ್ಫಲಪ್ರೇಮ

ಮಾರ್ಕ್ವಿಸ್ ಬಾರ್ಟ್ರಾಮನ ಮನೆಯಲ್ಲಿ ಇಂದು ಸಂಜೆಯ ಊಟಕ್ಕೆ ಹಲವರು ನೆರೆದಿರುವರು. ಊಟವು ಮುಗಿಯುತ್ತ ಬಂದಿದೆ. ಉಜ್ವಲವಾದ ಬೆಳಕಿನಿಂದ ಬೆಳಗುತ್ತಿರುವ ಸುಂದರವಾದ ಅಟ್ಟವು; ಬಗೆಬಗೆಯ ಚಿತ್ತರದ ಸುಳಿವುಗಳ ಮೇಲ್ಕಟ್ಟು; ಗೋಡೆಗಳ ಮೇಲೆ ಬರೆದ ಚಿತ್ರಗಳೂ ಬೊಂಬೆಗಳೂ ಚಿತ್ರಕಲೆಯ ಪರಿಣತಿಯನ್ನು ತೋರ್ಪಡಿಸುತ್ತಿವೆ; ಇಂತಹ ಆ ದೊಡ್ಡ ಅಟ್ಟದ ನಡುವೆ ಇಟ್ಟ ವಿಶಾಲವಾದ ಊಟದ ಮೇಜನ್ನು ಪುಷ್ಪಪಾತ್ರ ಮೊದಲಾದ ಸೊಬಗಿನ ಉಪಕರಣಗಳಿಂದ ಸಜ್ಜುಗೊಳಿಸಿದ್ದಾರೆ. ಅದರ ಸುತ್ತಲು ೧೦—೧೨ ಜನ ಕ್ರೀಡಾಕುಶಲರೂ, ಕೆಲವರು ಸಭ್ಯಸ್ತ್ರೀಯರೂ ಮತ್ತು ಅಲ್ಲಿಯ ಡಾಕ್ಟರ್ ಏರಿ ವ್ಹಿಲ್‌ವ್ರೋಯೂ ಎಂಬವರೂ ಕುಳಿತಿರುವರು.

ಆಗ ಅಲ್ಲಿ 'ಪ್ರೇಮವೈಚಿತ್ರ್ಯ' ಎಂಬ ವಿಷಯವನ್ನು ಕುರಿತು ಅವರಲ್ಲಿ ಮಾತುಗಳು ನಡೆದಿದ್ದವು. ಮನುಷ್ಯನು ಆಯುಷ್ಯದಲ್ಲಿ ಒಬ್ಬರಿಗಿಂತ ಹೆಚ್ಚಿಗೆ ಜನರೊಡನೆ ನಿಜವಾದ ಪ್ರೇಮದಿಂದ ಬದ್ಧನಾಗಬಹುದೇ ಎಂಬ ವಿಷಯದಲ್ಲಿ ಕೋಟಿಕ್ರಮಗಳು ಕೊನೆಮೊದಲಿಲ್ಲದೆ ಸಾಗಿದ್ದವು. ಪವಿತ್ರಪ್ರೇಮಿಯು ಒಮ್ಮೆ ಒಂದು ವ್ಯಕ್ತಿಗೆ ಹೃದಯದ ಪ್ರೀತಿಭರವನ್ನು ಅರ್ಪಿಸಿದ ಬಳಿಕ ಪ್ರತಿಪ್ರೇಮವನ್ನು ಪಡೆಯದಿದ್ದರೂ ತನ್ನ ಆ ಪ್ರೀತಿಯನ್ನು ಮರೆಯಲಾರನು; ಪವಿತ್ರಪ್ರೇಮದ ಸವಿಯನ್ನು ಬಲ್ಲವರು ಪ್ರೇಮವನ್ನಿಡುವುದು ಒಮ್ಮೆಯೇ; ಪ್ರೇಮವೆಂದು ಹೇಳುವದೂ, ಅದನ್ನು ಎರಡುಬಾರಿ ಮೂರುಬಾರಿ ಭಿನ್ನ ಪಾತ್ರಗಳಲ್ಲಿ ಇಡಬಹುದೆಂದು ಹೇಳುವದೂ ಅಸಂಗತವಾದ ಮಾತು; ಎಂದು ಒಂದು ಬಣದವರು ವಾದಿಸುತ್ತಿದ್ದರು. ಇನ್ನೊಂದು ಬಣದವರು ಹಲವು ಸಂದರ್ಭಗಳನ್ನು ತೋರಿಸಿ, ಹಲವರು ಹಲವು ಬಾರಿ ಹಲವು ವ್ಯಕ್ತಿಗಳನ್ನು ಪ್ರೀತಿಸಿದ ಉದಾಹರಣಗಳನ್ನು ತೋರ್ಪಡಿಸುತ್ತಿದ್ದರು. ರೋಗವು ಬಿಟ್ಟುಬಿಟ್ಟು ಬಂದು ಮನುಷ್ಯನನ್ನು ಕ್ರಮಿಸುವಂತೆ, ಪ್ರೇಮವೂ ಒಮ್ಮೆ ಮತ್ತೊಮ್ಮೆ ಹೀಗೆ ಆಗಾಗ ಮಾನವ ಹೃದಯವನ್ನಾಕ್ರಮಿಸಬಹುದೆಂಬುದು ಇವರ ಮತವಾಗಿತ್ತು.

ಹೆಂಗುಸರ ಹೃದಯವು ಸ್ವಾಭಾವಿಕವಾಗಿ ಕೋಮಲವಾಗಿರುವದು. ಅವರ ವಿಚಾರಗಳು ಯಾವಾಗಲೂ ಕವಿತ್ವಮಯವಾಗಿ ಸರಳವಾಗಿ ಇರುವವು. ಅನ್ಯಾಯ್ಯವಾದುದನ್ನೂ ಅನನುರೂಪವಾದುದನ್ನೂ ಅವರು ಮನಸ್ಸಿನಲ್ಲಿ ತರಲಾ

ರರು; ಅಂತಹ ಸಂಗತಿಗಳಿರಬಹುದೆಂಬದನ್ನು ಕೂಡ ಒಪ್ಪಲಾರರು. ಆದದ ರಿಂದಲೇ ಅವರು ಎರಡನೆಯು ಬಣದವರ ಮತವನ್ನು ವಿರೋಧಿಸಿ ಈ ಮೇರೆಗೆ ಹೇಳಿದರು:—"ನಿಜವಾದ ಪ್ರೇಮವುಳ್ಳವರೂ ಸ್ವರ್ಗೀಯಪ್ರೇಮದ ಕಲ್ಪನೆಯು ಳ್ಳವರೂ ಎಂದೂ ಪ್ರತಿಪ್ರೇಮದ ದಾರಿಯನ್ನುನೋಡುವದಿಲ್ಲ; ತಮ್ಮ ಅಪೂರ್ವ ವಾದ ಪ್ರೇಮದ ಸುಖಾನುಭವವನ್ನು ಅವರು ತಮ್ಮಿಂದಲೇ ತಾವು ಹೊಂದು ವರು; ಇದೇ ನಮ್ಮ ಮತವು."

ಮಾರ್ಕ್ವಿಸ್ ಬಾರ್ಟ್ರಾಮನು ಆಯುಷ್ಯದಲ್ಲಿ ಹಲವು ಬಾರಿ ಹಲವರೊಡನೆ ಪ್ರೇಮಬದ್ಧನಾಗಿದ್ದನು. ಆತನು ಹೆಂಗುಸರ ಈ ಮತವನ್ನು ವಿರೋಧಿಸಿ:— "ನಾನು ದೃಢವಾಗಿ ಹೇಳಬಲ್ಲೆನು; ಯಾವನಿಗೆ ಹೃದಯವೆಂಬುದೊಂದು ವಸ್ತುವುಂಟೋ, ಆತನು ಇಡಿ ಆಯುಷ್ಯದಲ್ಲಿ ಪ್ರೀತಿಯ ಒಂದು ಮೇರೆ ಯೊಳಗೇ ಬದ್ಧನಾಗಿ ನಿಲ್ಲಲಾರನು. ಪ್ರಣಯವೆಂಬುದು ಬಲವಾದ ಉನ್ಮಾದವು; ಉನ್ಮಾದಶೀಲನು ಮದ್ಯಪಾನವನ್ನುಳಿದು ಹೇಗೆ ಇರಲಾರನೋ, ಹಾಗೆ ಪ್ರೇಮಿಯು ಪ್ರೇಮಮಾಡದೆ ಎಂದೂ ಇರಲಾರನು. ಆತನು ಹೊಸ ಹೊಸ ಪ್ರೇಮಕ್ಕೆ ಒಳಗಾಗುತ್ತಲೇ ಇರುವನು. ಇದೇ ಸೃಷ್ಟಿಯ ನಿಯಮವು." ಎಂದು ಪ್ರತಿಪಾದಿಸಿದನು.

ಈ ಮೇರೆಗೆ ಬಳೆಯುತ್ತ ನಡೆದ ಈ ವಾದಪ್ರತಿವಾದದ ಕೊನೆಯ ತೀರ್ಪನ್ನು ಹೇಳಬೇಕೆಂದು ಎಲ್ಲರೂ ಡಾ. ಫ್ಹಿಲ್‌ಪ್ರೋಯಾ ಎಂಬವರನ್ನು ಕೇಳಿಕೊಂಡರು. ಊಟಕ್ಕೆ ಬಂದವರಲ್ಲಿ ಅವರಷ್ಟು ವಯೋವೃದ್ಧರೂ ಜ್ಞಾನ ವೃದ್ಧರೂ ಯಾರೂ ಇರಲಿಲ್ಲ. ಅವರ ಮೇಲೆ ಈ ವಿಷಯದ ನಿರ್ಣಯ ಮಾಡುವ ಭಾರವನ್ನು ಇಟ್ಟರೆ, ಸಮಂಜಸವಾದ ನಿರ್ಣಯವಾಗುವ ದೆಂಬ ನಂಬುಗೆಯಿದ್ದದರಿಂದ ಎಲ್ಲರೂ ಅವರನ್ನೇ ಮಧ್ಯಸ್ಥರನ್ನಾಗಿ ಮಾಡಿದರು. ಎಲ್ಲರ ಪ್ರಾರ್ಥನೆಯನ್ನು ಮೀರಲಾರದೆ ಅವರು ಈ ಮೇರೆಗೆ ಹೇಳಲಾರಂಭಿಸಿ ದರು:—"ನಾನು ಮಾರ್ಕ್ವಿಸ್ ಬಾರ್ಟ್ರಾಮರ ಯುಕ್ತಿಯನ್ನು ಒಪ್ಪಲಾರೆನು; ಪ್ರೇಮವು ಉನ್ಮಾದವಾಗಿರಬಹುದು. ಆದರೆ ಅಷ್ಟರಿಂದಲೇ ಹೊಸ ಹೊಸ ವ್ಯಕ್ತಿಯ ಮೇಲೆ ಪ್ರೇಮ ಮಾಡುತ್ತ ಹೋಗಬೇಕಾಗುವದೆಂಬದನ್ನು ಹೇಳ ಲಾಗುವದಿಲ್ಲ. ಇಷ್ಟೇ ಅಲ್ಲ, ಯಾರು ಪ್ರೇಮದಿಂದ ಉನ್ಮಾದಹೊಂದುವರೋ, ಅವರು ಆ ಉನ್ಮಾದದಲ್ಲಿ ಆ ಪ್ರೇಮವನ್ನು ಕ್ಷಣಮಾತ್ರವೂ ಮರೆಯಲಾರದಷ್ಟು ಮಟ್ಟಿಗೆ ಅದಕ್ಕೆ ಪರವಶರಾಗಿ ಹೋಗುವರು. ಪ್ರೇಮವು ಎಂದೂ ಕ್ಷಣಿಕವಲ್ಲ.

ನಿಜವಾದ ಪ್ರೇಮವು ಒಮ್ಮೆ ಉದ್ಭವಿತವಾದ ಬಳಿಕ ಸಾಯುವ ವರೆಗೆ ಅಡಗದು ತಾವೆಲ್ಲರೂ ಬೇಸರದಿದ್ದರೆ ಇಲ್ಲಿ ನಡೆದ ಕಥೆಯೊಂದನ್ನು ಹೇಳುವೆನು.

ಕಥೆಯ ನಾಯಿಕೆಯು ೫೫ ವರ್ಷಗಳ ದೀರ್ಘಕಾಲ ಒಂದು ವ್ಯಕ್ತಿಯ ಮೇಲೆಪ್ರೇಮ ಮಾಡಿದಳು. ಆಕೆಯು ಒಂದು ದಿವಸ ಕೂಡ ಪ್ರತಿಪ್ರೇಮವನ್ನು ಪಡೆಯಲಿಲ್ಲ; ಒಂದು ದಿವಸ ಕೂಡ ಇನ್ನೊಬ್ಬರಿಗೆ ತನ್ನ ಆ ಸ್ವರ್ಗೀಯ ಪ್ರೇಮದ ಮಾತನ್ನೆತ್ತಲಿಲ್ಲ. ಅಷ್ಟು ದೀರ್ಘಕಾಲ ಹೃದಯದ ಏಕಾಂತಸ್ಥಾನದಲ್ಲಿ ಒಳಗೆ ಅದಕ್ಕೂ ಒಳಗೆ ತನ್ನ ಆ ನಿಷ್ಫಲವಾಗಿ ಹೋದ ಪ್ರೇಮವನ್ನು ಬಚ್ಚಿಟ್ಟು ಕೊಂಡಿದ್ದಳು. ಕೊನೆಗೆ ಮೃತ್ಯುವು ಆಕೆಯನ್ನು ಸ್ವರ್ಗದ ಪ್ರೇಮರಾಜ್ಯಕ್ಕೆ ಕರೆದೊಯ್ಯಿತು."

ಮಾರ್ಕ್ವಿಸ್ ಪತ್ನಿಯು ಈ ಮಾತನ್ನು ಕೇಳಿ ಆನಂದದಿಂದ–"ಆಹಾ! ಪವಿತ್ರಪ್ರೇಮದ ಎಂತಹ ಸುಂದರವಾದ ದೃಷ್ಟಾಂತವಿದು ! ಯಾವಾಕೆಯು ೫೫ ವರ್ಷಗಳ ಅವಧಿಯ ಬಹು ದೀರ್ಘಕಾಲ ತನ್ನ ಪ್ರೇಮದುರಿಯನ್ನು ಬತ್ತಗೊಡದೆ ಹೃದಯಾಶಯದಲ್ಲಿ ಬಚ್ಚಿಟ್ಟುಕೊಂಡು ಜೀವಿಸಿದಳೋ, ಆ ಹೆಂಗುಸು ನಿಜವಾಗಿ ಧನ್ಯಳು. ಆಕೆಯು ಪ್ರತಿಪ್ರೇಮದ ಸುಖವಿಲ್ಲದ ತನ್ನ ಅಕ್ಷಯ್ಯಪ್ರೇಮದ ಆನಂದಕಂಪವನ್ನು ತನ್ನೊಳಗೇ ತಾನು ಉಪಭೋಗಿಸಿದಳೆಂಬುದು ನಿಶ್ಚಯ; ಹೇಳಿರಿ, ನಾವೆಲ್ಲರೂ ಈ ಪುಣ್ಯಕಥೆಯನ್ನು ಕೇಳುವ ತವಕವುಳ್ಳವರಾಗಿರುವೆವು." ಎಂದಳು.

ಮಾರ್ಕ್ವಿಸನ ಮೋರೆಯ ಮೇಲೆ ಬೇಸರದ ಚಿಹ್ನವು ಕಂಡು ಬಂದರೂ ಡಾ. ಫ್ಲಿಲ್ ಪೋಯಾ ಹೇಳಲಾರಂಭಿಸಿದರು:—

"ಇಂದಿಗೆ ಮೂರು ತಿಂಗಳುಗಳ ಹಿಂದಿನ ಮಾತು; ಆದಿವಸ ಮೇಲೆ ಹೇಳಿದ ಹೆಂಗುಸು ಮೃತ್ಯುಶಯ್ಯೆಯ ಮೇಲಿದ್ದಾಗ ನಾನು ಆಕೆಯ ಬಳಿಯಲ್ಲಿದ್ದೆನು. ನನ್ನನ್ನು ಆಕೆ ತನ್ನ ಮೃತ್ಯುಪತ್ರದ ಒಬ್ಬ ಎಗ್ಝಿಕ್ಯೂಟರನನ್ನಾಗಿ ಆರಿಸಿದ್ದಳು.

"ಪ್ರತಿವರ್ಷ ಬೇಸಗೆಯಲ್ಲಿ ಒಬ್ಬ ಹೆಂಗುಸು ಮುರಿದ ಖುರ್ಚಿಗಳ 'ರಿಪೇರಿ' ಮಾಡುವದಕ್ಕೆ ಈ ಊರಿಗೆ ಬರುತ್ತಿದ್ದಳು. ಆಕೆಯೇ ನಾನು ಹೇಳುವ ಕಥೆಯ ನಾಯಿಕೆಯು; ಮತ್ತು ಇಲ್ಲಿಯ ರಸಾಯನಶಾಸ್ತ್ರಕೋವಿದನಾದ ಮಿ. ಚಕೇಟನು ಆಕೆಯ ಹೃದಯದೇವತೆಯು."

ಕಥಾನಾಯಿಕೆಯು ಒಬ್ಬ ಸಾಮಾನ್ಯಳೂ ಕೈಕೆಲಸದಿಂದ ಜೀವಿಸುವ ವಳೂ ಎಂಬದನ್ನು ಕೇಳಿ ಹೆಂಗುಸರ ಉತ್ಸಾಹವು ಸ್ವಲ್ಪ ಕುಗ್ಗಿತು. ಪವಿತ್ರಪ್ರೇ

ಮವು ಶ್ರೀಮಂತರೂ ಸತ್ಕುಲಪ್ರಸೂತರೂ ಆದ ಮಹಿಳೆಯರಲ್ಲಿ ಮಾತ್ರ ಇರತಕ್ಕದ್ದೆಂದು ಅವರು ಹೇಳಲಪೇಕ್ಷಿಸಿದರು.

ಏನೇ ಇರಲಿ, ಡಾ. ವ್ಹಿಲ್‌ವ್ಹೋಯೂ ಮುಂದೆ ಹೇಳಲಾರಂಭಿಸಿದರು.

"ನಾನು ಅಲ್ಲಿಗೆ ಹೋಗುವಷ್ಟರಲ್ಲಿ ಪುರೋಹಿತನು (ಪಾದ್ರಿಯು) ಮೊದಲೇ ಬಂದಿದ್ದನು. ನಾನು ಆ ಹೆಂಗುಸಿನ ಹಾಸಿಗೆಯು ಬಳಿಯಲ್ಲಿ ಒಂದು ಖುರ್ಚಿಯನ್ನೆಳೆದುಕೊಂಡು ಕುಳಿತೆನು. ಆಕೆಯು ತೀರ ಇಳಿದನಿಯಿಂದ ತನ್ನ ಆಯುಷ್ಯದ ಎಲ್ಲ ಕಥೆಯನ್ನು ಬಿಚ್ಚಿ ಹೇಳಿದಳು. ಈವರೆಗೆ ಆಕೆ ತನ್ನ ಪ್ರೇಮದ ಸುದ್ದಿಯನ್ನು ಕೂಡ ಯಾರ ಮುಂದೆಯೂ ಹೇಳಿರಲಿಲ್ಲ. ತನ್ನ ಜೀವನದಲ್ಲಿ ಒದಗಿದ ಪ್ರತಿಯೊಂದು ಸಂದರ್ಭವನ್ನು ಹೇಳಿ ತನ್ನ ಕೊನೆಯ ಬಯಕೆಯನ್ನರುಹಿ ಅದು ಪೂರ್ಣವಾದೀತೆಂದು ನಂಬಿರುವೆನೆಂದು ನುಡಿದಳು. ಈಗ ನಾನು ಆ ನಾರಿಯು ಹೇಳಿದ ತನ್ನ ಕಥೆಯನ್ನು ನಿಮ್ಮೆದುರಿಗೆ ಹೇಳುವೆನು.

" ಆಕೆಯ ತಂದೆತಾಯಿಗಳು ಟ್ರ್ಯಾವ್ಹಲಿಂಗ್ ಚೇಅರ್ ಮೆಂಡರರು (Traveling chair mender) ಎಂದರೆ ಅವರು ಊರೂರು ತಿರುಗಿ ಖುರ್ಚಿಗಳ ರಿಪೇರಿಯ ಮಾಡುವವರು. ತೀರ ಬಾಲ್ಯದಲ್ಲಿಯೇ ಆ ಹುಡುಗೆಯು ತಂದೆತಾಯಿಗಳ ಸಂಗಡ ಊರೂರು ತಿರುಗಬೇಕಾಗುತ್ತಿತ್ತು. ಒಂದೂರಲ್ಲಿ ಎರಡು ರಾತ್ರಿಗಳನ್ನು ಕಳೆದೇನೆಂದರೂ ಆಗುತ್ತಿರಲಿಲ್ಲ.

"ಆಗ ಆಕೆಗೆ ೭-೩ ವರ್ಷಗಳು. ತಾಯಿತಂದೆಗಳು ಎಲ್ಲಿಯಾದರೂ ಗಿಡದ ನೆಳಲಲ್ಲಿ ಕುಳಿತುಕೊಂಡು ತಮ್ಮ ಕೆಲಸವನ್ನು ಮಾಡುವರು; ಆ ಹುಡುಗೆ ಮಾಸಿದ ಬಟ್ಟೆಗಳನ್ನು ಹಾಕಿಕೊಂಡು ಆಚೆ ಈಚೆ ಓಡಾಡುವಳು. ಅವರ ಬಂಡಿಯ ಕುದುರೆಗಳೆರಡು ಅಚೆಗೆ ಸಮೀಪದಲ್ಲಿಯೇ ಮೇಯುತ್ತಿರುವವು; ನಾಯಿಯು ಎದುರಿಗೆ ಮುಂಗಾಲುಗಳ ಮೇಲೆ ಮೋರೆಯನ್ನಿಟ್ಟುಕೊಂಡು ಸುಮ್ಮನೆ ಮಲಗಿರುವದು. ಅವರದೊಂದು ದೊಡ್ಡ ಚಕ್ಕಡಿಯೇ ಅವರಿಗೆ ಮನೆಯಂತೆ ಇತ್ತು. ಇಷ್ಟಲ್ಲದೆ ಅವರ ಗೃಹಪರಿವಾರವೇನೂ ಹೆಚ್ಚಿಗೆ ಇರಲಿಲ್ಲ. ಅವರ ಕುದುರೆಗಳು ಅವರ ಬಂಡಿಯ ಮನೆಯನ್ನು ಊರಿಂದೂರಿಗೆ ಎಳೆದುಕೊಂಡು ಹೋಗುವವು. ಆ ನಾಯಿಯು ಇರುಳು ಅವರ ಮನೆಗೆ ಪಹರೆಯನ್ನು ಮಾಡುವದು. ಈ ಪರಿಸ್ಥಿತಿಯಲ್ಲಿಯೇ ಆ ಹುಡುಗೆಯ ಬಾಲ್ಯವು ಹೋಯಿತು; ಒಂದು ದಿವಸವೂ ಆ ಹುಡುಗೆ ಪ್ರೀತಿಯ ಮಾತುಗಳ ನ್ನಾಲಿಸಲಿಲ್ಲ. ತಾಯಿತಂದೆಗಳು ಕೆಲಸಮಾಡುತ್ತಿದ್ದ ಸ್ಥಳದಿಂದ ಹುಡುಗೆ

ದೂರಕ್ಕೆ ಹೋದೊಡನೆ ತಂದೆಯು ಬಿರುದನಿಯಿಂದ ಕೂಗಿ ಸಿಟ್ಟಿನಾಡು ವನು. ತಾಯಿತಂದೆಗಳ ಪ್ರೀತಿಯ ಲಾಲನೆಯನ್ನೇ ಆ ಹುಡುಗೆ ಅರಿಯಳು.

"ಕ್ರಮದಿಂದ ಹುಡುಗೆ ಬೆಳೆಯುತ್ತ ನಡೆದಳು. ತಮ್ಮ ಕೆಲಸದಲ್ಲಿ ಹುಡುಗೆಯು ನೆರವಾಗಬೇಕೆಂದು ತಾಯಿತಂದೆಗಳು ಬಯಸಿದರು. ಆಗಿ ನಿಂದ ನೆರೆಹಳ್ಳಿಗಳಿಗೆ ರಿಪೇರಿಯಾಗುವ ಖುರ್ಚಿಗಳನ್ನು ತರುವದಕ್ಕೆ ಈ ಹುಡು ಗೆಯನ್ನು ಕಳಿಸಲಾರಂಭಿಸಿದರು. ಆಕೆ ಹಳ್ಳಿಗಳಿಗೆ ಹೋಗಿ ಓಣಿಯುದ್ದಕ್ಕೂ ಹೋಗುವಾಗ ಅಲ್ಲಲ್ಲಿ ಆಟಕ್ಕೆ ನೆರೆದ ಹುಡುಗರೊಳಗೆ ಸೇರಬೇಕೆಂದು ಬಯಸು ವಳು. ಆದರೆ ಆಕೆಯ ಮಾಸಿದ ಬಟ್ಟೆಗಳನ್ನು ಕಂಡು ಯಾರೂ ಹತ್ತಿರ ಕರೆದುಕೊಳ್ಳುತ್ತಿರಲಿಲ್ಲ; ತುಂಟ ಹುಡುಗರು ದೂರಸರಿಸಿ ಆಕೆಯ ಮೇಲೆ ಮಣ್ಣನ್ನು ತೂರುವರು.

"ಒಂದು ದಿವಸ ದಯಾಳುವಾದ ಒಬ್ಬ ಹೆಂಗುಸು ಈ ಹುಡುಗೆಯ ಮಾಸಿದ ಹರಕು ಬಟ್ಟೆಗಳನ್ನು ಕಂಡು ಈಕೆಗೆ ಒಂದು ರೂಪಾಯಿಯನ್ನು ಕೊಟ್ಟಳು. ಹುಡುಗೆಯು ಆ ರೂಪಾಯಿಯನ್ನು ಜತನದಿಂದ ಕಾದಿಟ್ಟುಕೊಂಡಿದ್ದಳು.

"ಹುಡುಗೆಗೆ ಈಗ ೧೧ ವರ್ಷಗಳು. ಒಂದು ದಿನ ಈಕೆ ಮೇಲೆ ಹೇಳಿದ ಚಕೇಟರವರ (Choquette) ಮನೆಯೆದುರಿಗೆ ಎಂದಿನಂತೆ 'ಮುರಕ ಖುರ್ಚಿ ರಿಪೇರಿ' ಎಂದು ಕೂಗುತ್ತ ನಡೆದಿದ್ದಳು. ಆ ದಿವಸ ಅಕಸ್ಮಾತ್ತಾಗಿ ಆಕೆಯ ದೃಷ್ಟಿಯು ಚಕೇಟನ ಮೇಲೆ ಬಿದ್ದಿತು. ಆಗ ಚಕೇಟನ ವಯಸ್ಸು ೯-೧೦ ವರ್ಷ. ಆಗ ಆತನು ಬಿಕ್ಕಿಬಿಕ್ಕಿ ಅಳುತ್ತ ಇದ್ದನು. ಒಬ್ಬ ಹುಡುಗನು ಆತನ ಕೈಯೊಳಗಿನ ಎರಡು ದುಡ್ಡುಗಳನ್ನು ಕಸಿದುಕೊಂಡು ಹೋಗಿದ್ದನು; ಚಕೇ ಟನು ತನ್ನ ದುಡ್ಡು ಹೋದ ದುಃಖವನ್ನು ಮರೆಯಲೊಲ್ಲನು. ಹುಡುಗೆಯು ಈ ನೋಟವನ್ನು ಕಂಡು ಅಸಮಾಧಾನಗೊಂಡಳು. ಯಾವ ಹುಡುಗರು ಲೋಕದಲ್ಲಿ ಸುಖಿಗಳಾಗಿರುವರೆಂದು ತಿಳಿದುಕೊಂಡಿದ್ದಳೋ, ಆ ಶ್ರೀಮಂತರ ಹುಡುಗರ ಕಣ್ಣಲ್ಲಿ ಕೂಡ ನೀರು ಬರುತ್ತಿರುವದನ್ನು ಕಂಡು ಆ ಹುಡುಗೆಯ ಮನಸ್ಸು ಸಹಾನುಭೂತಿಯಿಂದ ಕರಗಿಹೋಯಿತು; ಒಮ್ಮೆಲೆ ಮನೋವೃತ್ತಿ ಗಳು ಕದಲುಬದಲಾದವು. ಅದೇ ಕಾಲಕ್ಕೆ ಆಕೆ ತನಗೇನೂ ಅರಿಕೆಯಿಲ್ಲದ ಹಾಗೆ ಆತನಲ್ಲಿ ಪ್ರೇಮವುಳ್ಳವಳಾದಳು. ಹುಡುಗೆಯು ತನ್ನ ಬಳಿಯಲ್ಲಿ ಸಂಗ್ರ ಹವಾಗಿದ್ದ ಎಲ್ಲ ಹಣವನ್ನು ಆ ಹುಡುಗನಿಗೆ ಕೊಟ್ಟುಬಿಟ್ಟಳು. ಅಲ್ಲೊಂದು ಇಲ್ಲೊಂದು ಹೀಗೆ ಆ ಹುಡುಗೆ ಐದು ರೂಪಾಯಿಗಳನ್ನು ಕೂಡಿಸಿದ್ದಳು. ಅವು ಗಳ ಮೇಲಿನ ಮೋಹವನ್ನು ಸ್ವಲ್ಪವೂ ಇಟ್ಟುಕೊಳ್ಳದೆ ಎಲ್ಲವನ್ನೂ ಕೂಡಿಸಿ

ಆತನ ಕೈಯಲ್ಲಿಟ್ಟಳು. ಬಾಲಕನು ಆಶ್ಚರ್ಯದಿಂದ ಕಣ್ಣರಳಿಸಿ ಆ ಹುಡುಗಿಯನ್ನು ನೋಡುತ್ತ ನಿಂತನು. ತನಗೆ ಇಷ್ಟು ಹಣವು ದೊರೆತೀತೆಂಬ ಕಲ್ಪನೆಯು ಕೂಡ ಆತನಿಗಿರಲಿಲ್ಲ. ಆತನ ಅಳುವು ಆಕ್ಷಣಕ್ಕೆ ನಿಂತುಹೋಯಿತು. ಆಗ ಆ ಹುಡುಗಿಯು ಆತನ ಕಣ್ಣೀರುಗಳನ್ನು ಒರೆಸಿದಳು ತಾನು ತುಚ್ಛವಾದ ಆ ರೂಪಾಯಿಗಳಿಂದ ಬಾಲಕನನ್ನು ಸಂತೋಷಗೊಳಿಸಿದೆನಲ್ಲಾ ಎಂದು ಆ ಹುಡುಗಿ ಆನಂದಭರಿತಳಾದಳು. ಆ ಆನಂದಭರದಲ್ಲಿ ತನ್ನನ್ನೇ ತಾನು ಮರೆತು ಆ ಬಾಲಕನನ್ನು ಹೊಂದಿಕೊಂಡು ನಿಂತಳು; ಮತ್ತು ಆತನನ್ನು ಎದೆಗೆ ಬಿಗಿದಪ್ಪಿಕೊಂಡು ಕೆಲಹೊತ್ತು ಆತನ ಮೋರೆಯ ನೋಡುತ್ತ ನಿಂತಳು. ಹುಡುಗನು ತನ್ನ ಕಲ್ಪನೆಗೆ ಮೀರಿದಷ್ಟು ಹಣವು ದೊರೆತದರಿಂದ ಈ ಹೊಲಸು ಹುಡುಗಿಯ ಬಾಹುಪಾಶದಲ್ಲಿ ಸಿಲುಕಿದ್ದರೂ ಹೇಸಿಕೊಳ್ಳದೆ ಸುಮ್ಮನಿದ್ದನು.

" ಬಾಲಿಕೆಯ ಸಣ್ಣ ಹೃದಯದಲ್ಲಿ ಇದೆಂತಹ ಅದ್ಭುತ ಪರಿವರ್ತನೆ ! ಪ್ರೇಮಬಂಧನವು ಸಣ್ಣವರೆನ್ನದೆ ದೊಡ್ಡವರೆನ್ನದೆ ಎಲ್ಲರನ್ನೂ ಬಿಗಿದಾವರಿಸುವದು. ಯಾರನ್ನು ಯಾರೊಡನೆ ಯಾವಾಗ ಯಾವಬಗೆಯಿಂದ ಅದು ಕಟ್ಟೀತೆಂಬ ನಿಯಮವಿಲ್ಲ.

"ಈ ಘಟನೆಯು ಒದಗಿದ ಬಳಿಕ ಹುಡುಗಿಯು ಮಲಗಿದಾಗ, ಎದ್ದಾಗ, ಕುಳಿತಾಗ, ನಿಂತಾಗ ಆ ಹುಡುಗನನ್ನೇ ಮನದಲ್ಲಿ ತರುವಳು. ಆ ಹುಡುಗನೊಡನೆ ಇರಬೇಕೆಂಬ ಆಸೆಯು ಆಕೆಯನ್ನು ಬಿಡಲೊಲ್ಲದು.

"ಮುಂದೆ ಹಲವು ತಿಂಗಳುಗಳು ಕಳೆದವು; ತಂದೆತಾಯಿಗಳೊಡನೆ ಹುಡುಗಿಯು ಬೇರೊಂದೂರಿಗೆ ಹೋಗಬೇಕಾಯಿತು ಆದರೆ ಅಲ್ಲಿ ಆ ಹುಡುಗಿಗೆ ಸೊಗಸೆನಿಸಲಿಲ್ಲ; ಒಂದೆಡೆಗೆ ನಿಲ್ಲದಹಾಗಾಯಿತು. ತಂದೆತಾಯಿಗಳನ್ನು ಕೇಳಿ ಆಕೆ ಮತ್ತೆ ಹುಡುಗನನ್ನು ನೋಡಲೋಸುಗ ಬಂದಳು; ಆದರೆ ಈ ಬಾರಿ ಆಕೆಯ ಆಸೆಯು ಪೂರ್ಣವಾಗಲಿಲ್ಲ. ಕೆಲಹೊತ್ತು ಚಕೋಟರವರ ಮನೆಯ ಮುಂದೆ ಸುಳಿದಾಡಿದ ಬಳಿಕ ಆಕೆ ಒಮ್ಮೆ ಮಾತ್ರ ಕಿಡಕಿಯೊಳಗಿಂದ ಆತನನ್ನು ಕಂಡಳು.

" ಆದರೂ ಆಕೆ ಹುಡುಗನನ್ನು ಮರೆಯಲಿಲ್ಲ. ಆ ಹುಡುಗನ ಊರಿಂದ ದೂರ ದೂರ ಹೋದಂತೆ ಹೆಚ್ಚಿಗೆ ಹೆಚ್ಚಿಗೆ ಆತನನ್ನು ಪ್ರೀತಿಸತೊಡಗಿದಳು. ಹುಡುಗನನ್ನು ಹೊಂದುವ ಆಸೆ, ನೋಡುವ ಆಸೆ ಇವು ಬಯಲಾಗುತ್ತ ಹೋದ ಹೋದಂತೆ ಆಕೆಯ ಪ್ರೇಮವು ಹೆಚ್ಚು ಹೆಚ್ಚು ಆಳವಾಯಿತು. ಆಕೆಯ ಹೃದಯಪಟದ ಮೇಲೆ ಹುಡುಗನ ಚಿತ್ರವು ಸ್ಥಿರವಾಗಿ ಉಳಿಯಿತು.

" ಮತ್ತೆ ಹೊಸ ಚಿಗುರುಗಳಿಂದ, ಹೊಸ ಎಲೆ ಹೂಗಳಿಂದ ಜನರ ಮನವನ್ನರಳಿಸುವ ಮಧುಮಾಸವು ಪ್ರಾಪ್ತವಾಯಿತು. ಸೃಷ್ಟಿದೇವತೆಯು ಅಲಂಕರಿಸಿಕೊಂಡು ಸೊಬಗುವಡೆದಂತೆ ಎಲ್ಲ ಜನರನ್ನು ಸೊಗಸುಗೊಳಿಸ ತೊಡಗಿದಳು. ಆದರೆ ಈ ಹುಡುಗೆಗೆ ಎಲ್ಲಿಯು ಸೊಗಸು! ಕ್ರಮವಿಂದ ಹುಡುಗೆಯು ಕುಗ್ಗಿದಳು; ಆಕೆ ತಾನು ಚಕೋಟನ ಒಡನಾಡಿಯಾಗಲಾರೆನೆಂದು ತಿಳಿಯುತ್ತ ನಡೆದಂತೆ ಕಂದಿದಳು; ಆ ಭಾವನೆಯು ದೃಢವಾಗುತ್ತ ನಡೆದಂತೆ ಕುಂದಿದಳು. ಹೀಗೆ ಹೊರಗಿನ ಹುರುಪು ಅಡಗಿ ಹೋಗಿದ್ದರೂ ಒಳಗೆ ಹೃದಯದಲ್ಲಿ ಪ್ರೇಮವು ಹೆಚ್ಚುತ್ತ ನಡೆದಿತ್ತು. ಇನ್ನೊಮ್ಮೆ ಆ ಹುಡುಗೆಯು ತಂದೆತಾಯಿಗಳ ಸಂಗಡ ಈ ವೂರಿಗೆ ಬಂದಳು. ಆಕೆ ಈ ಬಾರಿ ಚಕೋಟನನ್ನು ಅವರ ಮನೆಯ ಎದುರಿಗೆ ಕಂಡಳು. ಹುಡುಗನು ಗುಂಡುಗಳನ್ನಾಡುತ್ತಿದ್ದನು. ಹುಡುಗೆಯು ಹೃದಯದ ಆತುರತೆಯನ್ನು ಅಂಕೆಯಲ್ಲಿಟ್ಟುಕೊಳ್ಳಲಾರದೆ, ಮನಸ್ಸಿನ ದುರ್ಬಲತೆಯನ್ನು ದೂರೀಕರಿಸಲಾರದೆ ಧಾವಿಸಿ ಹೋಗಿ ಹುಡುಗನನ್ನು ಎದೆಗಪಚಿಕೊಂಡಳು. ಅಕಸ್ಮಾತ್ತಾಗಿ ಒಬ್ಬ ಕಾಡು ಹುಡುಗೆಯು ತನ್ನನ್ನೆಳೆದು ಅವಚಿಕೊಂಡುದನ್ನು ಕಂಡು ಹುಡುಗನು ಅಂಜಿ ಕೀರಿದನು. ಹುಡುಗೆಯು ಆತನನ್ನು ಸಮಾಧಾನಗೊಳಿಸುವದಕ್ಕಾಗಿ ತಾನು ಆ ವರೆಗೆ ಕೂಡಿಟ್ಟ ಹಣವನ್ನು ಆತನ ಕೈಯಲ್ಲಿಟ್ಟಳು. ಹುಡುಗನು ಆ ಹಣವನ್ನು ಕೆಲಹೊತ್ತು ಬೆರಗಾಗಿ ನೋಡಿ ಕೂಡಲೆ ಓಡುತ್ತ ಹೋಗಿಬಿಟ್ಟನು.

" ಈ ಮೇರೆಗೆ ಮತ್ತೆ ನಾಲ್ಕುವರ್ಷ ಆಕೆಯು ತನ್ನಲ್ಲಿ ಕೂಡಿದ ಹಣವನ್ನೆಲ್ಲ ಆ ಹುಡುಗನಿಗೆ ಕೊಡುತ್ತ ಬಂದಳು. ಹುಡುಗನು ಆ ಹಣಕ್ಕೆ ಪ್ರತಿಯಾಗಿ ಹುಡುಗೆ ಅವಚಿಕೊಂಡಷ್ಟು ಕಾಲ ಸುಮ್ಮನಿರುತ್ತಿದ್ದನು. ಒಂದು ವರ್ಷ ೨೫ ರೂ. ಇನ್ನೊಂದು ವರ್ಷ ೨೦ ರೂ. ಮತ್ತೊಂದು ವರ್ಷ ೩೦ ರೂ. ಈ ಮೇರೆಗೆ ಬಹಳ ಹಣವನ್ನು ಹುಡುಗನಿಗೆ ಕೊಡುತ್ತ ಬಂದಳು. ಈ ಜಗತ್ತಿನಲ್ಲಿ ಆಕೆಗೆ ಇನ್ನಾವ ಆಶೆಯೂ ಇರಲಿಲ್ಲ. ಹುಡುಗನ ಸಂಗತಿಯ ಹೊರತು ಇನ್ನಾವವೂ ಆಕೆಯನ್ನು ಸಮಾಧಾನಗೊಳಿಸುತ್ತಿರಲಿಲ್ಲ. ಹಗಲಿರುಳು ಹುಡುಗನನ್ನೇ ನೆನೆಯುವಳು; ಅದರಲ್ಲಿಯೇ ಆಕೆ ತನ್ನ ಪ್ರೇಮದ ಸುಖವನ್ನೂ ಸಾರ್ಥಕತೆಯನ್ನೂ ಭಾವಿಸಿಕೊಳ್ಳುವಳು. ತನ್ನ ಕೂಡಿಟ್ಟ ಹಣವನ್ನು ಕೊಡುವಾಗ ಆಕೆಯ ಮನಸ್ಸು ಲೋಭದಿಂದ ಸ್ವಲ್ಪವೂ ಕದಲುತ್ತಿರಲಿಲ್ಲ.

“ಮತ್ತೆ ಕೆಲವು ವರ್ಷಗಳು ಸಂದವು. ಈಗ ಆಕೆಗೆ ಹುಡುಗನ ದರ್ಶನ ವಿಲ್ಲದಂತಾಯಿತು. ಹುಡುಗನು ಆಗ ಇನ್ನೊಂದು ಪಟ್ಟಣಕ್ಕೆ ವಿದ್ಯಾಭ್ಯಾಸ ಕ್ಕಾಗಿ ಹೋಗಿದ್ದನು. ಮತ್ತೆ ಎರಡು ವರ್ಷಗಳ ತರುವಾಯ ಹುಡುಗನನ್ನು ಕಂಡಳು. ಈಗ ಆತನು ತಕ್ಕಮಟ್ಟಿಗೆ ದೊಡ್ಡವನಾಗಿದ್ದಾನೆ. ಬಾಲ್ಯೋ ಚಿತಚಂಚಲತೆಯು ಈಗ ಆತನಲ್ಲಿಲ್ಲ; ಈಗ ಆತನು ಈ ಹೆಂಗುಸಿನ ಬಳಿಗೆ ಬರಲಿಲ್ಲ; ಈಕೆಯನ್ನು ಕಂಡು ಕಾಣದವನಂತೆ ಬದಿಗೆ ಸರಿದು ಮುಂದೆ ಹೋದನು. ಅಯ್ಯೋ! ಈವರೆಗೆ ಸ್ವಸುಖವನ್ನು ಸ್ವಲ್ಪವೂ ಗಮನಿಸದೆ ತನ್ನ ಸಂಚಯದ ಸರ್ವಸ್ವವನ್ನು ಯಾವಾತನಿಗೆ ಅರ್ಪಿಸುತ್ತ ಬಂದಳೋ, ಆ ಅಕೃತ ಜ್ಞನಾದ ಹುಡುಗನು ಇಂದು ತನ್ನ ಆದರವನ್ನೂ ಮಾನವನ್ನೂ ಅಲಕ್ಷಿಸಿ ಗರ್ವದಿಂದ ತನ್ನನ್ನು ಹೀಯಾಳಿಸಿ ಹೋದನೇ! ಎಂದು ಆಕೆ ಮರುಗಿದಳು.

“ಉಪಾಯಾಂತರವನ್ನು ಕಾಣದೆ ಆಕೆ ಕೆಲವು ಹೊತ್ತು ಮನವಾರೆ ಅತ್ತಳು. ಹುಡುಗನ ಈ ನಿಷ್ಠುರತನದಿಂದ ನೊಂದುಕೊಂಡ ಆಕೆಯ ಕಣ್ಣಲ್ಲಿ ಎರಡು ದಿವಸ ನೀರು ತಪ್ಪಲಿಲ್ಲ. ಆದರೂ ಆಕೆ ಆತನನ್ನು ಮರೆಯಲಾರಳು.

“ಇದಾದ ಬಳಿಕ ಆ ಹೆಂಗುಸು ಪ್ರತಿವರ್ಷ ಈ ಊರಿಗೆ ಬರುತ್ತಿದ್ದಳು. ಆದರೆ ಚಕೇಟನ ದರ್ಶನವೇ ಇಲ್ಲ. ಆತನನ್ನು ತನ್ನ ಬಳಿಗೆ ಕರೆಯುವದಕ್ಕೆ ಇಲ್ಲವೆ ತಾನೇ ಆತನ ಬಳಿಗೆ ಹೋಗುವದಕ್ಕೆ ಆಕೆಗೆ ಧೈರ್ಯವಾಗುತ್ತಿರಲಿಲ್ಲ. ಯಾವಾಗಲೋ ಒಮ್ಮೆ ದೂರದಿಂದ ಚಕೇಟನನ್ನು ಕಂಡರೆ ಅಷ್ಟರಿಂದಲೇ ಆಕೆಯು ಮನವಾರೆ ಹರ್ಷಬಡುವಳು. ಮರಣಸಮಯದಲ್ಲಿ ಆ ಹೆಂಗುಸು ನನಗೆ ಹೇಳಿದ್ದೇನೆಂದರೆ ಈ ಜಗತ್ತಿನಲ್ಲಿ ನಾನು ಆ ಒಬ್ಬ ಸುಂದರಪುರುಷನನ್ನು ಮಾತ್ರ ಬಲ್ಲೆನು; ಆತನ ಹೊರತು ಇನ್ನೊಬ್ಬ ಸುಂದರನು ಈ ಜಗತ್ತಿನಲ್ಲಿರು ವನೆಂಬ ಭಾವನೆಯು ನನ್ನ ಮನಸ್ಸಿನಲ್ಲಿ ಬರಲೇ ಇಲ್ಲ.

“ಕಾಲಕ್ರಮದಿಂದ ಆಕೆಯ ಮುದುಕ ತಂದೆ ತಾಯಿಗಳು ಕಾಲವಶ ರಾದರು. ಮನೆಯ ಉದ್ಯೋಗವನ್ನೇ ಆಕೆಯೂ ನಡೆಸಿದಳು.

“ಒಂದಾನೊಂದು ದಿವಸ ಚಕೇಟನ ಮನೆಯ ಮುಂದೆ ಹೋಗುವಾಗ ಹರಯಕ್ಕೆ ಬಂದ ಒಬ್ಬ ಚಲುವೆಯು ತನ್ನ ಪ್ರಿಯತಮನಾದ ಚಕೇಟನ ಕೈಯೊ ಳಗೆ ಕೈಹಾಕಿಕೊಂಡು ಮನೆಯೊಳಗಿಂದ ಹೊರಗೆ ಬರುತ್ತಿರುವದನ್ನು ಆಕೆಯು ಕಂಡಳು. ಈ ಚಲುವೆಯು ಚಕೇಟನ ಮದುವೆಯ ಮಡದಿಯೆಂಬದನ್ನು ಆಕೆಯು ಕೂಡಲೆ ತಿಳಿದಳು. ಈ ನೋಟವನ್ನು ಆಕೆ ನೋಡಲಾರದೆಹೋದಳು.

ತನ್ನ ಹೃದಯದ ಆರಾಧ್ಯದೇವತೆಯು ಈಗ ಅನ್ಯರ ಒಡವೆ; ಅದರ ಮೇಲೆ ತನ್ನ ಒಡೆತನವೇನೂ ನಡೆಯುವಂತಿಲ್ಲ, ಇದನ್ನು ತಾಳಿಕೊಳ್ಳುವದು ಆಕೆಗೆ ಅಸಾಧ್ಯವಾಯಿತು.

"ಆ ದಿವಸ ರಾತ್ರಿ ಆಕೆಯು ಚಕೋಟರವರ ಮನೆಯೆದುರಿಗಿರುವ ಒಂದು ಬಾವಿಯಲ್ಲಿ ಜನುನುಸೀಗುವದಕ್ಕಾಗಿ ಹಾರಿಕೊಂಡಳು. ದೈವಯೋಗದಿಂದ ಅದನ್ನು ನೋಡಿದ ನೆರೆಹೊರೆಯವರು ಕೂಡಲೆ ಹೊರದೆಗೆದು ಆಕೆಯ ಆ ಮಹಾಪ್ರಯಾಣವನ್ನು ನಿಲ್ಲಿಸಿದರು; ಮತ್ತು ಉಪಚಾರಕ್ಕಾಗಿ ಚಕೋಟರವರ ಮನೆಯಲ್ಲಿ ತಂದು ಹಾಕಿದರು. ಚಕೋಟನು ಈ ಸಾಯಲಾದವಳನ್ನು ನೋಡಿ ತಾನೇ ಉಪಚಾರದ ವ್ಯವಸ್ಥೆಯನ್ನು ಮಾಡಿದನು. ಸ್ವಲ್ಪ ಗುಣ ಹೊಂದಿದ ತರುವಾಯ ಆತನು—'ಮೂರ್ಖಳೇ, ಈ ಮೇರೆಗೆ ಮರುಳುತನವನ್ನು ಇನ್ನು ಮೇಲೆ ಮಾಡಬೇಡ' ಎಂದು ಹೀಯಾಳಿಸಿ ನುಡಿದನು. ಚಕೋಟನು ತನ್ನೊಡನೆ ಮಾತುಗಳನ್ನಾಡಿದನು, ತನ್ನನ್ನು ಸಂಶೋಧಿಸಿದನು ಎಂಬ ಹರ್ಷದೊಳಗೆ ತನಗಾದ ಅತ್ಯವಸ್ಥೆಯನ್ನು ಆಕೆ ಮರೆತುಬಿಟ್ಟಳು. ತರುವಾಯ ಆಕೆ ಮುಂದೆ ಹಲವು ದಿನಗಳನ್ನು ಅದೇ ಸುಖದಲ್ಲಿ ಕಳೆದಳು.

"ಆಕೆಯ ಇಡಿ ಆಯುಷ್ಯವು ಹೀಗೆಯೇ ಕಳೆಯಿತು; ಮುಂದೆಯೂ ಮುರುಕ ಖುರ್ಚಿಗಳ ರಿಪೇರಿಮಾಡುವದೇ ಆಕೆಯ ಉದ್ಯೋಗವಾಗಿತ್ತು. ಮತ್ತು ಆಗಾಗ ಚಕೋಟನನ್ನು ನೆನೆಯುತ್ತಿದ್ದಳು. ಪ್ರತಿವರ್ಷ ಈ ಊರಿಗೆ ಬಂದಾಗ ಚಕೋಟನನ್ನು ಕಣ್ತುಂಬ ನೋಡಿ ತಣಿಯುವಳು. ನಡುನಡುವೆ ಆತನ ಅಂಗಡಿಯಿಂದ ಹಲವು ಔಷಧಗಳನ್ನು ಕೊಂಡು ತರುವಳು. ಅದರಿಂದ ಆಕೆಗೆ ಚಕೋಟನ ದರ್ಶನವೂ ಯಥೇಷ್ಟವಾಗಿ ಆಗುವದು; ಮತ್ತು ಆತನೊಡನೆ ಒಂದೆರಡು ಮಾತುಗಳನ್ನಾಡುವದಕ್ಕೂ ಅನುವು ದೊರೆಯುತ್ತಿತ್ತು. ಇದಲ್ಲದೆ ಈ ನೆವದಿಂದ ತನ್ನ ಹಣವನ್ನು ಕೆಲಮಟ್ಟಿಗೆ ಆತನಿಗೆ ಮುಟ್ಟಿಸಿದಂತಾಗುತ್ತಿತ್ತು.

"ಆಕೆ ಸತ್ತು ಮೂರು ತಿಂಗಳಾಯಿತೆಂದು ಈ ಮೊದಲು ಹೇಳಿದೆನಲ್ಲವೇ? ಆಕೆಯು ತನ್ನ ಆಯುಷ್ಯದ ಈ ಹೃದಯದ್ರಾವಕವಾದ ಪ್ರಸಂಗಗಳನ್ನು—ನಿಷ್ಫಲಪ್ರೇಮದ ಕಥೆಯನ್ನು – ನನ್ನೆದುರಿಗೆ ಹೇಳಿ, ತನ್ನ ಜೀವಮಾನದಲ್ಲಿ ಗಳಿಸಿದ ಎಲ್ಲ ಹಣವನ್ನು ನನ್ನ ವಶಕ್ಕೆ ಕೊಟ್ಟು, ತಾವು ಈ ಹಣವನ್ನೆಲ್ಲ ದಯಮಾಡಿ 'ಅವರಿಗೆ' ಮುಟ್ಟಿಸಿದರೆ ನಾನು ಜನ್ಮ ಜನ್ಮಾಂತರದಲ್ಲಿ ತಮಗೆ ಋಣಿಯಾಗಿರುವೆನೆಂದು ಹೇಳಿದಳು. ಆಕೆಯು ಇಡಿ ಆಯುಷ್ಯದಲ್ಲಿ ದಾರಿದ್ರ್ಯದ ಕಷ್ಟವನ್ನು ತಾಳಿಕೊಂಡಳು; ಬಳಲಿಕೆಯಿಲ್ಲದೆ ದುಡಿದು ದುಡಿದು

ಗಾಸಿಯಾದಳು. ಹೊಟ್ಟೆಬಟ್ಟೆಗಳನ್ನು ಸಾಗಿಸಿ ಉಳಿದ ಹಣವನ್ನೆಲ್ಲ ಈ ತರು ಣನ ಸಲುವಾಗಿಯೇ ಮುಡುಸಾಗಿಟ್ಟಳು. ಈ ಸಂಸಾರದಲ್ಲಿ ಆಕೆಯು ಬಯಕೆ ಇನ್ನೇನೂ ಇರಲಿಲ್ಲ. ಆದದರಿಂದ ಸತ್ತಬಳಿಕ ಆ ಹಣವೆಲ್ಲ ಆತನಿಗೇ ಸಲ್ಲ ಬೇಕೆಂದು ವ್ಯವಸ್ಥೆಮಾಡಿದಳು. ಮತ್ತೆ ಆಕೆ ಕುಗ್ಗಿದ ದನಿಯಿಂದ ನೀವು ನನ್ನ ಬಂಧುಗಳೆಂದು ತಿಳಿದು, ಅವರ ಬಳಿಯಲ್ಲಿ—ಈ ದರಿದ್ರ ಹೆಂಗುಸನ್ನು ಯಾವಾಗಲಾದರೊಮ್ಮೆ ನೆನೆಸುತ್ತ ಇದ್ದರೆ, ಪರಲೋಕದಲ್ಲಿ ತನ್ನ ಆತ್ಮವು ಶಾಂತಿಯನ್ನು ಹೊಂದುವದೆಂದು ಹೇಳಿರೆಂದು ನನ್ನನ್ನು ಬೇಡಿಕೊಂಡಳು. ಇಲ್ಲಿಗೆ ಆಕೆಯು ಜೀವನೇತಿಹಾಸವು ಮುಗಿಯಿತು. ನಿಜವಾದ ಪ್ರೇಮದ ಪರಿಚಯವು ಯಾರಿಗಾದರೂ ಆಗಿದ್ದರೆ ಈ ನಾರಿಗೇ ಆಗಿದೆಯೆಂದು ತಿಳಿಯ ಬೇಕು. ಈ ಲೋಕದಲ್ಲಿ ಆಕೆಯು ತನ್ನ ಪ್ರೇಮಕ್ಕೆ ಪ್ರತಿಫಲವನ್ನು ಪಡೆಯ ಲಿಲ್ಲವೆಂಬದು ನಿಜ, ಆದರೆ ಪರಲೋಕದಲ್ಲಿ ನಿಶ್ಚಯವಾಗಿ ಪಡೆಯುವಳು. ಆಕೆಯ ಪ್ರೇಮವು ಸ್ವರ್ಗೀಯಪ್ರೇಮವು ! ಪರಮೇಶ್ವರನು ಅದನ್ನು ಪುರಸ್ಕ ರಿಸದಿರಲಾರನು.

"ಆ ಹೆಂಗುಸು ನನ್ನ ವಶಕ್ಕೆ ೫ ಸಾವಿರ ರೂಪಾಯಿಗಳನ್ನು ಕೊಟ್ಟಳು. ಅವುಗಳೊಳಗಿಂದ ಆಕೆಯ ಔರ್ಧ್ವದೇಹಿಕ ಕ್ರಿಯೆ ಮೊದಲಾದವುಗಳಿಗಾಗಿ ಪುರೋಹಿತನ ಕೈಯಲ್ಲಿ ೧೦೦ ರೂಪಾಯಿಗಳನ್ನು ಕೊಟ್ಟೆನು. ಮರುದಿನ ಉಳಿದ ಹಣವನ್ನು ಕಟ್ಟಿಕೊಂಡು ಚಕೇಟರವರ ಮನೆಗೆ ಹೋದೆನು. ಅಗ ಆ ಗಂಡಹೆಂಡಿರು ಕುಳಿತುಕೊಂಡು ಸುಖಸಲ್ಲಾಪಗಳನ್ನಾಡುತ್ತಿದ್ದರು.

" ನನ್ನನ್ನು ಕುಳಿತುಕೊಳ್ಳ ಹೇಳಲು ನಾನು ಕುಳಿತುಕೊಂಡೆನು. ಬಳಿಕ ಆ ಹೆಂಗುಸಿನ ಕರುಣಾಜನಕ ಕಥೆಯನ್ನು ಹೇಳ ತೊಡಗಿದೆನು. ಈ ಕಥೆಯನ್ನು ಕೇಳಿ ಅವರು ದುಃಖಿಸದಿರಲಾರರೆಂದು ನನ್ನ ನಂಬುಗೆಯಿತ್ತು.

" ದಾರಿಗುಂಟ ತಿರುಗುವ ಒಬ್ಬ ದರಿದ್ರಸ್ತ್ರೀಯು ತನ್ನ ಮೇಲೆ ಪವಿತ್ರ ಪ್ರೇಮವನ್ನಿಟ್ಟಿದ್ದನೆಂದು ಹೇಳಿದಳೆಂಬುದನ್ನು ಚಕೇಟನು ಕೇಳಿ ಸರ್ಪವನ್ನು ತುಳಿ ದವನಂತೆ ಹಾರಿಬಿದ್ದು ಎದ್ದು ಎರಡು ಹೆಜ್ಜೆ ಹಿಂಜರಿದು ನಿಂತನು. ಆ ಹತಭಾ ಗಿನಿಯಾದ ನೀಚಳು ತನ್ನಮೇಲೆ ಪ್ರೇಮವಿಟ್ಟದರಿಂದ ತನಗುಂಟಾದ ಅಪಮಾ ನದ ಹಾನಿಯು ತನ್ನ ಮರಣಕ್ಕಿಂತ ಹೆಚ್ಚಿನದೆಂಬ ಭಾವವನ್ನು ಈ ಅಭಿನಯ ದಿಂದ ಆತನು ತೋರ್ಪಡಿಸಿದನು. ಆತನ ಹೆಂಡತಿಯು ಏನೂ ಮಾತನಾಡಲಾ ರದೆ—'ತಿರುಕಿ! ಎಂತಹ ನೀಚಳು! ಏನು ಹಾರಿಕೆಯಿದು!' ಎಂದು ಮೇಲೆ ಮೇಲೆ ಕೂಗಿ ಅಬ್ಬರಿಸ ತೊಡಗಿದಳು.

" ಚಕೇಟನು ಕೆಲವೇಳೆ ಅತ್ತಿತ್ತ ಹಾಸುಹೊಯ್ದು ನನ್ನನ್ನು ಕುರಿತು 'ಡಾಕ್ಟರ ವ್ಹಿಲ್‌ವ್ಹೋಯಾ, ಇದೆಂತಹ ದೈವಿಕೋತ್ಪಾತವು; ಭಯಂಕರವಾದ ಕೇಡು; ಅಪಮಾನದ ದೊಡ್ಡ ಹೊರೆ ನನ್ನಮೇಲೆ ಬಿದ್ದಂತಾಗಿದೆಯೆಂಬವರ ಕಲ್ಪನೆಯು ತಮಗೆ ಆಗಿರಬಹುದು. ಈಗ ಆ ಹೆಂಗುಸು ಬದುಕಿದ್ದರೆ ಇದಕ್ಕೆ ತಕ್ಕ ಶಿಕ್ಷೆಯನ್ನು ಆಕೆಗೆ ಮಾಡುತ್ತಿದ್ದೆನು, ಎಂದು ನುಡಿದನು.

" ನಾನು ಅವರ ಆವಿರ್ಭಾವವನ್ನು ಕಂಡು ಕೆಲಹೊತ್ತು ಸುಮ್ಮನೆ ಕುಳಿತೆನು. ಮುಂದೆ ಏನುಮಾಡಬೇಕೆಂಬುದು ನನಗೆ ತಿಳಿಯದಂತಾಯಿತು. ಏನೇ ಇರಲಿ, ನಾನು ಒಪ್ಪಿಕೊಂಡ ಕೆಲಸವನ್ನು ಮಾಡಲೇಬೇಕೆಂಬದನ್ನು ಗಮನಿಸಿ– ಆ ಹೆಂಗುಸು ತನ್ನ ಆಯುಷ್ಯದಲ್ಲೆಲ್ಲ ದುಡಿದು ಗಳಿಸಿಟ್ಟ ೫ ಸಾವಿರ ರೂಪಾಯಿ ಹಣವನ್ನು ತಮಗೆ ಮುಟ್ಟಿಸಬೇಕೆಂದು ನನಗೆ ಹೇಳಿ ಹೋಗಿರುವಳೆಂದು ಹೇಳಿಬಿಟ್ಟೆನು; ಮತ್ತು ಈ ವಿಷಯವು ತಮಗೆ ಅಷ್ಟೊಂದು ಅಪ್ರೀತಿಕರವಾಗಿದೆಯೆಂದಬಳಿಕ ತಾವು ಈ ಹಣವನ್ನು ಸ್ವೀಕರಿಸಲಾರಿರಿ ಎಂಬದು ಸ್ಪಷ್ಟವಾಗಿದೆ. ಆದದರಿಂದ ಈ ಹಣವನ್ನು ನನ್ನ ಬಳಿಯಲ್ಲಿಯೇ ಯಾವದೊಂದು ಲೋಕೋಪಕಾರದ ಕೆಲಸಕ್ಕಾಗಿ ಬಿಟ್ಟುಬಿಡಿರಿ. ನಿಮ್ಮ ಅನುಮತಿಯ ಮೇರೆಗೆ ಅದರ ವಿನಿಯೋಗವನ್ನು ಮಾಡುವ. ಎಂದು ಹೇಳಿದೆನು. ದುಡ್ಡಿನ ಮಾತನ್ನು ಕೇಳಿ ಆ ದಂಪತಿಗಳು ಕೆಲಹೊತ್ತು ನನ್ನ ಮೋರೆಯ ಕಡೆಗೆ ನೋಡುತ್ತ ನಿಂತರು. ಬಳಿಕ ಚಕೇಟನ ಹೆಂಡತಿಯು–'ಅದು ಏನೇ ಇರಲಿ, ಆ ಹೆಂಗುಸಿನ ಕೊನೆಗಾಲದ ಬಯಕೆಯು ಆ ಹಣವು ನಮಗೆ ಮುಟ್ಟಬೇಕೆಂದೇ ಇದ್ದ ಬಳಿಕ ಅದನ್ನು ನಾವು ಸ್ವೀಕರಿಸಲೇಬೇಕಾಗುವದು; ಇಲ್ಲವಾದರೆ ಅನ್ಯಾಯವಾಗುವದು.' ಎಂದು ನುಡಿದಳು!

" ನಾನು ಒಣದನಿಯಿಂದ–'ತಮ್ಮ ಇಚ್ಛೆ' ಎಂದು ಹೇಳಿ ಆ ಹೆಂಗುಸು ಗಳಿಸಿದ ಹಲವು ದೇಶಗಳ ಹಲವು ಬಗೆಯ ಬಂಗಾರದ, ಬೆಳ್ಳಿಯ, ತಾಮ್ರದ ನಾಣ್ಯಗಳನ್ನು ಎಣಿಸಿ ಒಂದು ನೂರು ಕಡಿಮೆ ಐದುಸಾವಿರ ರೂಪಾಯಿಗಳನ್ನು ಕೊಟ್ಟೆನು. ಬಳಿಕ ಹೋಗಿ ಬರುವೆನೆಂದು ಹೇಳಿ ಹೊರಟುಬಂದೆನು. ನನ್ನ ಆಯುಷ್ಯದಲ್ಲಿ ಪವಿತ್ರಪ್ರೇಮದ ಇದೊಂದು ಉತ್ತಮದೃಷ್ಟಾಂತವನ್ನು ನಾನು ಕಂಡೆನು. "

ಈ ಕಥೆಯನ್ನು ಹೇಳಿ ಡಾಕ್ಟರರು ಸುಮ್ಮನಾದರು. ಆಗ ಮಾರ್ಕ್ವಿಸ್ ಬಾಟ್ರ್ರಾಂವನು ಕಣ್ಣೀರಿತ್ತಿ ನಿಟುಸಿರುಬಿಟ್ಟು ಸತ್ಯವಾದ ಪ್ರೇಮವು ಅವುದೆಂಬದನ್ನು ಆ ನಾರಿಯು ತಿಳಿದಿದ್ದಳು. ಈ ದಿವಸ ಈ ಪುಣ್ಯಕಥೆಯನ್ನಾಲಿಸಿ ನನ್ನ ದೊಡ್ಡ ಭ್ರಾಂತಿಯು ಅಳಿದು ಹೋಯಿತು ಎಂದು ನುಡಿದನು.

---

# ಯೋಗಿ ಮಹಿಮೆ

( ೧ )

ಋಷಿವರ್ಯರ ಸಂಧ್ಯಾವಂದನೆಯು ಮುಗಿದಿತ್ತು. ಇನ್ನೂ ಇದೇ ತಾಯಿಯ ಹೊಟ್ಟೆಯಿಂದ ಹೊರಬಿದ್ದ ಭಗವಾನ್ ಸೂರ್ಯನಾರಾಯಣನ ಕಡೆಗೆ ಅವರು ಪ್ರಸನ್ನಮುದ್ರೆಯಿಂದ ನೋಡುತ್ತಿದ್ದರು. ಅವರ ಪರ್ಣಕುಟೀರದ ಸುತ್ತಲಿನ ಸೃಷ್ಟಿಸೌಂದರ್ಯವು ದರ್ಶನೀಯವಾಗಿತ್ತು. ಎದುರಿನಲ್ಲಿ ಎರಳೆಗಳು ತಮ್ಮತಮ್ಮಲ್ಲಿ ಆಡುತ್ತಿದ್ದವು; ಭೂಮಾತೆಯು ಹಸರು ಸೀರೆಯನ್ನು ಉಟ್ಟಿರುವಳೋ ಏನೋ ಎಂಬಂತೆ ಅಲ್ಲಿದ್ದ ಹುಲ್ಲು ಕಾಣುತ್ತಿತ್ತು.

ಋಷಿವರ್ಯರು ತಮ್ಮ ಪರ್ಣಕುಟೀರದ ಸುತ್ತುಮುತ್ತಲು ಹೂವು, ತುಳಸಿ, ಬಿಲ್ವವೃಕ್ಷ ಮೊದಲಾದ ದೇವೋಪಯೋಗಿಗಳಾದ ಗಿಡಗಳನ್ನು ಹಚ್ಚಿದ್ದರು. ಈಗ ಅವರು ದೇವರ ಪೂಜೆಗೆ ತೊಡಗಿದರು. ಒಮ್ಮೆ ಬಾಯಿಂದ ಏನೋ ಕೆಲವು ಶಬ್ದಗಳನ್ನು ಉಚ್ಚರಿಸುತ್ತಿದ್ದರು. ಮತ್ತೆ ತುಸು ವೇಳೆಯಲ್ಲಿ ವಿಚಾರದಲ್ಲಿ ತಲ್ಲೀನರಾಗುತ್ತಿದ್ದರು. ಇಷ್ಟರಲ್ಲಿ ದೂರಿನಿಂದ ತಮ್ಮ ಕಡೆಗೆ ಒಬ್ಬ ತರುಣಪುರುಷನು ಬರುತ್ತಾನೆಂಬುದನ್ನು ನೋಡಿದರು; ಅವರಿಗೆ ಸ್ವಲ್ಪ ಆಶ್ಚರ್ಯವಾಯಿತು; ಆದರೂ ತಮ್ಮ ಕಾರ್ಯವನ್ನು ನಿಲ್ಲಿಸಲಿಲ್ಲ. ಸ್ವಲ್ಪ ವೇಳೆಯಲ್ಲಿ ಆ ತರುಣನು ಇವರಿದ್ದೆಡೆಗೆ ಬಂದು ತಲ್ಪಿದನು. ಅವನ ವಯಸ್ಸು ಸುಮಾರು ೨೫ ವರ್ಷಗಳದಿರಬಹುದು. ಅವನ ಭವ್ಯಮುದ್ರೆ, ಸಾದು ಕೆಂಪು ಬಣ್ಣ, ಎತ್ತರ ನಿಲುವಿಕೆ ಇವೆಲ್ಲವೂ ನೋಡುವ ಹಾಗಿದ್ದವು. ಅವನು ಕಾವಿಯ ಬಟ್ಟೆಗಳನ್ನುಟ್ಟು ಜಡೆಗಳನ್ನು ಬಿಟ್ಟಿದ್ದನು. ಕೊರಳಲ್ಲಿ ಒಂದು ರುದ್ರಾಕ್ಷಿಯ ಮಾಲೆಯೂ ಕೈಯಲ್ಲಿ ಕಮಂಡಲುವೂ ಕಾಣುತ್ತಿದ್ದವು. ಈಗ ಅವನ ಮುಖವು ಸ್ವಲ್ಪ ಮ್ಲಾನವಾಗಿತ್ತು. ಋಷಿವರ್ಯರು ಅವನನ್ನು ಕಾಲುಬೆರಳಿನಿಂದ ನೆತ್ತಿಯವರೆಗೆ ನಿಟ್ಟಿಸಿದರು. ಆ ತರುಣನು ಭಕ್ತಿಪೂರ್ವಕವಾಗಿ ಅವರಿಗೆ ನಮಸ್ಕರಿಸಿದನು. ಋಷಿವರ್ಯರು ಆಶೀರ್ವದಿಸಿ, ಅಲ್ಲಿಯೇ ಸಿದ್ಧಗೊಳಿಸಿದ ಒಂದು ಆಸನದ ಮೇಲೆ ಕೂಡ್ರಲು ಹೇಳಿದರು. ತರುಣನು ಅಲ್ಲಿ ಕೂಡ್ರದೆ ನಮ್ರತನದಿಂದ ಕೆಳಗೆ ಕುಳಿತು ಆದರಪೂರ್ವಕವಾಗಿ ಅವರು ಮಾಡುವ ಪೂಜೆಯನ್ನು ನೋಡಹತ್ತಿದನು.

ಋಷಿವರ್ಯರ ಪೂಜೆಯ ವಿಧಾನವು ಮುಗಿಯಬೇಕಾದರೆ ಸುಮಾರು ಅರ್ಧ ಗಂಟೆ ಹಿಡಿಯಿತು. ಯುವಕನು ಶಾಂತಚಿತ್ತದಿಂದ ಆ ವೇಳೆಯನ್ನು ಕಳೆದನು. ಋಷಿವರ್ಯರು ಪೂಜೆಯನ್ನು ಮುಗಿಸಿ ತರುಣನ ಕಡೆಗೆ ಹೊರಳಿ:—

**ಋಷಿ:**— ವತ್ಸಾ, ನೀನು ದಣಿದಂತೆ ಕಾಣುವಿ.

**ತರುಣ:**— (ನಮ್ರತೆಯಿಂದ) ಸ್ವಾಮೀ, ನನಗೆ ಏನೂ ದಣಿಕೆಯಾಗಿಲ್ಲ.

**ಋಷಿ:**—ನಿನ್ನ ಸ್ನಾನವಾದಂತೆ ಕಾಣುತ್ತದೆ. ಆದದರಿಂದ ದೇವರ ದರ್ಶನವನ್ನು ತೆಗೆದುಕೋ.

ಋಷಿವರ್ಯರು ತನಗೆ ದೇವರ ಸೇವೆಯನ್ನು ಒಮ್ಮೆಂದೊಮ್ಮೆ ಮಾಡೆಂದು ಅಂದದ್ದನ್ನು ಕೇಳಿ ತರುಣನಿಗೆ ತುಂಬಾ ಆನಂದವಾಯಿತು. ಅವನು ದೇವರಿಗೆ ತುಲಸೀಪುಷ್ಪಾದಿಗಳನ್ನು ಸಮರ್ಪಿಸಿ ನಮಸ್ಕರಿಸಿದನು.

**ಋಷಿ:**—ಇಂಥ ನಿರ್ಜನವನಕ್ಕೆ ನೀನು ಏತಕ್ಕೋಸುಗ ಬಂದಿರುವಿ ?

**ತರುಣ:** – (**ಮೋರೆಯನ್ನು ಕೆಳಗೆಮಾಡಿ**) ನನಗೆ ಸಂಸಾರದಲ್ಲಿ ಮನಸ್ಸಿಲ್ಲದಾಗಿದೆ.

**ಋಷಿ:**—ನಿನ್ನಂಥ ಸುಂದರತರುಣನಿಗೆ ಸಂಸಾರದಲ್ಲಿ ಅನುತಾಪವೇ ! ಹಾಗು ಬೇಸರವೇ ! ತುಂಬಾ ಆಶ್ಚರ್ಯ!

**ತರುಣ:**—ಆಶ್ಚರ್ಯವೇತಕ್ಕೆ ?

**ಋಷಿ:**— ಇಂಥ ತರುಣವಯಸ್ಸಿನಲ್ಲಿ ಸಂಸಾರವು ಬೇಸರವಾಗಲು ಏನಾದರೂ ಬಲವಾದ ಕಾರಣವಿರಲಿಕ್ಕೆ ಬೇಕು. ತಾರುಣ್ಯದಲ್ಲಿ ಸಂಸಾರವು ಪ್ರತಿ ಸ್ವರ್ಗದಂತೆ! ನೀನು ಸುಂದರನಿರುವಿ, ತೇಜಸ್ವಿಯಿರುವಿ, ಸುದೃಢನಿರುವಿ; ಇಂಥ ನಿನಗೆ ಸಂಸಾರವು ಆನಂದಮಯವಾಗಿರಲಿಕ್ಕೆ ಬೇಕು. ಏನಾದರೂ ನಿನ್ನ ಮನಕ್ಕೆ ತಾಪವಾಗಿದೆಯೆಂದು ನಿನ್ನ ಮುಖಮುದ್ರೆಯೇ ಹೇಳುತ್ತದೆ.

**ತರುಣ:**—ನಿಮ್ಮ ಹೇಳಿಕೆಯಂತೆ ನನ್ನ ಸ್ಥಿತಿಯಿದ್ದದ್ದು ನಿಜ; ಕೆಲವು ದಿವಸಗಳಿಂದ ನನ್ನ ಮನಸ್ಸು ಐಹಿಕಸುಖದಿಂದ ತಿರುಗಿ ಪಾರಮಾರ್ಥಸುಖದ ಕಡೆಗೆ ಹೋಗಿದೆ. ಆದದರಿಂದಲೇ ಒಬ್ಬ ಒಳ್ಳೆಯ ಗುರುವಿನ ಶೋಧಾರ್ಥವಾಗಿ ಇಂಥ ಅರಣ್ಯದಲ್ಲಿ ಬಂದಿರುವೆನು. ತಾವುಗಳು ಕೃಪೆಮಾಡಿದರೆ ನಾನು ಧನ್ಯನಾಗುವೆನು. ನನ್ನ ಕಾರ್ಯವು ಕೈಗೂಡಿದಂತಾಗುವದು.

**ಋಷಿ:**— ಐಹಿಕಸುಖಕ್ಕಿಂತ ಪಾರಮಾರ್ಥ ಸುಖವು ಹೆಚ್ಚಿನದೆಂದು ನೀನು ಹೇಳುವಿ. ಐಹಿಕಸುಖದಲ್ಲಿ ನೂರೆಂಟು ತೊಂದರೆಗಳಿವೆಯೆಂದೂ, ಪಾರಮಾರ್ಥದಲ್ಲಿ ತೊಂದರೆಗಳಿಲ್ಲವೆಂದೂ ನಿನ್ನ ಕಲ್ಪನೆ ಏನು ?

**ತರುಣ**:—ಹಾಗೇನಿಲ್ಲ. ಪಾರಮಾರ್ಥದಲ್ಲಿಯೂ ನೂರೆಂಟು ತೊಂದರಿಗಳಿವೆಯೆಂಬುದು ನನಗೆ ಗೊತ್ತಿದೆ.

**ಋಷಿ:**—ಹೌದಲ್ಲೋ ! ಹಾಗಾದರೆ ಸಂಸಾರಕ್ಕಿಂತಲೂ ಪಾರಮಾರ್ಥವು ಶ್ರೇಷ್ಠವೆಂದು ಯಾಕೆ ತಿಳಿದಿ ? ಎರಡರಲ್ಲಿಯೂ ತೊಂದರೆಗಳಿವೆಯೆಂಬುದು ನಿನಗೆ ಸಮ್ಮತವಾಗಿದೆ. ಹಾಗಾದರೆ ಯಾವ ಮಾರ್ಗವು ಹೆಚ್ಚು ಕಷ್ಟಮಯವಾಗಿದೆಯೆಂಬದನ್ನು ನೀನು ವಿಚಾರಿಸಿರುವೆಯಾ ?

**ತರುಣ**:—(ಸ್ವಲ್ಪ ಆಲೋಚಿಸಿ), ಪಾರಮಾರ್ಥವನ್ನು ಸಾಧಿಸುವದು ಸ್ವಲ್ಪ ಕಷ್ಟಕರವೆಂದು ಅನಿಸುತ್ತದೆ.

**ಋಷಿ:**—ಹಾಗಾದರೆ ಇಂಥ ಕಠಿಣಮಾರ್ಗದ ಕಡೆಗೆ ಮನಸ್ಸು ಏಕೆ ಹಾಕಿರುವಿ ? ಪಾರಮಾರ್ಥದ ಮಾರ್ಗ ಹಿಡಿಯುವಕ್ಕಿಂತಲೂ ಸಂಸಾರಮಾಡುವದು ಸುಲಭವು. ಇದು ನಿನಗೆ ಗೊತ್ತಿಲ್ಲವೇ ?

**ತರುಣ**:—ಋಷಿವರ್ಯ, ಹೇಳಿ ಕೇಳಿ ನಾನು ಅಜ್ಞಾನಿಯು. ತಮ್ಮಂಥವರಿಗೆ ಸಮರ್ಪಕವಾದ ಉತ್ತರವನ್ನು ಕೊಡುವದು ನನ್ನಂಥ ಅಲ್ಪನ ಯೋಗ್ಯತೆಯದಲ್ಲ. ನಿಮಗೆ ನಾನು ಬೇಡಿಕೊಳ್ಳುವದೇನಂದರೆ—ನನ್ನನ್ನು ತಾವು ದೂರೀಕರಿಸದೆ, ತಮ್ಮ ಅಮೋಘವಾದ ಉಪದೇಶಾಮೃತದಿಂದ ಪಾವನನನ್ನಾಗಿ ಮಾಡಬೇಕು.

**ಋಷಿ**:—( ಪ್ರೇಮದಿಂದ ) ಮಗು, ನಿನ್ನನ್ನು ಹೀಗಿಯೇ ತಿರುಗಿ ಕಳಿಸಬೇಕೆಂದು ನಾನು ಇಚ್ಛಿಸುವದಿಲ್ಲ. ಆದರೆ ನೀನು ಯಾವ ಮಾರ್ಗವನ್ನು ಈಗ ಹಿಡಿದಿರುವಿಯೋ, ಅದನ್ನು ಪೂರ್ಣ ವಿಚಾರಮಾಡಿ ಹಿಡಿದಿರುವಿಯೋ ಹೇಗೆಂಬದನ್ನು ತಿಳಿದುಕೊಳ್ಳುವ ಸಲುವಾಗಿ ಹೀಗೆ ವಿಚಾರಿಸಿದೆನು. ಸಂಸಾರದಲ್ಲಿಯ ಕೆಲವು ತೊಂದರೆಗಳನ್ನು ನೋಡಿ ತರುಣರ ಮನಸ್ಸು ತಿರುಗುತ್ತದೆ. ಅಂಥ ಪ್ರಸಂಗದಲ್ಲಿ ಅವರು ಕರ್ತವ್ಯಪರಾಙ್ಮುಖರಾಗುವದು ತರವಲ್ಲ. ಇಂಥ ಚಂಚಲ ತರುಣರು ಅತ್ತಲಿತ್ತ ಅಲೆದಾಡಿ ಕಟ್ಟಕಡೆಗೆ ಎಲ್ಲಿಯಾದರೂ ಬಿದ್ದು ಬೆಂಡಾಗಿ ಹೋಗುವರು. ಇರಲಿ. ಸುಖದ ವಿಷಯಕ್ಕೆ ನಿನ್ನ ಕಲ್ಪನೆಯಾದರೂ ಏನಿರುವದು? ಹೇಳು.

**ತರುಣ**:—ನಿಜವಾಗಿಯೂ ಈ ವಿಚಾರವನ್ನು ನಾನು ಮಾಡಿಲ್ಲ.

**ಋಷಿ** :— ಆದದರಿಂದಲೇ ಸಂಸಾರವು ತಾಪದಾಯಕವೆಂದು

ಕಲ್ಪನೆಮಾಡಿಕೊಂಡು ನೀನು ಅತ್ತಲಿತ್ತ ಅಲೆದಾಡಹತ್ತಿರುವಿ. ( ಒಂದುದಿಕ್ಕಿಗೆ ಬೆರಳು ಮಾಡಿ ತೋರಿಸಿ) ಅಗೋ! ಅಲ್ಲಿ ನೋಡು! ಎರಡು ಗಿಡಗಳಿವೆ. ಒಂದು ಮಾವಿನ ಗಿಡ, ಮತ್ತೊಂದು ಬೇವಿನ ಗಿಡ. ಈ ಎರಡೂ ಗಿಡಗಳು ಒಂದೇ ಭೂಮಿಯಲ್ಲಿ ಹುಟ್ಟಿ ರುತ್ತವೆ. ಒಂದೇ ತರದ ನೀರುಗಾಳಿಗಳು ಅವುಗಳಿಗೆ ಸಿಗುತ್ತವೆ. ಆದರೆ ಒಂದು ಗಿಡದ ಹಣ್ಣುಗಳು ತಿನ್ನಲು ಬರುತ್ತವೆ. ಮತ್ತೊಂದರವು ಬರುವದಿಲ್ಲ. ಇದರ ಕಾರಣವು ಗಿಡದ ಗುಣವೇ ಎಂಬದು ಸ್ಪಷ್ಟವಿದೆ. ಸುಖವೂ ಇದರಂತೆ. ಸಂಸಾ ರದಲ್ಲಿದ್ದು ಪಾರಮಾರ್ಥದ ಸಾಧನ ಮಾಡಲು ಬರುತ್ತದೆ. (ಮುಗಿಲ ಕಡೆಗೆ ನೋಡಿ) ಓಹೋ, ವೇಳೆಯಾಯಿತು. ಇರಲಿ. ಈಗ ಉಪಹಾರಕ್ಕೆ ಹೋಗುವ ನಡೆ.

ಇಬ್ಬರೂ ಉಪಹಾರಕ್ಕೆ ಕುಳಿತುಕೊಂಡರು. ಅಲ್ಲಿಯೂ ಮಾತುಕಥೆ ಗಳು ನಡೆದವು. ತರುಣನನ್ನು ಚೆನ್ನಾಗಿ ಪರೀಕ್ಷಿಸಿದರು. ಕೊನೆಯಲ್ಲಿ ಅವನಿಗೆ ಉಪದೇಶ ಕೊಡಲು ಸಮ್ಮತಿಬಟ್ಟರು.

( ೨ )

ಸುಮಾರು ಒಂದು ತಿಂಗಳಾಯಿತು. ತರುಣನು ಭಕ್ತಿಯಿಂದಲೂ, ಪೂರ್ಣಶ್ರದ್ಧೆಯಿಂದಲೂ ಋಷಿವರ್ಯರ ಸೇವೆಯನ್ನು ಮಾಡುತ್ತಿದ್ದನು. ಅವರ ವಾತ್ಸಲ್ಯವು ಇವನ ಮೇಲೆ ಚೆನ್ನಾಗಿ ಕೂತಿತು. ಒಂದು ದಿವಸ ಅವರು ತರುಣನನ್ನುದ್ದೇಶಿಸಿ “ವತ್ಸಾ, ನಿನ್ನ ಮನಸ್ಸು ಸಂಸಾರದಿಂದ ನಿಜವಾಗಿ ವಿಮುಖ ವಾಗಿರುವದೆಂದು ನಿನ್ನ ನಡೆನುಡಿಗಳ ಮೇಲಿಂದ ಚೆನ್ನಾಗಿ ಮನವರಿಕೆಯಾ ಯಿತು. ಆದದರಿಂದ ನಾಳಿನ ದಿವಸ ನಿನಗೆ ಗುರೂಪದೇಶವನ್ನು ಕೊಡಬಹು ದೇನೋ ನೋಡುವ. ”

ಗುರುವರ್ಯರ ಕೃಪೆಯು ತನ್ನ ಮೇಲೆ ಆಯಿತೆಂದು ತಿಳಿದು ತರುಣನು ಸಂತೋಷಸಾಗರದಲ್ಲಿ ಈಸಾಡಹತ್ತಿದನು. ಬೆಳಗು ಹೇಗಾದೀತೆಂದು ಅವನು ಎಣಿಕೆಹಾಕಹತ್ತಿದನು. ಆ ದಿನವನ್ನು ಅನೇಕಪ್ರಕಾರದ ಆಲೋಚನೆಗಳಲ್ಲಿ ಕಳೆದನು. ಆದರೆ ಗುರುವರ್ಯರು “ ನೋಡುವ ” ಎಂಬ ಶಬ್ದವನ್ನು ಏಕೆ ಉಪಯೋಗಿಸಿದರೆಂಬುದು ಅವನಿಗೆ ಹೊಳೆಯದಾಯಿತು.

ಆ ದಿನವನ್ನು ಹಾಗೂ ಹೀಗೂ ಕಳೆದನು. ಬೆಳಗಾಯಿತು. ತರುಣನ ಮುಖಮಂಡಲವು ತುಂಬ ಆನಂದಿತವಾಗಿತ್ತು. ಆದರೆ ಅವನು ಗುರುವರ್ಯರ ಕಡೆಗೆ ನೋಡಲು, ಅವರ ಮುಖಮುದ್ರೆಯು ಗಂಭೀರವಾಗಿದ್ದು, ಚಿಂತೆ

ಗೀಡಾದಂತೆ ಕಾಣಿಸಿತು. ಅದನ್ನು ನೋಡಿ ತರುಣನ ಮನಸಿಗೆ ಹೇಗೆ ಹೇಗೋ ಆಯಿತು. ಇಬ್ಬರೂ ತಮ್ಮ ತಮ್ಮಕಾರ್ಯದಲ್ಲಿ ತೊಡಗಿದರು. ಅವರಿಬ್ಬರ ಮನಸ್ಸಿಗೂ ಸೊಗಸಿದ್ದಿಲ್ಲ. ಇಂದಿನ ವರೆಗೂ ಗುರುವರ್ಯರು ಚಿಂತಾಕ್ರಾಂತರಾಗಿದ್ದದ್ದನ್ನು ತರುಣನು ಎಂದೂ ನೋಡಿದ್ದಿಲ್ಲ. ಆದರೆ ಈ ಹೊತ್ತು ಅವರ ಮುಖವು ಹೀಗೇಕೆ ಬಾಡಿರುವದು ? ನನ್ನಿಂದ ಏನಾದರೂ ಪ್ರಮಾದವಾಗಿರುವದೋ ?...... ಎಂಬ ನಾನಾ ಬಗೆಯ ವಿಚಾರಗಳು ಮನದಲ್ಲಿ ಬಂದು ಅವನ ಮನಸ್ಸು ತುಂಬ ಅಸ್ವಸ್ಥವಾಯಿತು. ತಮ್ಮ ಮನಸ್ಸು ಹೀಗೇಕೆ ಆಗಿರುವದೆಂದು, ಋಷಿವರ್ಯರನ್ನು ವಿಚಾರಿಸಲೋ ಹೇಗೆ ? ಎಂದು ಎಣಿಕೆಹಾಕಹತ್ತಿದನು. ಅಷ್ಟರಲ್ಲಿ ಉಪಹಾರದ ವೇಳೆಯಾಯಿತು. ಗುರುಶಿಷ್ಯರಿಬ್ಬರೂ ಅದಕ್ಕಾಗಿ ತೆರಳಿದರು.

ಉಪಹಾರವಾದ ಕೂಡಲೇ ಸ್ವಲ್ಪ ವಾಮಕುಕ್ಷಿಯಾಗುವದು ಋಷಿವರ್ಯರ ಪದ್ಧತಿಯಾಗಿತ್ತು. ಆದರೆ ಈ ಹೊತ್ತು ಹಾಗೆ ಮಾಡದೆ ವಿಚಾರಮಾಡುತ್ತ ಕುಳಿತುಕೊಂಡರು. ತರುಣನು ಹತ್ತರವೇ ಕುಳಿತುಕೊಂಡು ಅವರ ಮುಖವನ್ನು ನೋಡುತ್ತಿದ್ದನು. ಈ ಸಂಧಿಯೇ ಗುರುವರ್ಯರನ್ನು ಕೇಳಿಕೊಳ್ಳುವದಕ್ಕೆ ಚೆನ್ನಾಗಿದೆಯೆಂದು ತರುಣನು ಆಲೋಚಿಸುವಷ್ಟರಲ್ಲಿಯೇ ಅವರು ತರುಣನನ್ನು ಕುರಿತು:— “ ವತ್ಸಾ, ನಾನು ನಿನಗೊಂದು ಆಜ್ಞೆಯನ್ನು ಮಾಡಬೇಕೆಂದಿದ್ದೇನೆ. ಅದನ್ನು ಬಹಳೇ ಲಕ್ಷ್ಯಪೂರ್ವಕವಾಗಿ ಪಾಲಿಸಬೇಕು. ಕಂಡೆಯಾ ? ”

**ತರುಣ:**— ಗುರುಗಳೇ ಆ ಆಜ್ಞೆಯನ್ನು ಪೂರ್ಣಶ್ರದ್ಧೆಯಿಂದ ಪಾಲಿಸುತ್ತೇನೆ.

**ಋಷಿ:**— ತಪ್ಪುವದಿಲ್ಲವೇ ನೋಡು !

**ತರುಣ:**— ಎಂದೂ ಇಲ್ಲ !

**ಋಷಿ:**— ಹಾಗಾದರೆ ನಾನು ಹೇಳುವದನ್ನು ಚೆನ್ನಾಗಿ ಲಕ್ಷ್ಯದಲ್ಲಿಡು. ಸ್ವಲ್ಪ ಆಲೋಚಿಸಿ ) ಇಲ್ಲಿಂದ ನಾಲ್ಕು ಹರದಾರಿಯ ಮೇಲೆ ಒಂದು ಪಟ್ಟಣವಿದೆ. ಆ ಪಟ್ಟಣಕ್ಕೆ ಹೋಗು. ಅಲ್ಲಿ ವಿಶ್ವಮೋಹಿನಿ ಎಂಬ ಹೆಸರಿನ ಒಬ್ಬ ವೇಶ್ಯೆಯು ಇರುವಳು. ಅವಳ ಗೊತ್ತು ಹಚ್ಚು. ಮತ್ತು ಒಂದು ಸಂಪೂರ್ಣ ರಾತ್ರಿಯನ್ನು ಅವಳ ಮನೆಯಲ್ಲಿಯೇ ಕಳೆದು, ಮರುದಿನ ಮುಂಜಾವಿನಲ್ಲಿ ನನ್ನ

ಕಡೆಗೆ ತಿರುಗಿ ಬಾ. ಹೋಗು. ವಚನಕೊಟ್ಟ ಮೇರೆಗೆ ಮಾಡು. ಏನನ್ನೂ ವಿಚಾರಿಸಬೇಡ.

ಗುರುವರ್ಯರ ಇಂಥ ಕಡುತರವಾದ ಆಜ್ಞೆಯನ್ನು ಕೇಳಿ ತರುಣನಿಗೆ ತುಂಬಾ ಆಶ್ಚರ್ಯವಾಯಿತು. ಅವನು ಆಶ್ಚರ್ಯಚಕಿತ ಮುದ್ರೆಯಿಂದ ಗುರುವಿನ ಮುಖದ ಕಡೆಗೆ ನೋಡಹತ್ತಿದನು.

**ಋಷಿ:**—(ತೀವ್ರ ಸ್ವರದಿಂದ) ಹೊರಡು. ಹೊರಡು. ನನ್ನಾಜ್ಞೆಯನ್ನು ಮನ್ನಿಸುವಂತಿದ್ದರೆ ಬೇಗನೆ ಹೊರಟು ನಡೆ.

ತರುಣನು ವಚನಕೊಟ್ಟದ್ದರಿಂದ ಹೆಚ್ಚಿಗೆ ಏನೂ ಮಾತಾಡಲು ಬರುವಂತಿದ್ದಿಲ್ಲ. ಗುರುವರ್ಯರ ಪಾದಗಳಿಗೆ ವಂದಿಸಿದನು. ಗುರುವರ್ಯರು ಆಶೀರ್ವದಿಸಿದರು. ತರುಣನು ತನ್ನ ಕಮಂಡಲುವನ್ನು ತೆಗೆದುಕೊಂಡು ವಿಷಣ್ಣ ಚಿತ್ತದಿಂದ ಆಶ್ರಮದಿಂದ ಹೊರಬಿದ್ದನು. ಅವನು ನೆಟ್ಟಗೆ ಅಲ್ಲಿದ್ದ ಸರೋವರದ ಕಡೆಗೆ ಹೋಗಿ ಒಂದು ಗಿಡದ ಕೆಳಗೆ ಕುಳಿತುಕೊಂಡು ಹೀಗೆ ವಿಚಾರಮಾಡಹತ್ತಿದನು.

“ ಗುರುವರ್ಯರು ಇಂಥ ಚಮತ್ಕಾರಿಕವಾದ ಮತ್ತು ಅಯೋಗ್ಯವಾದ ಆಜ್ಞೆಯನ್ನು ಏಕೆ ಮಾಡಿರಬಹುದು ? ನನ್ನ ಮನಸ್ಸನ್ನು ಪರೀಕ್ಷಿಸುವಪಕ್ಕೋಸ್ಕರವೇ ಇಂಥ ಆಜ್ಞೆಯನ್ನು ಮಾಡಿರಬಹುದೋ? ಏನೇ ಇರಲಿ. ಅವರ ಆಜ್ಞೆಯನ್ನು ಪಾಲಿಸುವದು ನನ್ನ ಆದ್ಯಕರ್ತವ್ಯವು. ಆದರೆ ನನ್ನ ಈ ವೇಷದಿಂದ ಪಟ್ಟಣಕ್ಕೆ ಹೋಗಿ ವೇಶ್ಯೆಯ ಮನೆಯನ್ನು ಹುಡುಕಹತ್ತಿದರೆ ಜನರು ಏನಂದಾರು ನನಗೆ ? ಸಾಧುಜನರ ವಿಷಯಕ್ಕೆ ಎಷ್ಟು ಪ್ರತಿಕೂಲವಾದೀತು ? ಜನರ ಮತವು ಮುಂದೆ ಸಾಧುಜನರ ಸತ್ಕಾರಗಳನ್ನು ಯಾರೊಬ್ಬರೂ ಮಾಡಲಿಕ್ಕಿಲ್ಲ. ಸನ್ಯಾಸಿ ಪದಕ್ಕೆ ದೊಡ್ಡ ಪೆಟ್ಟು ತಗಲುವ ಸಂಭವವಿದೆ. ಆದದರಿಂದ ಈ ವೇಷವನ್ನು ಬದಲಿಸಲಿಕ್ಕೆ ಬೇಕು. ನಾನು ಅವಳಲ್ಲಿಗೆ ಹೋಗಿ ಪೂರ್ಣ ರಾತ್ರಿಯನ್ನು ಅಲ್ಲಿಯೇ ಕಳೆಯಬೇಕಾದರೆ, ಅಲ್ಲಿ ಅವಳ ಕೂಡ ಹೇಗೆ ನಡೆಯಬೇಕು ? ...... ಮೊದಲಾದವುಗಳ ವಿಷಯದಲ್ಲಿ ಋಷಿವರ್ಯರು ಏನೂ ಹೇಳಲಿಲ್ಲವಲ್ಲ ! ಪೂರ್ಣರಾತ್ರಿಯವರೆಗೆ ಅಲ್ಲಿದ್ದು ನಾನು ಮಾಡುವದಾದರೂ ಏನು ? ಅಲ್ಲಿಯ ಪರಿಸ್ಥಿತಿಯನ್ನು ಕಂಡು ನನ್ನ ಮನಸ್ಸು ಚಂಚಲವಾಗಲಿಕ್ಕಿಲ್ಲವಷ್ಟೇ ? ನನ್ನ ಮೇಲೆ ದೊಡ್ಡ ಕಠಿನಪ್ರಸಂಗವೇ ಬಂದಿತು. ದೇವರು ಏನು ಮಾಡಿಸುವನೋ ಮಾಡಿಸಲಿ. ಎಲ್ಲ ಭಾರವು ಅವನ ಮೇಲೆಯೇ ಇದೆ. ”

ಇಷ್ಟರಲ್ಲಿ ಸಂಜೆಯು ೫ ಘಂಟೆಯಾಗಿ ಹೋಗಿತ್ತು. ಸೂರ್ಯನಾರಾಯಣನು ಪಶ್ಚಿಮದಿಕ್ಕಿನ ಕಡೆಗೆ ಪ್ರವಾಸಕ್ಕೆ ಹೊರಟಿದ್ದನು. ಆದರೂ ಬಿಸಿಲು ಚೆನ್ನಾಗಿತ್ತು. ಸರೋವರದ ಸೊಬಗು ನೋಡುವಹಾಗಿತ್ತು. ಎಲ್ಲ ಕಡೆಗೂ ಶಾಂತಿಸಾಮ್ರಾಜ್ಯವು ಹಬ್ಬಿತ್ತು. ತರುಣನು ಅಲ್ಲಿಂದೆದ್ದು ತನ್ನ ಕಾರ್ಯಕ್ಕಾಗಿ ಹೊರಟನು. ಮಾರ್ಗದ ಎಡಬಲಕ್ಕೆ ಗಿಡಗಳ ಸಾಲುಗಳಿದ್ದದರಿಂದ ಅವನಿಗೆ ಬಿಸಲಿನ ತಾಪವಾಗುವ ಹಾಗಿದ್ದಿಲ್ಲ. ಆದರೂ ಅವನ ಮುಖವು ಮ್ಲಾನವಾಗಿತ್ತು. ಈಗಿದ್ದ ವೇಷವನ್ನು ಬಿಟ್ಟು ಮತ್ತೊಂದು ವೇಷವನ್ನು ಧರಿಸಿ ಊರಲ್ಲಿ ಪ್ರವೇಶ ಮಾಡಬೇಕೆಂದು ಅವನ ಮನಸ್ಸಿನಲ್ಲಿತ್ತು. ಆದರೆ ಎರಡನೆಯ ವೇಷವನ್ನು ಹಾಕಿಕೊಳ್ಳುವದಾದರೂ ಹೇಗೆ! ಅವನ ಬಳಿಯಲ್ಲಿ ದ್ರವ್ಯವೂ ಇದ್ದಿಲ್ಲ. ಬಟ್ಟೆಬರೆಗಳೂ ಇದ್ದಿಲ್ಲ.

( ೩ )

ವಿಚಾರಮಾಡುತ್ತ ಮಾಡುತ್ತ ಮೆಲ್ಲನೆ ಹಾದಿಯ ನಡೆಯುತ್ತಿರುವಷ್ಟರಲ್ಲಿ ಸೂರ್ಯಾಸ್ತದ ಸುಮಾರಕ್ಕೆ ಆ ಪಟ್ಟಣಕ್ಕೆ ಬಂದು ಮುಟ್ಟಿದನು. ವೇಷವನ್ನು ಬದಲು ಮಾಡುವದು ಶಕ್ಯವಿಲ್ಲದ್ದರಿಂದ ಅದೇ ವೇಷದಿಂದಲೇ ಪಟ್ಟಣದಲ್ಲಿ ಹೊಕ್ಕನು. ಆ ಪಟ್ಟಣವು ಚೆನ್ನಾಗಿ ಸಿಂಗರಿಸಲ್ಪಟ್ಟಿತ್ತು. ಜನರ ಸ್ಥಿತಿಗತಿಯು ಮೇಲಿಂದ ನೋಡಲು ಅಲ್ಲಿಯವರು ಧನಕನಕಸಂಪನ್ನರಿದ್ದಂತೆ ತೋರುತ್ತಿತ್ತು. ನಮ್ಮ ಈ ತರುಣನು ಬೀದಿಯಲ್ಲಿ ಅತ್ತಲಿತ್ತ ನೋಡುತ್ತ ವಿಚಾರಮಾಡುತ್ತ ನಡೆದಿದ್ದನು.

ವಿಶ್ವಮೋಹಿನಿಯ ಮನೆಯನ್ನು ಹೇಗೆ ಗೊತ್ತು ಹಚ್ಚಬೇಕು? ಅದಕ್ಕೋಸ್ಕರ ಯಾರನ್ನು ಕೇಳಬೇಕು ? ಇದೊಂದು ದೊಡ್ಡ ಚಿಂತೆಯಲ್ಲಿ ಬಿದ್ದನು. ಹೋಗಿ ಬರುವ ಜನರ ಕಡೆಗೆ ಅವನು ಲಕ್ಷ್ಯಪೂರ್ವಕವಾಗಿ ನೋಡುತ್ತಿದ್ದನು. ಯಾವಾದರೊಬ್ಬ ಸಭ್ಯ ಗೃಹಸ್ಥರು ಭೆಟ್ಟಿಯಾದರೆ ವಿಶ್ವಮೋಹಿನಿಯ ಮನೆಯೆಲ್ಲಿದೆಯೆಂದು ಕೇಳಬೇಕೆಂದು ಅವನ ಮನದಲ್ಲಿ ವಿಚಾರ ಬರುತ್ತಿತ್ತು; ಅಷ್ಟರಲ್ಲಿಯೇ ಆ ಗೃಹಸ್ಥರು ಎಲ್ಲಿ ಏನಾದರೂ ವಿಪರೀತ ತಿಳಿದುಕೊಳ್ಳುವರೋ ಏನೋ, ಎಂದು ಎನಿಸುತ್ತಿತ್ತು. ಹೀಗೆ ಎರಡು ಪ್ರಕಾರದ ವಿಚಾರಗಳು ಅವನ ಮನಸ್ಸಿನಲ್ಲಿ ತಾಕಲಾಡುತ್ತಿದ್ದವು. ಅಷ್ಟರಲ್ಲಿ ಸೂರ್ಯಾಸ್ತವಾಯಿತು.

ಆ ವೇಶ್ಯೆಯ ಮನೆಯನ್ನು ಗೊತ್ತುಹಚ್ಚುವದರಲ್ಲಿಯೇ ಎಷ್ಟೋ ವೇಳೆಯಾಯಿತು. ಶುಕ್ಲಪಕ್ಷದ ದಿವಸವಿದ್ದದರಿಂದ ಆಕಾಶದಲ್ಲಿ ಚಂದ್ರನು ಉದಯು

ವಾಗಿದ್ದನು. ಮತ್ತು ಭೂಮಿಯಮೇಲೆ ತನ್ನ ಶಾಂತವಾದ ಕಿರಣಗಳನ್ನು ಕೆಡವಿದ್ದನು. ಕಟ್ಟಕಡೆಗೆ ತರುಣನು ಮನೋನಿಶ್ಚಯಮಾಡಿ ಅಲ್ಲಿಯೇ ಹೋಗುವ ಓರ್ವ ಮನುಷ್ಯನನ್ನು-"ವಿಶ್ವಮೋಹಿನಿ ಎಂಬ ವೇಶ್ಯೆಯ ಮನೆಯು ಎಲ್ಲಿರುವದು?" ಎಂದು ಕೇಳಿದನು. ಆ ಮನುಷ್ಯನು ಒಂದು ಸಲ ಈ ತರುಣನ ಕಡೆಗೆ ಲಕ್ಷ್ಯಪೂರ್ವಕವಾಗಿ ನೋಡಿ-"ಈ ಬೀದಿಯಿಂದ ನೀಟಾಗಿ ಮುಂದಕ್ಕೆ ಹೋಗಿರಿ. ಅಂದರೆ ಒಂದು ದೊಡ್ಡ ಮೇಲ್ಮಾಳಿಗೆಯ ಮನೆಯು ನಿಮಗೆ ಕಾಣಿಸುವದು. ಆದರೆ ನಿಮ್ಮ ಈ ವೇಷಕ್ಕೆ ಅಲ್ಲಿ ಹೋಗುವದು ಶೋಭಿಸುವದಿಲ್ಲ!" ಹೀಗೆಂದವನೇ ಅವನು ಹೊರಟು ಹೋದನು. ತರುಣನು ಆ ಮನುಷ್ಯನ ಹೇಳಿಕೆಯಂತೆ ಅತ್ತ ಕಡೆಗೆ ನಡೆದನು.

ಸ್ವಲ್ಪ ಹೊತ್ತಿನಲ್ಲಿ ಅವನು ಒಂದು ಭವ್ಯವಾದ ಮನೆಯ ಮುಂದೆ ಹೋಗಿ ನಿಂತನು. ಮನೆಯಲ್ಲಿ ಆಳುಗಳು ಒಳ್ಳೆಯ ಗಡಬಿಡಿ ನಡೆಸಿದ್ದರು. ದೀವಿಗೆಗಳ ಚಕ ಚಕ ಪ್ರಕಾಶವು ಕಿಡಿಕೆಗಳಿಂದ ಹೊರಗೆ ಬರುತ್ತಿತ್ತು. ತರುಣನು ತುಸು ಹೊತ್ತು ಅಲ್ಲಿ ನಿಂತನು. ಮೆಲ್ಲ ಮೆಲ್ಲಗೆ ವೀಣಾವಾದ್ಯದ ಮಧುರಧ್ವನಿಯು ಅವನಿಗೆ ಕೇಳಬರಹತ್ತಿತು. ಒಳಗೆ ಗಾಯನವಾದನವು ಒಳ್ಳೆಯ ಅಟ್ಟಹಾಸದಿಂದ ನಡೆದಿರುವದೆಂದು ತರುಣನಿಗೆ ತೋರಿತು. ಹಾದಿಯಲ್ಲಿ ಹೋಗಿ ಬರುವ ಜನರು ಗುಂಪುಗುಂಪಾಗಿ ಒಳ್ಳೆಯ ಉತ್ಸುಕತೆಯಿಂದ ಅಲ್ಲಿ ನಿಂತು ಆ ಮಧುರ ಸ್ವರವನ್ನು ಕೇಳುತ್ತಿದ್ದರು. ತರುಣನು ಅವರಲ್ಲಿಯ ಒಬ್ಬನನ್ನು ಹೀಗೆ ಕೇಳಿದನು-"ಈ ಮನೆಯು ಯಾರದು ?"

"ಏಕೆ! ಈ ಮನೆಯ ಯಜಮಾನಿನಿಯು ಎಲ್ಲರಿಗೂ ಪರಿಚಯದವಳೇ ಇದ್ದಾಳೆ. ವಿಶ್ವಮೋಹಿನಿ ಎಂಬ ಹೆಸರಿನ ಪ್ರಖ್ಯಾತವೇಶ್ಯೆಯು ಇಲ್ಲಿರುವಳು. ಆದರೆ ತಾವು ಸಾಧುಗಳು, ಇಂಥ ಪ್ರಶ್ನೆಯನ್ನು ಕೇಳಬಾರದು."

ಮತ್ತೆ ಲಜ್ಜೆಯಿಂದ ತರುಣನು ಎರಡನೆಯ ಕಡೆಗೆ ಹೊರಟು ಹೋದನು.

ಅವನು ದೂರ ಹೋಗಿ ಮತ್ತೆ ಆಲೋಚಿಸಹತ್ತಿದನು. "ಈಗ ಇಲ್ಲಿ ಒಳಗೆ ಹೇಗೆ ಹೋಗಬೇಕು! ಇಷ್ಟು ಜನರು ಇಲ್ಲಿ ನಿಂತಿದ್ದಾರೆ. ಎಲ್ಲ ಕಡೆಗೂ ತುಂಬ ಚಂದ್ರಪ್ರಕಾಶವು ಬಿದ್ದಿದೆ. ಗುರುವರ್ಯ, ತಮ್ಮ ಆಜ್ಞೆಯು ಎಷ್ಟು ಕಡುತರ ಹಾಗು ಭಯಂಕರವಾಗಿದೆ!" ಹೀಗೆಂದು ಆತನು ಆಕಾಶದಲ್ಲಿ ಚಂದ್ರನ ಕಡೆಗೆ ನೋಡಿದನು. ಅತ್ತ ಕಡೆಗೆ ನೋಡುತ್ತ ಅವನು ಅಂದದ್ದು-"ಚಂದ್ರಾ,

ಕಾಮಿಗಳಿಗೆ ನೀನು ತುಂಬ ಪ್ರಿಯಕರನೆಂದೆನ್ನುವರು. ಆದರೆ ನನ್ನ ಮೇಲೆ ನಿನ್ನ ಪ್ರಯೋಗವು ಕೊಂಚವೂ ಆಗಲಾರದು ಕಂಡೆಯಾ!"...ಹೀಗೆ ಅನೇಕ ತರದ ವಿಚಾರಗಳನ್ನು ಮಾಡುತ್ತ ಅಲ್ಲಿಯೇ ನಿಂತಿದ್ದನು. ಬರಬರುತ್ತ ರಾತ್ರಿಯು ಹೆಚ್ಚಾಗಿಯಿತು. ಗುರುವರ್ಯರ ಆಜ್ಞೆಯನ್ನು ಶಿರಸಾವಹಿಸಿ ಮತ್ತು ಅವರ ಮೇಲೆಯೇ ಎಲ್ಲ ಭಾರವನ್ನು ಹಾಕಿ ಮನೆಯ ತಲೆಬಾಗಿಲ ಬಳಿಯಲ್ಲಿ ಹೋಗಿ ನಿಂತನು.

ಇಬ್ಬರು ಸುಂದರದಾಸಿಯರು ಬಾಗಿಲ ಹತ್ತರ ನಿಂತಿದ್ದರು. ಒಬ್ಬಳು ಮುಂದೆ ಬಂದು ಕೇಳಿದಳು. "ಮಹಾರಾಜ ಏನಪ್ಪಣೆ?"

ತರುಣನಲ್ಲಿ ಒಂದು ಬಗೆಯ ಸಾಮರ್ಥ್ಯವು ಸುಳಿದಂತಾಯಿತು. ಅವನು ಹೀಗೆ ನುಡಿದನು– "ವಿಶ್ವಮೋಹಿನಿಗೆ ನಾನು ಬಂದಿರುವೆನೆಂದು ತಿಳಿಸು; ಮತ್ತು ಅವಳನ್ನು ಇತ್ತಕಡೆಗೆ ಕರೆದುಕೊಂಡು ಬಾ."

ತರುಣನ ಈ ಅಪ್ಪಣೆಯನ್ನು ಕೇಳಿ ದಾಸಿಗೆ ತುಂಬ ಆಶ್ಚರ್ಯವಾಯಿತು. ದಾಸಿಯು ತರುಣನ ಕಡೆಗೆ ಅವನ ಕಾಲು ಬೆರಳಿನಿಂದ ನಡುನೆತ್ತಿಯವರೆಗೆ ಪೂರ್ಣವಾಗಿ ದಿಟ್ಟಿಸಿ ನೋಡಿದಳು. ಅವನ ಸುಂದರರೂಪವನ್ನೂ ತೇಜವನ್ನೂ ನೋಡಿ ಬೆಪ್ಪನೆ ಬೆರಗಾದಳು. ಆಗಲವಳು ತರುಣನಿಗೆ–"ತಾವು ಸ್ವಲ್ಪ ವೇಳೆ ಇಲ್ಲಿ ನಿಲ್ಲಿರಿ. ನಾನು ತಮ್ಮ ಸಮಾಚಾರವನ್ನು ಒಳಗೆ ತಿಳಿಸುವೆನು." ಹೀಗೆಂದು ಒಳಗೆ ಹೋದಳು.

ತುಸು ಹೊತ್ತಿನ ಮೇಲೆ ದಾಸಿಯು ತಿರುಗಿ ಬಂದಳು. ಮತ್ತು ಅವಳ ಬೆನ್ನ ಹಿಂದೆಯೇ ನಾಲ್ವತ್ತು ವರ್ಷದ ಸುಂದರಿಯಾದ ಹೆಂಗಸೊಬ್ಬಳು ಬಂದಳು. ಆ ಸುಂದರಿಯು ತರುಣನನ್ನು ದಿಟ್ಟಿಸಿ, ಅವನ ಸುಂದರರೂಪವನ್ನು ನೋಡಿ ಚಕಿತಳಾದಳು. ಮತ್ತು ಮಧುರವಾದ ಮೆಲ್ಲಗಿನ ದನಿಯಿಂದ "ಮಹಾರಾಜ ಅಪ್ಪಣೆಯೇನು?" ಎಂದಳು.

"ಈ ಹೊತ್ತಿನ ಸಂಪೂರ್ಣ ರಾತ್ರಿಯನ್ನು ನಿನ್ನಲ್ಲಿಯೇ ಕಳೆಯಬೇಕೆಂದು ನನ್ನ ಇಚ್ಛೆಯಿದೆ." ಎಂದು ತರುಣನು ಉತ್ತರವನ್ನಿತ್ತನು.

ತರುಣನ ಈ ಉತ್ತರವನ್ನು ಕೇಳಿ ವಿಶ್ವಮೋಹಿನಿಗೆ ತುಂಬ ಆಶ್ಚರ್ಯವಾದದ್ದಲ್ಲದೆ ಆನಂದವಾಯಿತು. ಅವಳು ತರುಣನನ್ನು ಕುರಿತು ಮಾತನಾಡಿದಳು.

"ನನ್ನ ಮೇಲೆ ತಾವು ಕೃಪೆಮಾಡಿದಿರಿ. ಆದರೆ ಇಲ್ಲಿ ತಾವು ನನ್ನ ಮನದ ಇಚ್ಛೆಯಂತೆ ನಡೆಯಲಿಕ್ಕೇ ಬೇಕು."

ತರುಣನು ಮನದಲ್ಲಿಯೇ ಆಲೋಚಿಸಹತ್ತಿದನು."ಗುರುವರ್ಯರೇ, ತಾವು ನನ್ನನ್ನು ಎಂತಹ ಸಂಕಟದಲ್ಲಿ ಕೆಡವಿದಿರಿ. ಇರಲಿ. ಇದರಿಂದ ನನ್ನನ್ನು ಉದ್ಧಾರ ಮಾಡುವವರೂ ನೀವೇ." ಹೀಗೆ ನಿಶ್ಚಯಿಸಿ ವಿಶ್ವಮೋಹಿನಿಯ ಮಾತಿಗೆ ಒಡಂಬಟ್ಟನು.

"ಹಾಗಾದರೆ ನಡೆಯಿರಿ. ಮನೆಯು ತಮ್ಮದೇ ಇದೆ." ಹೀಗೆಂದು ಅವಳು ಮುಂದೆ ಹೋಗಿ ಅವನ ಕೈಹಿಡಿದಳು. ತರುಣನಿಗೆ ಅವಳ ಕೋಮಲಕರಗಳ ಸ್ಪರ್ಶದಿಂದ ಒಂದು ತರದ ಚಮತ್ಕಾರವೆನಿಸಿತು.

ವಿಶ್ವಮೋಹನಿಯು ಅವನ ಕೈಹಿಡಿದು ಮೆಲ್ಲಮೆಲ್ಲನೆ ಅಡಿಗಳನ್ನಿಕ್ಕುತ್ತ ಒಳಗೆ ಕರೆದುಕೊಂಡು ಹೋದಳು. ಇದೆಲ್ಲವನ್ನು ಕಂಡು ಅಲ್ಲಿದ್ದ ಎಲ್ಲ ಜನರಿಗೂ ತುಂಬ ಸೋಜಿಗವೆನಿಸಿತು. ತರುಣನು ತಾನು ಎಂದೂ ನೋಡದ ನೋಟವನ್ನು ಒಳಗೆ ಕಂಡನು. ಅಲ್ಲಲ್ಲಿ ವಿಲಾಸಸುಖಕ್ಕಾಗಿ ಬೇಕಾಗುವ ಎಲ್ಲ ಸಿದ್ಧತೆಯು ಅಚ್ಚುಕಟ್ಟಾಗಿ ಕಾಣುತ್ತಿತ್ತು. ಎಲ್ಲ ಕಡೆಗೂ ಸುಗಂಧಮಯವಾಸನೆಯು ಇಡುಗಿತ್ತು. ವಿಶ್ವಮೋಹಿನಿಯು ಅವನಿಗೆ ಕಾವಿಯ ಅರಿವೆಗಳನ್ನು ತೆಗೆಯಲು ಹೇಳಿದಳು. ಆ ಮೇಲೆ ಅವನಿಗೆ ಪರಿಮಲದ್ರವ್ಯಗಳಿಂದ ಅಭ್ಯಂಗಸ್ನಾನ ಮಾಡಿಸಿದಳು.

ಅಲ್ಲಲ್ಲಿ ಸುಂದರ ತರುಣೀರತ್ನಗಳು ಥಳಥಳಿಸುತ್ತಿದ್ದವು. ಇದನ್ನೆಲ್ಲ ಕಂಡು ತರುಣನಿಗೆ ಅಸಹ್ಯವೆನಿಸಿತು. ಪುರುಷರನ್ನು ಚಂಚಲಗೊಳಿಸುವ ಮದನನು, ರಮಣೀರತ್ನಗಳ ಕಣ್ಣುಗಳಲ್ಲಿ ಹಾವಭಾವಗಳಲ್ಲಿ ವಿಲಾಸದ್ರವ್ಯಗಳಲ್ಲಿ ಇರುವನೆಂಬುದು ಎಲ್ಲರಿಗೂ ಗೊತ್ತಿದ್ದ ವಿಷಯವೇ? ಆದರೆ ನಮ್ಮ ಈ ತರುಣನ ಮೇಲೆ ಯಾವ ತರದ ವಿಕಾರದ ಪರಿಣಾಮವೂ ಆಗಲಿಲ್ಲ. ಸುಂದರ ತರುಣಿಯರು ಸ್ನಾನ ಮಾಡಿಸುತ್ತಿದ್ದಾಗ ತರುಣನು–

"ದೇವಾ! ನನ್ನ ಮನಸ್ಸನ್ನು ಚಂಚಲಗೊಳಿಸಬೇಡ" ಎಂದು ಮನದಲ್ಲಿ ಧ್ಯಾನಮಾಡುತ್ತಿದ್ದನು. ಪ್ರಿಯವಾಚಕರೇ, ಗುರುವರ್ಯರ ಕೃಪೆಯೇ ಅಂತಹದೆನ್ನಿರಿ ಅಥವಾ ತರುಣನ ಮನೋದಾರ್ಢ್ಯವೇ ಹಾಗಿತ್ತೆನ್ನಿರಿ; ಅವನ ಮೇಲೆ ಮದನನ ಬಾಣಪ್ರಯೋಗವು ಮಾತ್ರ ಆಗಲಿಲ್ಲ!

ವಿಶ್ವಮೋಹಿನಿಯು ಒಂದೇ ಸವನೇ ಅವನ ಮುಖಲಕ್ಷಣದ ಕಡೆಗೆ ನೋಡುತ್ತಿದ್ದಳು. ಅವನ ಗಂಭೀರಮುದ್ರೆಯನ್ನು ನೋಡಿ ಅವಳಿಗೆ ಬಹಳೇ ಆಶ್ಚರ್ಯವಾಯಿತು. ಸ್ನಾನವಾದ ಕೂಡಲೇ ಅವನಿಗೆ ಪಂಚಪಕ್ವಾನ್ನಗಳ

ಭೋಜನವನ್ನು ಮಾಡಿಸಿದಳು. ಆ ಮೇಲೆ ವಿಶ್ವಮೋಹಿನಿಯು ಅವನನ್ನು ಕರೆದು ಕೊಂಡು ಒಂದು ಸುಂದರವಾದ ರಮಣೀಯವಿಲಾಸದ್ರವ್ಯಗಳ ಆಗರದಿಂದ ಶೋಭಿಸುವ ಕೋಣೆಯಲ್ಲಿ ಹೋದಳು. ಅಲ್ಲಿಯೇ ಇದ್ದ ಒಂದು ಮಂಚದಮೇಲೆ ಕೂಡ್ರಲು ತರುಣನಿಗೆ ಹೇಳಿದಳು. ಅವನು ಕುಳಿತ ಕೂಡಲೆ ಅವಳು ಹೀಗೆಂದಳು.

"ಮಹಾರಾಜರೇ, ನನಗೆ ಸುಂದರಿಯಾದ ಒರ್ವ ಧರ್ಮಕನ್ಯೆ ಇರುವಳು. ಅವಳು ಈಗ ಪ್ರೌಢಾವಸ್ಥೆಗೆ ಬಂದಿದ್ದಾಳೆ. ಅವಳನ್ನು ನಾನು ನನ್ನ ಕಾರ್ಯ ದಲ್ಲಿ ತೊಡಗಿಸಬೇಕೆಂದು ಮಾಡಿದ್ದೇನೆ. ಆದರೆ ಇದಕ್ಕೂ ಮೊದಲು, ನಿಮ್ಮಂಥ ಸುಸ್ವರೂಪದ ಮತ್ತು ರಾಜಪಿಂಡದಿಂದ ತುಂಬಿದ ಪುರುಷರ ಸೇವೆಯನ್ನು ಮಾಡಲು ನನ್ನ ಕಂದಮ್ಮನಿಗೆ ಸಿಗಲಿ ಎಂದು ನನ್ನ ಉದ್ದೇಶವಿತ್ತು; ಆದದರಿಂದ ನಾನು ನನ್ನ ದಾಸಿಯರಲ್ಲಿ ಒಬ್ಬಳನ್ನು ಅಂಥ ಪುರುಷರ ಶೋಧಮಾಡುವದಕ್ಕಾಗಿ ಕಳಿಸಿಕೊಟ್ಟಿದ್ದೆನು. ಆದರೆ ಅಂಥ ಪುರುಷರ ಶೋಧವಾಗಲಿಲ್ಲ. ದೇವರ ಅನುಗ್ರಹದಿಂದ ಅಕಸ್ಮಾತ್ತಾಗಿ ತಾವು ಬಂದದ್ದರಿಂದ ನನ್ನ ಮನಸ್ಸಿನಂತಾಯಿತು. ಆದದರಿಂದಲೇ ನಾನು ತಮಗೆ ಇಷ್ಟು ತೊಂದರೆ ಕೊಟ್ಟೆನು. ಕಾರಣ ಕ್ಷಮೆಯಿರಲಿ. ಈಗ ನಾನು ನನ್ನ ಕನ್ಯೆಯನ್ನು ಇಲ್ಲಿಯೇ ಕರೆಸುವೆನು. ಅವಳು ಬಲು ಸುಂದರಿ. ಪ್ರೌಢೆ. ತಮಗೆ ತಕ್ಕವಳಿರುವಳು. ತಮ್ಮ ಸೇವೆಯನ್ನು ಮನಃಪೂರ್ವಕವಾಗಿ ಮಾಡುವಳು. ಆದದರಿಂದ ಅವಳ ಸೇವೆಯನ್ನು ಸ್ವೀಕರಿಸಿರಿ."

ಹೀಗೆಂದು ಚಪ್ಪಾಳಿಯನ್ನು ಬಾರಿಸಿದಳು. ಕೂಡಲೆ ಇಬ್ಬರು ಸ್ತ್ರೀಯರು ಒಬ್ಬ ಸುಂದರತರುಣಿಯನ್ನು ಒಳಗೆ ಕರೆದುಕೊಂಡು ಬಂದರು. ತರುಣನು ಅವಳನ್ನು ಚೆನ್ನಾಗಿ ದಿಟ್ಟಿಸಿ ನೋಡಿದನು. ಆ ತರುಣಿಯು ಅನುಪಮ ಸುಂದರಿಯಾಗಿದ್ದಳು. ಅವಳು ತೆಳ್ಳಗಿನ ವಸ್ತ್ರವನ್ನು ಉಟ್ಟಿದ್ದಳು. ಆ ವಸ್ತ್ರಕ್ಕೆಲ್ಲ ಸುಗಂಧದ್ರವ್ಯವನ್ನು ಲೇಪಿಸಿತ್ತು. ಆ ಕೋಣೆಯಲ್ಲಿ ಅದರ ಘಮಘಮಾಟವು ತುಂಬಿತ್ತು. ಆ ತರುಣಿಯನ್ನು ತರುಣನ ಬಳಿಯಲ್ಲಿಯೇ ಕುಳ್ಳಿರಿಸಿದರು. ಅವಳು ತಲೆಬಾಗಿಸಿಕೊಂಡು ಅಲ್ಲಿಯೇ ಕುಳಿತಳು. ವಿಶ್ವಮೋಹಿನಿಯು ಅವಳ ಕಿವಿಯಲ್ಲಿ ಏನನ್ನೋ ಹೇಳಿ ಹೊರಟು ಹೋದಳು. ದಾಸಿಯರೂ ಕೋಣೆಯ ಬಾಗಿಲವನ್ನು ಇಕ್ಕಿಕೊಂಡು ಅವಳ ಬೆನ್ನ ಹಿಂದೆಯೇ ಹೊರಟು ಹೋದರು.

ತರುಣನಿಗೆ ಇನ್ನೂ ವರೆಗೂ ಇಂಥ ಪ್ರಸಂಗವು ಬಂದಿದ್ದಿಲ್ಲ. ಅವನು ದೂರ ಸರಿದು ತರುಣಿಯ ಕಡೆಗೆ ನೋಡಹತ್ತಿದನು. ತರುಣಿಯೂ ಒಂದು

ಸಲ ಅವನ ಮುಖದ ಕಡೆಗೆ ನೋಡಿದಳು. ಅವಳು ಮತ್ತೆ ಮತ್ತೆ ನೋಡ ಹತ್ತಿದಳು. ತರುಣನಿಗೆ ಇದರಿಂದ ಆಶ್ಚರ್ಯವಾಯಿತು. ತರುಣಿಯ ಕಣ್ಣುಗ ಳಿಂದ ಅಶ್ರುಗಳು ಗಲ್ಲಗಳ ಮೇಲೆ ಬೀಳಹತ್ತಿದವು. ತರುಣನು ಇದನ್ನೆಲ್ಲ ಕಂಡು ಗಂಭೀರಸ್ವರದಿಂದ ಅವಳಿಗೆ ಅಂದದ್ದು—"ನೀವು ಗಾಬರಿಯಾಗಬೇಡಿರಿ. ನನಗೆ ನೀವು ತಂಗಿಯ ಸರಿ. ನೀವು ಏಕೆ ದುಃಖಿಸುವಿರಿ?"

"ತಮ್ಮ ಮೋರೆಯನ್ನು ನೋಡಿ ನನಗೆ ನನ್ನ ಅಣ್ಣನ ನೆನಪಾಯಿತು!"

"ಈಗ ನಿಮ್ಮ ಅಣ್ಣನು ಎಲ್ಲಿದ್ದಾನೆ?"

"ನನಗೆ ಗೊತ್ತಿಲ್ಲ. ಆದರೆ ಕೇಳಿರಿ." ಹೀಗೆಂದು ಅವಳು ತನ್ನ ಜನ್ಮ ಕಥೆ ಯನ್ನು ಹೇಳಹತ್ತಿದಳು.

"ನನ್ನ ಹೆಸರು ತಾರೆ. ನನ್ನ ಅಣ್ಣನ ಹೆಸರು ರಜನೀಕಾಂತ. ನಾವಿಬ್ಬರೇ ಅಣ್ಣತಂಗಿಯರು. ಈಗ ಹತ್ತುವರ್ಷಗಳ ಹಿಂದೆ ನನ್ನನ್ನು ಯಾರೋ ದುಷ್ಟರು ಕಣ್ಣುಕಟ್ಟಿ ಹೊತ್ತುಕೊಂಡು ಬಂದು ಈ ಮನೆಯಲ್ಲಿ ತಂದುಬಿಟ್ಟರು. ಆ ಹೊತ್ತಿ ನಿಂದ ನಾನು ಇಲ್ಲಿಯೇ ಇದ್ದೇನೆ. ಆದರೆ ನನ್ನ ಅಣ್ಣನ ಮುಖಮುದ್ರೆಯು ನನ್ನ ಕಣ್ಣಮುಂದೆ ಕಟ್ಟಿದಂತಿದೆ. ನಿಮ್ಮ ವಯಸ್ಸಿನಷ್ಟೇ ಅವನದೀಗಿನ ವಯಸ್ಸು."

ಅವಳ ಮಾತುಗಳನ್ನು ಕೇಳುತ್ತಲೇ ತರುಣನಿಗೆ ಹಿಂದಿನ ಸಂಗತಿಗಳೆಲ್ಲ ಒಂದರ ಹಿಂದೊಂದರಂತೆ ನೆನಪಾದವು. ಹತ್ತು ವರ್ಷಗಳ ಹಿಂದೆ ತನ್ನ ತಂಗಿ ಯಾದ ತಾರೆಯು ಒಮ್ಮಿಂದೊಮ್ಮೆಲೆ ಇಲ್ಲದಂತಾದದ್ದೂ, ಎಷ್ಟು ಹುಡುಕಿದರೂ ಸಿಗದೆ ಎಲ್ಲರೂ ನಿರಾಶರಾದದ್ದೂ ಅವನ ಕಣ್ಣಮುಂದೆ ಕಟ್ಟಿದಂತಾದವು. ತಾರೆಯ ಮೊಗವನ್ನು ಚೆನ್ನಾಗಿ ನಿಟ್ಟಿಸಿದನು. ಮುಂದೆ ನಿಂತಿದ್ದ ವ್ಯಕ್ತಿಯೇ ತಂಗಿಯೆಂದು ಅವನಿಗೆ ಮನವರಿಕೆಯಾಯಿತು. ಊರು, ತಾಯಿತಂದೆಗಳ ಹೆಸರು ಇವೇ ಮೊದಲಾದ ಸಂಗತಿಗಳನ್ನು ಅವಳಿಂದ ಕೇಳಿಕೊಂಡನು. ಆಗಂತೂ ಸಂಶಯವು ಎಳ್ಳಷ್ಟೂ ಉಳಿಯಲಿಲ್ಲ. ವಾತ್ಸಲ್ಯವು ಉಕ್ಕಿಬರಹತ್ತಿತು. ಆಗ ತರುಣನು ಗಂಭೀರಸ್ವರದಿಂದ "ತಾರಾದೇವೀ, ನಾನೇ ನಿಮ್ಮಣ್ಣನಾದ ರಜನೀಕಾಂತನು. ಇದು ನಿಜ; ಖಂಡಿತ; ಚಿಂತಿಸದಿರು." ಎಂದನು.

ಅಣ್ಣತಂಗಿಯರಿಬ್ಬರು ಒಬ್ಬರನ್ನೊಬ್ಬರು ಆಲಿಂಗಿಸಿದರು. ಇಬ್ಬರ ಕಣ್ಣು ಗಳಿಂದಲೂ ಆನಂದಾಶ್ರುಗಳು ಉದುರಿದವು. ಆ ಮೇಲೆ ತರುಣನು ತಂಗಿಯ ನ್ನುದ್ದೇಶಿಸಿ—"ಇನ್ನೂವರೆಗೂ ನೀನು ಪವಿತ್ರಳಾಗಿರುವೆಯಾ?"

"ಅಣ್ಣಾ, ಹೌದು! ನಿಜ! ಖಂಡಿತ! ಖಂಡಿತ! ಅಣ್ಣಾ, ನನ್ನ ಮಾತನ್ನು ನಂಬು. ".

"ಹಾಗಾದರೆ, ಇನ್ನು ನೀನು ಇಲ್ಲಿ ಇರಕೂಡದು. ವಿಶ್ವಮೋಹಿನಿಯೂ ಒಳ್ಳೆಯವಳಿದ್ದಂತೆ ತೋರುತ್ತದೆ. ನಾನು ಇಲ್ಲಿಂದ ನಿನ್ನನ್ನು ಬಿಡುಗಡೆ ಮಾಡಿಸುವೆನು."

ತಾರೆಯು—"ಒಳ್ಳೆಯದು ಅಣ್ಣಾ, ಇಂದು ನಾನು ಧನ್ಯಳಾದೆನು." ಎಂದು ನುಡಿದಳು.

ಇಬ್ಬರೂ ಬೇರೆ ಬೇರೆ ಮಂಚಗಳ ಮೇಲೆ ಮಲಗಿಕೊಂಡರು.

(೪)

ಮುಂಜಾವಿನಲ್ಲಿ ವಿಶ್ವಮೋಹಿನಿಯ ಮಂದಿರದ ಬಾಗಿಲವು ತೆರೆಯಿತು. ವಿಶ್ವಮೋಹಿನಿಯು ಹೊರಗೆ ದೃಷ್ಟಿಯನ್ನು ಚಲ್ಲಿದೊಡನೆಯೇ ಜಟಾಜೂಟಮಂಡಿತನಾದ ಮುನಿಯೊರ್ವನನ್ನು ಕಂಡಳು. ಅವಳ ಅಚ್ಚರಿಗೆ ಎಣೆಯಿಲ್ಲದಾಯಿತು. ಆ ಮುನಿವರ್ಯನ ದರ್ಶನಮಾತ್ರದಿಂದಲೇ ಅವಳ ಹೃದಯದಲ್ಲೊಂದು ಅಪೂರ್ವವಾದ ಭಾವನೆಯು ಅಂಕುರಿಸಿತು. ಕೃತಕರ್ಮಪಶ್ಚಾತ್ತಾಪ, ಪೂಜ್ಯಬುದ್ಧಿ ಮತ್ತು ಭಯಭಕ್ತಿ ಇವು ಆ ಭಾವನೆಯಲ್ಲಿ ಏಕೀಭವಿಸಿದ್ದವು. ಮಹಾತ್ಮರ ಮಾಹಾತ್ಮ್ಯವನ್ನು ಎಂತು ಬಣ್ಣಿಸುವದು! ವಿಶ್ವಮೋಹಿನಿಯು ವಿಮೂಢೆಯಾಗಿ ಅವನತಮುಖಿಯಾಗಿ ಮುನಿವರ್ಯನ ಪಾದಾರವಿಂದಗಳಿಗೆ ಪೊಡಮಟ್ಟಳು. "ತಾವು ಯಾರು? ಇಷ್ಟು ಪ್ರಾತಃಕಾಲದಲ್ಲಿ ನನ್ನಂತಹಳ ಬಾಗಿಲೆದುರಿನಲ್ಲಿ ನಿಂತುದನ್ನು ನೋಡಿ ನನಗೆ ಬಹಳ ಹೆದರಿಕೆಯಾಗಿದೆ. ಬಡವೆಯಾದ ನನ್ನನ್ನು ಕ್ಷಮಿಸಿ ಅನುಗ್ರಹಿಸಿರಿ. ತಮ್ಮ ಅಪ್ಪಣೆಯೇನೆಂಬುದನ್ನು ಬೇಗನೆ ತಿಳಿಯಪಡಿಸಿರಿ." ಇತ್ಯಾದಿಯಾಗಿ ದೈನ್ಯದಿಂದ ಬೇಡಿಕೊಳ್ಳಹತ್ತಿದಳು. ಋಷಿವರ್ಯರು ಗಂಭೀರವಾಣಿಯಿಂದ—"ವಿಶ್ವಮೋಹಿನೀ, ರಗಳೆಯನ್ನು ಸಾಕುಮಾಡು. ನಿನಗೆ ಹಿಂದಿನಿಂದ ಎಲ್ಲವನ್ನು ಹೇಳುವೆನು. ಈಗ ಮೊದಲು ನನಗೆ ರಜನೀಕಾಂತನು ಮಲಗಿದ ಕೋಣೆಯ ಬಾಗಿಲವನ್ನು ತೆರೆದು ತೋರಿಸು. ರಜನೀಕಾಂತನಾರೆಂಬುದು ತಿಳಿಯಿತೇ ? ನಿನ್ನೆ ರಾತ್ರಿ ನಿನ್ನ ಮನೆಗೆ ಶಯನಕ್ಕೆ ಬಂದ ತರುಣನೇ ಅವನು. ಅವನನ್ನು ಈಗಿಂದೀಗಲೇ ನಾನು ನೋಡಬೇಕಾಗಿದೆ !" ವಿಶ್ವಮೋಹಿನಿಗೆ ದಿಗ್ಭ್ರಮೆಯಾದಂತಾಯಿತು. ಇದರ ಗೂಢವು ಅವಳಿಗೆ ಸ್ವಲ್ಪವೂ ತಿಳಿಯಲಿಲ್ಲ. ಆದರೆ ಆ ಮುನಿವರೇಣ್ಯನ ಮುಖದರ್ಶನದಿಂದ ಮಾತ್ರ ಅವಳು ಅನ್ಯೆ

ಚ್ಛಿಕವಾಗಿಯೇ ಅವಿದಿತವಾಗಿಯೇ ವಿನೀತೆಯಾಗಿದ್ದಳು. ಮುನಿಯ ಮಾತನ್ನು ಮೀರಲಾರದಾದಳು. ವಿಧೇಯನಾದ ಕಿಂಕರನಂತೆ ಸುಮ್ಮನೆ ಒಳಗೆ ಬಂದು ರಜನೀಕಾಂತನ ಕೋಣೆಯ ಬಾಗಿಲವನ್ನು ತೆರೆದಳು. ಆ ಮುನಿಪುಂಗವನಾದರೂ ಅವಳನ್ನು ಹಿಂಬಾಲಿಸಿ ಬಂದು ಕೋಣೆಯ ಬಾಗಿಲೆದುರಿನಲ್ಲಿ ನಿಂತನು. ಬಾಗಿಲವು ತೆರೆಯುವದೊಂದೇ ತಡ; ರಜನೀಕಾಂತನೂ, ಅವನ ಹಿಂದಿಂದೆಯೇ ತಾರೆಯೂ ಹೊರಗೆ ಬಂದರು.

ರಜನೀಕಾಂತನು ಗುರುವರ್ಯರನ್ನು ಹಠಾತ್ತಾಗಿ ಅಲ್ಲಿ ಅವಲೋಕಿಸಿ ಬೆಪ್ಪಾಗಿ ಹೋದನು. ನಯಭಯಭಕ್ತಿಪೂರಿತ ಹೃದಯದಿಂದ ಸಾಷ್ಟಾಂಗವಾಗಿ ಗುರುವಿನ ಪಾದಗಳಿಗೆ ಅಡ್ಡಬಿದ್ದನು. ತಾರೆಗೆ ಮಾತ್ರ ಏನೂ ತೋಚಲಿಲ್ಲ; ವಿಶ್ವಮೋಹಿನಿಯಂತೂ ಇದನ್ನೆಲ್ಲ ಅವಲೋಕಿಸಿ ಭ್ರಮಿಷ್ಠೆಯಂತಾಗಿದ್ದಳು. ನಾವೇನು ರಂಗಸ್ಥಲದ ಮೇಲಿನ ಯಾವದೊಂದು ನಾಟಕವನ್ನು ನೋಡುತ್ತಿದ್ದೇವೆಯೋ? ಅಥವಾ ಶಯ್ಯೆಯ ಮೇಲೆ ಒರಗಿ ಸ್ವಪ್ನಸೃಷ್ಟಿಯೊಳಗಿನ ಚಮತ್ಕಾರವನ್ನು ಕಾಣುತ್ತಿದ್ದೇವೆಯೋ? ಎಂಬದನ್ನು ಅವರಿಬ್ಬರೂ ತಿಳಿಯದಾದರು. ಇಷ್ಟರಲ್ಲಿ ಋಷಿಯು ವಿಶ್ವಮೋಹಿನಿಯ ಕಡೆಗೆ ತಿರುಗಿ ಸಿಡಿಲಿನಂತಹ ಗಂಭೀರಧ್ವನಿಯಿಂದ ಮಾತನಾಡಿದನು:—

"ವಿಶ್ವಮೋಹಿನೀ, ನಿನ್ನ ಈ ಸೌಂದರ್ಯವನ್ನೂ, ಹೆಂಗಸುತನವನ್ನೂ ಏನು ಸುಡಬೇಕು! ಅಬಲೆ, ಕೋಮಲೆ ಎಂಬ ಶಬ್ದಗಳನ್ನು ಸ್ತ್ರೀಪರವಾಗಿ ಉಪಯೋಗಿಸುವದುಂಟು. ಆದರೆ ನೀನು ಮಾಡುವ ಕೆಲಸಗಳನ್ನು ನೋಡಿದರೆ, ಅವುಗಳಿಗೆ ತಕ್ಕ ಕಠೋರತೆ, ಕ್ರೌರ್ಯ, ನೈಷ್ಠುರ್ಯ ಮೊದಲಾದ ಗುಣಗಳನ್ನು ಹೇಳಲು ಸಮರ್ಥಶಬ್ದಗಳೇ ಇಲ್ಲವೆಂದು ನನಗೆ ತೋರುತ್ತದೆ! ಛೀ, ನಿರ್ಲಜ್ಜೇ, **(ವಿಶ್ವಮೋಹಿನಿಯ ಕಣ್ಣುಗಳೊಳಗಿಂದ ಅಶ್ರುಗಳು ಧಾರಾಕಾರವಾಗಿ ತಮ್ಮಿಂದ ತಾವೇ ಸುರಿಯಹತ್ತಿದವು.)** ಹೆಂಗಸಿನ ಯೋಗ್ಯತೆಯಷ್ಟೆಂಬುದನ್ನು ನೀನೇನು ಬಲ್ಲೆ ? ತಾಮಸಿಯಾಗಿ, ದುರ್ಮಾರ್ಗಗಾಮಿನಿಯಾಗಿ ಸ್ವತ್ವವನ್ನು ಕಳೆದುಕೊಂಡೆ; ಅಧೋಗತಿಯನ್ನು ಗಳಿಸಿಕೊಂಡೆ. ಎಷ್ಟೋ ಹೆಂಗಸರನ್ನೂ ಗಂಡಸರನ್ನೂ ಹಾಳುಮಾಡಿದೆ. ಇಂತು ನೀನು ಸ್ವಜನದ್ರೋಹಿ; ಸ್ವಸಮಾಜದ್ರೋಹಿ; ಸ್ವದೇಶದ್ರೋಹಿ ! ಪಾಪಿಷ್ಠೇ! ಜನಾಂಗದ ಉದ್ಧಾರವು ನಿಜವಾಗಿ ಸ್ತ್ರೀಯರಿಂದಲೇ ಆಗಬೇಕಾದುದು. ಆದರೆ ಮಾಡತಕ್ಕದ್ದೇನು? ನಿನ್ನಂತಹ ಭ್ರಷ್ಟೆಯರಿಂದ ಸ್ತ್ರೀಜಾತಿಗೇ ಕಲಂಕವುಂಟಾಗಿರುವದು. ಪ್ರತ್ಯಕ್ಷಾಪ್ರತ್ಯಕ್ಷ ರೀತಿಯಿಂದ ನಮ್ಮ ಪವಿತ್ರಸಮಾಜವು ಅಪರಿಮಿತ ಕಷ್ಟನಷ್ಟಗಳನ್ನು ಹೊಂದಿ, ದಿನದಿನಕ್ಕೆ ಕ್ಷೀಣವಾಗುತ್ತ ಕೀಳ್ಗೆಸೆಗಳಿ

ಯುತ್ತಿರುವದು. ಸೌಂದರ್ಯಾದಿ ಸೌಷ್ಟವದ ದುರುಪಯೋಗವನ್ನು ಈ ರೀತಿ ಮಾಡಿಕೊಳ್ಳುವದರಿಂದ ಈಶ್ವರನು ಅತ್ಯಂತವಾಗಿ ಕ್ಷೋಭಿಸುವನು. ನಿನ್ನಂತಹ ನೀಚ......"

**ವಿಶ್ವಮೋಹಿನಿ:**—(ನಡುವೇ ಕಣ್ಣೀರನ್ನು ಸುರಿಸುತ್ತ, ಅಳುತ್ತ ಬಿಕ್ಕುತ್ತ, ಮುನಿಯ ಪಾದಗಳನ್ನು ಗಟ್ಟಿಯಾಗಿ ಹಿಡಿದು ದೀನಸ್ವರದಿಂದ) ಮಹಾತ್ಮರೇ, ಸಾಕು. ಸಾಕು. ಈ ಚಾಂಡಾಲಿನಿಯ ವಿಷಯದಲ್ಲಿ ಹೆಚ್ಚು ಮಾತನಾಡಿ ಇನ್ನು ನಿಮ್ಮ ವಾಣಿಯನ್ನು ಅಪವಿತ್ರಮಾಡಿಕೊಳ್ಳಬೇಡಿರಿ. ತಮ್ಮ ಪಾದಗಳ ಆಣೆಮಾಡಿ ಹೇಳುತ್ತೇನೆ. ಇಲ್ಲಿಯವರೆಗೆ ನಾನು ತಿಳಿಯದೆಯೂ, ಸೊಕ್ಕಿನಿಂದಲೂ ಮಾಡಿದ ಅನಾಚಾರಕ್ಕಾಗಿ ಪ್ರಾಯಶ್ಚಿತ್ತವನ್ನು ಹೇಳಿರಿ. ಆ ಪಾಪದ ಕ್ಷಾಲನೆಯನ್ನು ಮಾಡಿಕೊಳ್ಳಲು ಜೀವವನ್ನಾದರೂ ಕೊಡಲು ಸಿದ್ಧಳಿದ್ದೇನೆ. ಇಂದೇ ನನ್ನ ಈ ಸೊತ್ತನ್ನೆಲ್ಲ ದಾನಮಾಡಿ ನಿಮ್ಮ ದಾಸಿಯಾಗಿ ಬರುವೆನು. ಸನ್ಮಾರ್ಗವನ್ನು ತೋರಿ ಉದ್ಧರಿಸುವ ಭಾರವು ಮಾತ್ರ ತಮ್ಮನ್ನೇ ಕೂಡಿದೆ. ನನ್ನಂತೆಯೇ ಅಡ್ಡದಾರಿಯನ್ನು ಹಿಡಿದವರು ಈ ನಮ್ಮ ಭರತಖಂಡದಲ್ಲಿ ಹಲವರಿರಬಹುದು. ಅವರಿಗೆಲ್ಲ ನನ್ನ ಅನುಭವವನ್ನೂ ಪರಿಣಾಮವನ್ನೂ ಅರುಹಿ, ಅವರನ್ನು ಅಂತಹ ಕೆಲಸದಿಂದ ಪರಾವೃತ್ತರನ್ನು ಮಾಡಬೇಕೆಂಬ ಆಶೆಯುಂಟಾಗಿದೆ. ಆದದರಿಂದ ಪ್ರಾಯಶ್ಚಿತ್ತವನ್ನು ತೆಗೆದುಕೊಂಡು ಜೀವದಿಂದ ಉಳಿಯುವದು ಶಕ್ಯವಿದ್ದರೆ ಹೇಳಿರಿ. ಅಂತು ತಾವು ಹೇಳಿದ ಮಾರ್ಗದಿಂದಲೇ ಇಂದಿನಿಂದ ನಡೆಯುವೆನು. ದಯವಿಟ್ಟು ದಾರಿದೋರಬೇಕು.

**ಋಷಿ:**—ವಿಶ್ವಮೋಹಿನೀ, ಕೇಳು ಜೀವಜಂತುಗಳಿಗೆಲ್ಲ ಸ್ತ್ರೀಜಾತಿಯೇ ಉದ್ಧಾರದ ಮೂಲವು. ಸ್ತ್ರೀಯರಿಂದ ಪ್ರಗತಿ; ಸ್ತ್ರೀಯರಿಂದ ಸದ್ಗತಿ. ಆದದರಿಂದಲೇ "यत्र नार्यस्तु पूज्यन्ते रमन्ते तत्र देवताः । ಎಂಬದಾಗಿ ಶಾಸ್ತ್ರವಚನವಿದೆ. ಆದರೆ ಈಗ ಅದರ ಅರ್ಥವೂ ವಿಪರೀತವಾಗಿದೆ; ಸ್ತ್ರೀಯರ ಸ್ಥಿತಿಯೂ ವಿಲಕ್ಷಣವಾಗಿದೆ. ಆದದರಿಂದಲೇ ನಮ್ಮ ಆರ್ಯಭೂಮಿಯು ಇಂತಹ ಹೀನಸ್ಥಿತಿಯನ್ನೀಗ ಹೊಂದಿದೆ. ಹೆಂಗಸು ಬಾಲ್ಯಕಾಲದಲ್ಲಿ ತಂದೆತಾಯ್ಗಳ ಅಪ್ಪಣೆಯಂತೆ ನಡೆದು, ಸುಶಿಕ್ಷಣಹೊಂದಿ ಸದ್ವರ್ತನ ಮತ್ತು ಸಂಸಾರಕರ್ತವ್ಯಗಳನ್ನು ಅರಿತುಕೊಳ್ಳಬೇಕು. ವಿವಾಹಾನಂತರದಲ್ಲಿ ಪತಿಭಕ್ತಿಯಿಂದ ನಡೆಯುತ್ತ ಸತ್ಸಂತತಿಯನ್ನು ಪಡೆದು ಈ ಲೋಕದ ಸೌಖ್ಯಗಳನ್ನು ಅನುಭವಿಸುತ್ತಲೇ ಪರಲೋಕದ ಸಾಧನವನ್ನು ಮಾಡುತ್ತಿರಬೇಕು. ಬ್ರಹ್ಮಚಾರಿಣಿಯಾಗಿ ಉಳಿದರೂ ಬಾಧಕವಿಲ್ಲ. ಆದರೆ ಆ ವ್ರತವನ್ನು ಪಾಲಿಸುವದಕ್ಕೆ ಮಾತ್ರ ಮನೋಬಲವು

ಹೆಚ್ಚಾಗಿರಬೇಕು. ಏನೇ ಇರಲಿ. ವಿಶ್ವಮೋಹಿನೀ ನಿನ್ನ ಆಚರಣೆಯು ಮಾತ್ರ ಸರ್ವಥೈವ ನಿಂದ್ಯವು.

**ವಿಶ್ವಮೋಹಿನಿ**:—ಮುನಿರಾಯಾ, ಪೂರ್ವಜನ್ಮದಲ್ಲಿ ಯಾವ ಕರ್ಮವನ್ನೆಸಗಿದ್ದೆನೋ, ಈಗ ಇಂತಹ ಚಾಂಡಾಲಿನಿಯಾದೆನು.

**ಋಷಿ**:—ಯಾಕೆ ಸುಮ್ಮನೆ ಕರ್ಮವನ್ನು ಹಳಿಯುತ್ತೀ ? ಕರ್ಮವು ಪೂರ್ವದ್ದೇ ಇರಲಿ—ಈಗಿನದೇ ಇರಲಿ—ನಿನ್ನ ಅಧೀನವಲ್ಲವೇ? ತಪ್ಪನ್ನು ತಮ್ಮಲ್ಲಿಟ್ಟುಕೊಂಡು ಸುಮ್ಮಸುಮ್ಮನೆ ಅನ್ಯರನ್ನೇಕೆ ಹಳಿಯಬೇಕು?

**ವಿಶ್ವ**:—ತಪ್ಪಾಯಿತು ಗುರುಗಳೇ, ನಾನು ಹೇಳಿಕೇಳಿ ತಿಳಿಗೇಡಿ. ನಿಮ್ಮ ಅಪ್ಪಣೆಯಂತೆ ನಡೆಯುವೆನು. ದಯಮಾಡಿ ಪ್ರಾಯಶ್ಚಿತ್ತವನ್ನು ಹೇಳಿರಿ.

**ಋಷಿ**:—ಕೇಳು. ನಿನ್ನಂತಹಳ ಗುರುತರವಾದ ಪಾಪವು ಯಾತರಿಂದಲೂ ಕ್ಷಾಲಿತವಾಗತಕ್ಕದಲ್ಲ. ಆದರೂ ನಿನಗೀಗ ಚೆನ್ನಾಗಿ ಪಶ್ಚಾತ್ತಾಪವಾಗಿದೆ. ಹೀಗೆಯೇ ಪಶ್ಚಾತ್ತಾಪಾಗ್ನಿಯಿಂದ ನಿನ್ನ ಮನಸ್ಸನ್ನು ಸದೈವ ಪರಿಶುದ್ಧಗೊಳಿಸುತ್ತಿರು ! ಇಂದಿನಿಂದಲೇ ಸನ್ಯಾಸಿನಿಯಾಗು. ನನ್ನ ಸಂಗಡ ನಡೆ. ಮನಸ್ಸು ಪರಿಪೂತವಾಗುವದಕ್ಕೂ, ಇಂದ್ರಿಯನಿಗ್ರಹವನ್ನು ಕಲಿಯುವದಕ್ಕೂ ತಕ್ಕ ಆಹಾರವಿಹಾರಕ್ರಮವನ್ನು ತಿಳಿಸಿಕೊಟ್ಟು ಆಚಾರನಿಯಮಗಳನ್ನು ಹಾಕಿಕೊಡುವೆನು. ಅವುಗಳನ್ನು ತಪ್ಪದೆ ಅನುಸರಿಸುತ್ತಿರು. ಇಂದಿನಿಂದಲೇ ನೀನು ಸ್ತ್ರೀಜಾತಿಯ ಉದ್ಧಾರಕ್ಕಾಗಿ ಟೊಂಕಕಟ್ಟಬೇಕು. ನಗರಗಳಲ್ಲಿಯೂ ಹಳ್ಳಿಗಳಲ್ಲಿಯೂ ಸಂಚರಿಸಿ, ಸ್ತ್ರೀಯರಲ್ಲಿ ನವಜಾಗ್ರುತಿಯನ್ನು ಹುಟ್ಟಿಸಿ, ಅವರು ಸುರೀತಿಮಂತರೂ ದೇಶಭಾಷಾಧರ್ಮಭಕ್ತರೂ ಆಗಿ ಸ್ವಸುಖವನ್ನು ಸಾಧಿಸಿಕೊಳ್ಳುವದಲ್ಲದೆ, ರಾಷ್ಟ್ರೋದ್ಧಾರಕ್ಕೆ ನೆರವಾಗುವಂತೆ ಮಾಡು. ಇದನ್ನು ನೀನು ಎಷ್ಟು ಮನಃಪೂರ್ವಕವಾಗಿ—ಎಷ್ಟು ದೊಡ್ಡ ಪ್ರಮಾಣದಿಂದ—ಮಾಡುವಿಯೋ ಅಷ್ಟು ನಿನ್ನ ಪಾಪದ ಪರಿಮಾರ್ಜನವಾಗುತ್ತ ಹೋಗುವದು.

**ವಿಶ್ವ**:—ಉದ್ಧೃತಳಾದೆನು. ತಾವು ಹೇಳಿದ ಕರ್ತವ್ಯಪಾಲನೆಯಲ್ಲಿಯೇ ಈ ದೇಹವನ್ನು ಸವಿಸುವೆನು.

**ಋಷಿ**:—ತಾರೇ, ಕೇಳಿದೆಯಾ ನನ್ನ ಮಾತುಗಳನ್ನು! ಇವೆಲ್ಲ ಮಾತುಗಳನ್ನು ಚೆನ್ನಾಗಿ ನೆನಪಿನಲ್ಲಿಡು. ನಿನಗೊಂದು ತಕ್ಕ ವರವನ್ನು ನಾನು ನೋಡಿಟ್ಟಿದ್ದೇನೆ. ನಿಮ್ಮಣ್ಣನು ಬೇಗನೆ ನಿನ್ನ ಮದುವೆಯನ್ನು ಮಾಡುವನು. ಮದುವೆಯಾದ ಬಳಿಕ ನಾನು ಹೇಳಿದಂತೆ ವರ್ತಿಸತಕ್ಕದ್ದು ಕಂಡೆಯಾ !

**ತಾರೆ:**—ನಾನು ಅಲ್ಪಮತಿ, ಹೆಚ್ಚಿಗೇನು ಹೇಳಲಿ? ಪರಮಾತ್ಮಸ್ವರೂಪ ರಾದ ತಮ್ಮನ್ನೆಂದೂ ಮರೆಯದೆ, ತಮ್ಮ ನುಡಿಗಳನ್ನೇ ಹಗಲಿರುಳೂ ಧ್ಯಾನಿಸುತ್ತ, ಅವುಗಳನ್ನು ತಪ್ಪದೆ ಅನುಸರಿಸಿ ನಡೆಯುವೆನು.

**ಋಷಿ:**—ರಜನೀಕಾಂತಾ, ನೋಡು. ನಾನು ನಿನ್ನನ್ನು ಇಲ್ಲಿಗೆ ಏಕೆ ಕಳಿಸಿದೆನೆಂಬದು ಈಗಾದರೂ ನಿನ್ನ ಲಕ್ಷ್ಯದಲ್ಲಿ ಬಂದಿರಬಹುದು. ಸಂಸಾರಕರ್ತವ್ಯವು ಸಂಪೂರ್ಣವಾದ ಹೊರತು ವಿಧ್ಯುಕ್ತಸನ್ಯಾಸಿಯಾಗುವದು ತರವಲ್ಲ. ನಿನ್ನ ತಂಗಿಯು ಈ ಹೊತ್ತು ಸರ್ವನಾಶ ಹೊಂದುತ್ತಿದ್ದಳೆಂಬದು ನನಗೆ ಯೋಗದೃಷ್ಟಿಯಿಂದ ಗೊತ್ತಾಯಿತು. ನಿನ್ನ ಮನಃಪರೀಕ್ಷೆಗಾಗಿಯೂ, ಅವಳ ಕನ್ಯಾತ್ವ ರಕ್ಷಣೆಗಾಗಿಯೂ ನಿನ್ನನ್ನಿಲ್ಲಿಗೆ ಕಳುಹಿದೆನು. ಇದರಿಂದ ನಿನ್ನ ಕರ್ತವ್ಯವೂ ಪೂರ್ತಿಯಾಯಿತು. ಇನ್ನು ಮೇಲೆ ನಡೆ. ನನ್ನ ಶಿಷ್ಯರಲ್ಲಿ ನಿನ್ನಂತೆಯೇ ಯೋಗ್ಯನಾದ ಒಬ್ಬ ತರುಣನಿದ್ದಾನೆ. ಅವನಿಗೆ ಇವಳನ್ನು ಧಾರೆಯೆರೆದು ಕೊಡು. ಅವನು ತಾರೆಯೊಡನೆ ಸುಖಸಂಸಾರವನ್ನು ಮಾಡುತ್ತಲೇ ದೇಶಕಾರ್ಯವನ್ನು ಮಾಡಲಿ. ನಿನ್ನ ಮನಸ್ಸು ಪರಿಪಕ್ವವಾಗಿದೆ. ಸಂಸಾರದಿಂದ ಪರಾಙ್ಮುಖವಾಗಿದೆ. ಆದದರಿಂದ ನಿನಗೆ ದೀಕ್ಷೆಯನ್ನು ಕೊಡುವೆನು. ಆದರೆ ಸನ್ಯಾಸವೆಂದರೆ ಕಾವಿಯ ಬಟ್ಟೆಯನ್ನುಟ್ಟು ತಲೆ ಬೋಳಿಸಿಕೊಂಡು ಇಲ್ಲವೆ ಜಡೆಯನ್ನು ಬಿಟ್ಟು ಗುಡ್ಡವನ್ನು ಸೇರುವದೆಂದಾಗಲಿ, ಅಶನಾರ್ಥಿಯಾಗಿ ಊರೂರು ತಿರುಗುವದೆಂದಾಗಲಿ ತಿಳಿಯಬೇಡ, ಮತ್ತು ಸಾಂಸಾರಿಕರ ಯೋಗ್ಯತೆಯು ಸನ್ಯಾಸಿಗಳಿಗಿಂತ ಕಡಿಮೆಯೆಂದೂ ಭಾವಿಸಬೇಡ. ಸಂಸಾರದಲ್ಲಿಯೇ ಇದ್ದರೂ ಸನ್ಯಸ್ತವೃತ್ತಿಯಿಂದಿರಲಿಕ್ಕೆ ಬರುತ್ತದೆ. ಮತ್ತು ಒಂದು ದೃಷ್ಟಿಯಿಂದ ಅದೇ ಸತ್ವಶಾಲಿಗಳ ಲಕ್ಷಣವು. ಇನ್ನು ಸನ್ಯಾಸಿಯಾದ ಮೇಲೆ ಆತ್ಮಚಿಂತನೆಯೆಂದು ಮೂಗು ಹಿಡಿದು ಕುಳಿತುಕೊಳ್ಳುವದಿಷ್ಟೇ ಕರ್ತವ್ಯವೆಂದೂ ತಿಳಿಯಬೇಡ. ನೋಡು. ನಮ್ಮ ಈ ಪವಿತ್ರವಾದ ಆರ್ಯಭೂಮಿಯು ಈಗ ಎಷ್ಟು ಅಧೋಗತಿಗಿಳಿದಿರುವದು! ಆದದರಿಂದ ನಮ್ಮ ಈ ಭೂಮಿಯನ್ನು ಯಾವನು ಉದ್ಧರಿಸುವನೋ, ಅವಳ ಊರ್ಜಿತಸ್ಥಿತಿಗೆ ಯಾವನು ಹಗಲಿರುಳು ಹೆಣಗುವನೋ—ಅವನು ಯಾವ ಅವಸ್ಥೆಯಲ್ಲಿಯೇ ಇರಲಿ—ಅವನೇ ಈಗಿನ ನಿಜವಾದ ಸನ್ಯಾಸಿಯು. ರಾಷ್ಟ್ರದೊಳಗಿನ ಜನರ ಮನೋಭೂಮಿಯಲ್ಲಿ ಸ್ವಾಭಿಮಾನ, ಸ್ವಕೀಯಾಭಿಮಾನ, ಸ್ವಭಾಷಾಭಿಮಾನ, ಸ್ವಧರ್ಮಾಭಿಮಾನ, ಸ್ವದೇಶಾಭಿಮಾನ ಈ ಗುಣಗಳ ಬೀಜಗಳನ್ನು ಬಿತ್ತುವದು ಈಗಿನ ಕಾಲದ ಪ್ರತಿಯೊಬ್ಬನ

ಕರ್ತವ್ಯವಾಗಿದೆ. ಎಲ್ಲವನ್ನೂ ಪರಿತ್ಯಜಿಸಿದ ಸನ್ಯಾಸಿಗಳಂತೂ ಇದನ್ನು ತಮ್ಮ ಸ್ವೀಕೃತವ್ರತವನ್ನೇ ಮಾಡಿಕೊಳ್ಳಬೇಕು. ಈ ತರದ ನಿಷ್ಕಾಮ ಕರ್ಮದಿಂದಲೇ ದೇವರೂ ಸಂತುಷ್ಟನಾಗುವನು. ಈ ವಿಷಯದಲ್ಲಿ ವಕ್ತವ್ಯವು ಬಹಳವಾಗಿದೆ; ಮತ್ತೊಮ್ಮೆ ಬಿತ್ತರಿಸುವೆನು.

ಋಷಿವರ್ಯರ ಮಾತು ಮುಗಿಯುತ್ತಲೇ ಎಲ್ಲರೂ ಅವರ ಪಾದಗಳಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದರು. ಎಲ್ಲರಿಗೂ ಮಂಗಲಾಶೀರ್ವಾದವನ್ನು ಮಾಡಿ ಅವರನ್ನು ಋಷಿವರ್ಯರು ಅಭಯಹಸ್ತದಿಂದೆಬ್ಬಿಸಿದರು. ವಿಶ್ವಮೋಹಿನಿಯು ತನ್ನ ಎಲ್ಲ ಸೊತ್ತನ್ನು ಕೂಡಿಸಿದಳು. ತಾರಾದೇವಿಯನ್ನು ದುರುದ್ದೇಶದಿಂದ ತೊಂದರೆಗೊಳಿಸಿದ್ದಕ್ಕಾಗಿ ಅವಳು ತನ್ನ ಆಸ್ತಿಯ ಅರ್ಧಭಾಗವನ್ನು ಅವಳಿಗೆ ಮನಃಪೂರ್ವಕವಾಗಿ ಅರ್ಪಿಸಿದಳು. ಗುರುಗಳಾದರೂ ಅದಕ್ಕೆ ಸಮ್ಮತಿಯನ್ನಿತ್ತರು; ಉಳಿದ ಅರ್ಧವನ್ನು ದೇಶೋದ್ಧಾರಕ್ಕಾಗಿ ಹೆಣಗುವ ತರುಣರ ವೆಚ್ಚಕ್ಕಾಗಿಯೂ, ಬಡಬಗ್ಗರೂ ಅನಾಥರೂ ಆದವರ ಚರಿತಾರ್ಥಕ್ಕಾಗಿಯೂ ಅರ್ಪಿಸಿದಳು.

ಶುಭಮುಹೂರ್ತದಲ್ಲಿ ತಾರೆಯ ಮದುವೆಯೂ ಜರುಗಿತು. ಗುರುವರ್ಯರ ಆಶೀರ್ವಾದದಿಂದ ಅವಳಿಗೆ ಅಪರಿಮಿತ ಸಂಪತ್ತೂ, ಅನುಪಮ ವರನೂ ಲಭಿಸಿದನು. ಋಷಿವರ್ಯರು ವಿವಾಹಕಾಲದಲ್ಲಿ ಸನ್ನಿಹಿತರಾಗಿದ್ದು, ವಿಶ್ವಮೋಹಿನಿಯ ದ್ರವ್ಯವನ್ನು ಅವರಿಗೆ ಅರ್ಪಿಸಿ ಹರಸಿದರು; ಮತ್ತು ಸ್ವಕರ್ತವ್ಯವನ್ನು ಪೂರೈಸಿಕೊಂಡು, ದೇಶೋದ್ಧಾರದ ಕಾರ್ಯವನ್ನು ಮಾಡುವದಕ್ಕಾಗಿ ಅವರಿಂದ ಅಭಿವಚನವನ್ನು ಪಡೆದರು.

ಈಗ ವಿಶ್ವಮೋಹಿನಿ ಮತ್ತು ರಜನೀಕಾಂತ ಇವರಿಬ್ಬರೂ ಸನ್ಯಾಸವನ್ನು ಪರಿಗ್ರಹಿಸಿದ್ದಾರೆ. ಗುರುವರ್ಯರ ಹೇಳಿಕೆಯಂತೆ ದೇಶ, ಭಾಷೆ ಮತ್ತು ಧರ್ಮ ಇವುಗಳನ್ನು ಕುರಿತು ಹೆಂಗಸರಿಗೂ ಗಂಡಸರಿಗೂ ಸದುಪದೇಶಮಾಡುತ್ತ ದೇಶದಲ್ಲಿ ತಿರುಗುತ್ತಿರುವದೇ ಅವರ ನಿತ್ಯಕೃತ್ಯವಾಗಿದೆ. ತಾರೆಯೂ ಅವಳ ಗಂಡನೂ ಲೇಖನ ಭಾಷಣಗಳ ದ್ವಾರದಿಂದಲೂ, ಪ್ರತ್ಯಕ್ಷೋದಾಹರಣದಿಂದಲೂ ಇದನ್ನೇ ಜನರಿಗೆ ಬೋಧಿಸುತ್ತಿದ್ದಾರೆ. ಇಂತಹ ಕರ್ಮಯೋಗಿಗಳಾದ ಸನ್ಯಾಸಿಗಳನ್ನೂ, ದೇಶಭಕ್ತರಾದ ಗೃಹಸ್ಥಾಶ್ರಮಿಗಳನ್ನೂ, ರಾಷ್ಟ್ರೋದ್ಧಾರಕರಾದ ಬ್ರಹ್ಮಚಾರಿಗಳನ್ನೂ ಸಿದ್ಧಗೊಳಿಸುವದರಲ್ಲಿಯೂ, ಇಂತಹರ ಸಂಖ್ಯೆಯನ್ನು ಹೆಚ್ಚಿಸುವದರಲ್ಲಿಯೂ ಋಷಿವರ್ಯರು ತಮ್ಮ ತಪಃಸಾಮರ್ಥ್ಯವನ್ನು ವೆಚ್ಚಮಾಡುತ್ತಿದ್ದಾರೆ. ಇದೇ ಅಲ್ಲವೇ ನಿಜವಾದ ಯೋಗಿಮಹಿಮೆಯು ! ಆದದರಿಂದಲೇ ಅಲ್ಲವೇ ಯೋಗಿಮಹಿಮೆಯು ಅಗಮ್ಯವೆಂದು ಹೇಳುವದು !

---

# ಬೆಳವಡಿಯ ಮಲ್ಲವ್ವನು

## (೧)

ಸೂರ್ಯಾಸ್ತದ ಸಮಯ. ಪೂಜ್ಯನಾದ ಸಹಸ್ರಕರನು ಸುತ್ತಲೂ ಪಸರಿಸಿದ್ದ ತನ್ನ ಕಿರಣಗಳನ್ನೆಲ್ಲ ಮೆಲ್ಲನೆ ಆವರಿಸಿಕೊಳ್ಳುತ್ತ ಪಶ್ಚಿಮದಿಗ್ವಧುವಿನ ದರ್ಶನಕ್ಕಾಗಿ ಹೋಗುತ್ತಿದ್ದಾನೆ. ಅವಳೂ ದಶದಿಶೆಗಳನ್ನು ಕುಂಕುಮ ಮಿಶ್ರಿತ ಜಲದಿಂದ ಸಮ್ಮಾರ್ಜನೆ ಮಾಡಿ, ಆರಕ್ತವದನಳಾಗಿ ಪತಿಯ ಮಾರ್ಗ ನಿರೀಕ್ಷಣೆಯನ್ನು ಮಾಡುತ್ತ ಆನಂದದಿಂದ ನಿಂತುಕೊಂಡಿದ್ದಾಳೆ. ಬಿಸಿಲಿನ ತಾಪವು ಮೆಲ್ಲನೆ ಕಡಿಮೆಯಾಗುತ್ತಿದೆ. ಕಿಲಕಿಲ ಶಬ್ದ ಮಾಡುತ್ತ ಆಕಾಶದಲ್ಲಿ ಹಾರಾಡುತ್ತಿದ್ದ ಪಕ್ಷಿಗಣವು ತಮ್ಮ ತಮ್ಮ ಗೂಡುಗಳ ಕಡೆಗೆ ಸಾಗುತ್ತಿದೆ. ಗೋವಳರು ಹಾಲುಕರೆಯುವ ಸಮಯವಾಯಿತೆಂದು ಲಗುಬಗೆಯಿಂದ ದನಕರುಗಳನ್ನು ಅಟ್ಟಿಕೊಂಡು ಗೃಹಾಭಿಮುಖರಾಗಿ ಸಾಗಿದ್ದಾರೆ. ಹಗಲೆಲ್ಲ ದುಡಿದು ದಣಿದಂಥ ಒಕ್ಕಲಿಗರು ಎತ್ತುಗಳನ್ನು ಬಿಟ್ಟು ಪುರಾಭಿಮುಖರಾಗಿ ಹೊರಟಿದ್ದಾರೆ.

ಇಂಥ ಸಮಯದಲ್ಲಿ ಬೆಳವಡಿಯ ಕೆಳಮಗ್ಗುಲಲ್ಲಿ ದಟ್ಟವಾಗಿ ಬೆಳೆದ ವೃಕ್ಷರಾಜಿಯಲ್ಲಿ ಕುಳಿತುಕೊಂಡು ಒರ್ವ ಮರಾಠಾ ಸರದಾರನು, ಸಂಧಿಪ್ರಕಾಶದಲ್ಲಿ ಸುಂದರವಾಗಿ ಕಾಣುತ್ತಿದ್ದ ತರುಲತೆಗಳನ್ನು ಎವೆಯಿಕ್ಕದೆ ನೋಡುತ್ತಿದ್ದನು. ಆತನ ಮುಖಲಕ್ಷಣಗಳ ಮೇಲಿಂದ ಆತನು ಯಾವುದೋ ಒಂದು ಗಹನವಿಚಾರದಲ್ಲಿ ಮಗ್ನನಾದಂತೆ ಕಾಣುತ್ತಿತ್ತು. ಹಾಗೂ ಆತನು ಮೇಲಿಂದ ಮೇಲೆ ಒಂದು ನಿರ್ದಿಷ್ಟಸ್ಥಲದ ಕಡೆಗೆ ನೋಡುತ್ತಿದ್ದದರಿಂದ, ಆತನು ಯಾರದೋ ದಾರಿಯನ್ನು ನೋಡುತ್ತಿದ್ದನೆಂಬುದು ಸಹಜವಾಗಿ ತಿಳಿಯುವಂತಿತ್ತು. ಕೆಲ ಹೊತ್ತಿನ ಮೇಲೆ ಆತನು ದುರ್ಗವನ್ನು ನೋಡುತ್ತ– "ಮಹಾರಾಜರಂತೂ ನಮಗೆ ಈ ದುರ್ಗವನ್ನು ಹೇಗಾದರೂ ಮಾಡಿ ಕೈವಶಮಾಡಿಕೊಳ್ಳಲೇಬೇಕೆಂದು ಅಪ್ಪಣೆ ಮಾಡಿ ಕಳಿಸಿದ್ದಾರೆ. ನಾನೂ ಮುತ್ತಿಗೆ ಹಾಕಿ ಇಂದಿಗೆ ಮೂರು ತಿಂಗಳಾದವು. ಕೋಟೆಯಂತೂ ಬಹು ಭದ್ರವಾಗಿರುವುದು. ಅಲ್ಲಲ್ಲಿಗೆ ಬಲವಾದ ಕಾವಲಿಟ್ಟು ಒಳಗಿನವರಿಗೆ ಅನ್ನಸಾಮಗ್ರಿಗಳು ದೊರಕದಂತೆ ಮಾಡಿದ್ದೇನೆ. ಆದರೆ..." ಎಂದು ನುಡಿಯುವಷ್ಟರಲ್ಲಿ ಏನೋ ಸಪ್ಪಳವು ಕೇಳಿಸಿತು. ಆತನು ಹೊರಳಿ ನೋಡುವಷ್ಟರಲ್ಲಿ, ಒಂದು ಮನುಷ್ಯಾಕೃತಿಯು ತನ್ನೆಡೆಗೆ ಬರುತ್ತಿರುವಂತೆ ತೋರಿತು. ಕೂಡಲೆ ಆತನು ಆನಂದದಿಂದ– "ನನ್ನ ಇಚ್ಛೆಯು

ಕೈಗೂಡಿತು!" ಎಂದು ನುಡಿಯುತ್ತ ಕರತಾಡನವನ್ನು ಮಾಡಿದನು. ಆತನ ಮೊಗದಲ್ಲಿ ವಿಜಯದ ಲಕ್ಷಣವು ಕಾಣಹತ್ತಿತು. ದೇಹದಲ್ಲಿ ವೀರಶ್ರೀಯು ಸಂಚರಿಸಿತು. ಆಗ ಆತನು ಆವೇಶದಿಂದ-" ಈ ಪ್ರಭುವೀರನು-ದುರ್ಗಾಧಿಪತಿಯನ್ನು-ಈಶಪ್ರಭುವನ್ನು-ಸೆರೆಹಿಡಿದುಕೊಂಡು ಹೋಗಿ ಮಹಾರಾಜರ ಚರಣಗಳ ಮೇಲೆ ಕೆಡವುವೆನು. ಅಂದರೇ ನಾನು ಇಲ್ಲಿಯ ವರೆಗೆ ಅವರ ಸೇವೆಮಾಡಿದ್ದು ಸಾರ್ಥಕವು." ಎನ್ನುವದರೊಳಗಾಗಿ ಮೇಲೆ ಹೇಳಿದ ವ್ಯಕ್ತಿಯು ಆತನ ಎದುರಿನಲ್ಲಿ ಬಂದು ನಮಸ್ಕಾರ ಮಾಡಿ ನಿಂತುಕೊಂಡಿತು. ಆ ವ್ಯಕ್ತಿಯು ಶಿರದಲ್ಲಿ ಬಹುಭಾರವಾದ ಹುಲ್ಲುಹೊರೆಯನ್ನು ಹೊತ್ತುಕೊಂಡಿತ್ತು. ಆ ಮನುಷ್ಯನ ಕೈಯಲ್ಲಿ ಒಂದು ಉದ್ದನ್ನ ಕೋಲು ಇದ್ದು, ಹೆಗಲ ಮೇಲೆ ಅವನು ಕಂಬಳಿಯನ್ನು ಹೊತ್ತಿದ್ದನು. ನಮ್ಮ ಸರದಾರನು ಆತನನ್ನು ಕುರಿತು-" ರಾಮಜೀ, (ಆ ವ್ಯಕ್ತಿಯ ಹೆಸರು) ನೀನು ಬಹುಜಾಗರೂಕತೆಯಿಂದ ನಾನು ಹೇಳಿದ ಕೆಲಸವನ್ನಷ್ಟು ಕೊನೆಗಾಣಿಸಿದಿಯೆಂದರೆ, ನಿನ್ನ ದಾರಿದ್ರ್ಯವು ನಾಶವಾಯಿತೆಂದೇ ತಿಳಿ. ನಿನ್ನ ಸಲುವಾಗಿ ನಾನು ಮಹಾರಾಜರ ಸನ್ನಿಧಿಯಲ್ಲಿ ಅರಿಕೆಮಾಡಿಕೊಂಡು, ಈ ದುರ್ಗವನ್ನೇ ವಂಶಪರಂಪರೆಯಾಗಿ ಉಂಬಳಿ ಹಾಕಿಸಿ ಕೊಡಿಸುವೆನು. ಆ ಮೇಲೆ ನೀನು ನಿನ್ನ ಬಳಗದವರೊಂದಿಗೆ ಸೌಖ್ಯದಿಂದ ಇಲ್ಲಿಯೇ ಇರು." ಎಂದು ಹೇಳಲು, ಅದಕ್ಕೆ ರಾಮಜಿಯು ನಮಸ್ಕರಿಸಿ-" ಸರದಾರ ಸಾಹೇಬರೆ, ಎಲ್ಲವೂ ನಿಮ್ಮನ್ನೇ ಕೂಡಿದೆ. ನಾನಂತೂ ನನಗೊಪ್ಪಿಸಿದ ಕಾರ್ಯವನ್ನು ಸಹಜವಾಗಿ ಕೊನೆಗಾಣಿಸುವೆನು. ಮಹಾರಾಜರ ಕೃಪೆಮಾತ್ರ ಆಗಬೇಕು. ನಿಮಗೆ ಹೆಚ್ಚಿಗೇನು ಹೇಳಲಿ!" ಎಂದು ನುಡಿದನು. ಬಳಿಕ ಸರದಾರನು-" ನೋಡು, ನಮ್ಮ ಈ ಒಳಸಂಚು ಯಾರಿಗೂ ತಿಳಿಯಬಾರದು. ಗುಪ್ತವಾಗಿಯೇ ಇರಲಿ, ತಿಳಿಯಿತೇ! ಮಧ್ಯರಾತ್ರಿಯ ಸಮಯಕ್ಕೆ ನಾನು ಹೇಳಿದಂತೆ ಮಾಡಿದವನೇ, ನೆಟ್ಟಗೆ ಕೆಳಗಿಳಿದು ಬಂದು ನೀನು ನನಗೆ ಸುದ್ದಿಯನ್ನರುಹು. ನನ್ನೊಡನೆ ನಡೆ, ನಿನಗೆ ನಮ್ಮ ಬಿಡಾರವನ್ನು ತೋರಿಸುತ್ತೇನೆ." ಎಂದು ಅನ್ನುತ್ತ ಮುಂದಕ್ಕೆ ಸಾಗಿದನು. ರಾಮಜಿಯು ಆತನನ್ನು ಹಿಂಬಾಲಿಸಿ ನಡೆದನು. ತುಸು ಹೊತ್ತಿನಲ್ಲಿಯೇ ಅವರು ಗಿಡಗಳ ಗುಂಪಿನಲ್ಲಿ ಅಡಗಿ ಕಾಣದಂತಾದರು.

(೨)

ಶಿವಾಜಿ ಮಹಾರಾಜನು ರಾಯಗಡದಲ್ಲಿ ಪಟ್ಟಾಭಿಷಿಕ್ತನಾದ ತರುವಾಯ ಕ್ರಿ. ಶ. ೧೬೭೬ನೆಯ ವರ್ಷದ ಕೊನೆಯಲ್ಲಿ ತಂಜಾವರ ಪ್ರಾಂತದ ಕಡೆಗೆ ದೃತ್ರ

ಯಾತ್ರೆಗಾಗಿ ಪ್ರಯಾಣಮಾಡಿದನು. ಮೂವತ್ತು ಸಾವಿರ ರಾವುತರು ಮತ್ತು ನಾಲ್ವತ್ತು ಸಾವಿರ ಕಾಲಾಳುಗಳು ಇವರನ್ನೊಡಗೊಂಡು ಮೊದಲು ಗೋವಳ ಕೊಂಡದ ಸೀಮೆಯನ್ನು ನುಗ್ಗಿದನು. ಕ್ರಿ. ಶ. ೧೬೭೭ನೆಯ ವರ್ಷದ ಮಾರ್ಚ ತಿಂಗಳಲ್ಲಿ ಕಡಪಾ, ಕರ್ನೂಲಗಳ ನೆರೆಯಲ್ಲಿ ಹಾಯ್ದು, ಶ್ರೀಶೈಲ ಮಲ್ಲಿಕಾರ್ಜುನನ ದರ್ಶನವನ್ನು ಮಾಡಿಕೊಂಡು ಪಯಣಘಟ್ಟದ ಮಾರ್ಗದಿಂದ ದ್ರಾವಿಡ ದೇಶವನ್ನು ಸೇರಿದನು. ಮುಂದೆ ಜಿಂಜಿ, ವೆಲ್ಲೂರ, ಅರಣೀ ಕೋಟೆಗಳನ್ನು ಹಿಡಿದುಕೊಂಡು ತನ್ನ ತಮ್ಮನಾದ ವೆಂಕೋಜಿಯನ್ನು ಹಣ್ಣಿಗೆ ತಂದು, ನೊಂವ್ಹೆಂಬರ ತಿಂಗಳಲ್ಲಿ ತನ್ನ ತಂದೆಯ ಉಂಬಳಿಗಳಾದ ಕೋಲಾರ, ಬೆಂಗಳೂರ, ಹೊಸಪೇಟೆ, ಬಳ್ಳಾಪೂರ, ಸೀರ್‍ಯ ಈ ಪ್ರಾಂತಗಳನ್ನು ಕೈವಶಮಾಡಿಕೊಂಡನು. ಅದೇ ವರ್ಷದ ಡಿಸೆಂಬರ ತಿಂಗಳಲ್ಲಿ ಸ್ವದೇಶಕ್ಕೆ ಮರಳಿದನು. ಬರಬರುತ್ತ ಕೊಪ್ಪಳ, ಬಹದೂರ, ಬೆಂಡಾ ಈ ಭದ್ರವಾದ ಕೋಟೆಗಳನ್ನು ಹಿಡಿದುಕೊಂಡು ಪಶ್ಚಿಮಕ್ಕೆ ತಿರುಗಿ ಧಾರವಾಡ ಜಿಲ್ಹೆಯೊಳಗಿನ ಗದಗ, ಮುಳಗುಂದ, ಲಕ್ಷ್ಮೇಶ್ವರ ಈ ಊರುಗಳ ಮೇಲಿಂದ ಹಾಯ್ದು ಬೆಳಗಾವ ಜಿಲ್ಹೆಯೊಳಗಿನ ಬೆಳವಡಿಯ ಹತ್ತರ ಬಂದನು.

ಹೀಗೆ ಶಿವಾಜಿಯ ದಂಡು ಬೆಳವಡಿಯ ಸಮೀಪಕ್ಕೆ ಬಂದಾಗ, ಅವನ ಸೈನಿಕರು ಸುತ್ತು ಮುತ್ತಲಿನ ಪ್ರದೇಶವನ್ನು ಸುಲಿಯಲಾರಂಭಿಸಿದರು. ಸ್ವಾಭಿಮಾನಿಗಳೂ ಶೂರರೂ ಆದ ಬೆಳವಡಿಯ ಜನರು, ಅವರಿಗೆ ಅಲ್ಲಿಂದಲ್ಲಿಯೇ ಪ್ರತೀಕಾರವನ್ನು ಮಾಡಿದರು. ಒಮ್ಮೆ ಶಿವಾಜಿಯ ದಂಡಿನವರು ಯಾರಿಗೂ ತಿಳಿಯದಂತೆ ತಮ್ಮಲ್ಲಿಯ ಜನರನ್ನು ಸುಲಿದು ಆಹಾರಸಾಮಗ್ರಿಯನ್ನು ಬಂಡಿಯ ಮೇಲೆ ಹೇರಿಕೊಂಡು ಹೋಗುವದನ್ನು ಕಂಡು, ಬೆಳವಡಿಯವರು ಶಿವಾಜಿಯ ಉಗ್ರಾಣದ ಎತ್ತುಗಳನ್ನೇ ಹಿಡಿದರು. ಹೀಗೆ ಮರಾಟರು ತಮ್ಮವರಿಗೆ ತೊಂದರೆ ಕೊಡಹತ್ತಿದ ಸುದ್ದಿಯು ಬೆಳವಡಿಯಲ್ಲಿ ಅತ್ತಿತ್ತ ಹರಡಿತು. ಆಗ ಧಾನ್ಯವನ್ನು ಎತ್ತಲಿಕ್ಕೆ ಶಿವಾಜಿಯ ಕಡೆಯಿಂದ ಬಂದ ಕೆಲವರನ್ನು ಬೆಳವಡಿಯವರು ಪ್ರತಿಬಂಧಿಸಿದರು. ದಿಗ್ವಿಜಯವನ್ನು ಮಾಡಿಕೊಂಡು ಬಂದ ಶಿವಾಜಿಗೆ ಇದಕ್ಕಿಂತ ಹೆಚ್ಚಿನ ನೆವವು ಬೇಕೇ ? ಅವನು ಕೂಡಲೆ ಬೆಳವಡಿಯನ್ನು ಮುತ್ತಬೇಕೆಂದು ತನ್ನ ಸೇನಾನಿಗೆ ಅಪ್ಪಣೆ ಕೊಟ್ಟನು.

ಈ ಕಾಲದಲ್ಲಿ ಈಶಪ್ರಭು ಎಂಬವನು ಬೆಳವಡಿಯ ದೇಸಾಯಿಯಾಗಿದ್ದನು; ಮತ್ತು ದಾದಾಜಿ ರಘುನಾಥ ಪ್ರಭು ಮಹಾಡಕರ ಎಂಬವನು ಶಿವಾಜಿಯ

ಸೇನಾನಾಯಕನಾಗಿದ್ದನು. ಅವನು ಮಹಾರಾಜನ ಅಪ್ಪಣೆಯಂತೆ ಬೆಳವಡಿ ಯನ್ನು ಮುತ್ತಿದನು. ಆತನು ಪ್ರಭುಜಾತಿಗೆ ಸೇರಿದವನು. ಶಿವಾಜಿ ಮಹಾ ರಾಜನ ಸೇವೆಯನ್ನು ಮನಮುಟ್ಟಿ ಮಾಡಿ ಪ್ರಸಿದ್ಧಿಹೊಂದಿದ ಸರದಾರರಲ್ಲಿ ಈತನೊಬ್ಬನು. ಕರ್ನಾಟಕದಲ್ಲಿಯ ಚಿಕ್ಕ ದೊಡ್ಡ ಪಾಳೆಯಗಾರರು ಎಬ್ಬಿಸಿದ ದೊಂಬೆಗಳನ್ನು ಮುರಿದು ಶಾಂತತೆಯನ್ನು ನೆಲೆಗೊಳಿಸಿದ ಶೂರನು ಇವನೇ.

ಬೆಳವಡಿಯು ಕರ್ನಾಟಕದಲ್ಲಿಯ ಮುಖ್ಯವಾದ ದುರ್ಗಗಳಲ್ಲಿ ಒಂದಾ ಗಿತ್ತು. ದುರ್ಗಾಧಿಪತಿಯು ಒಳ್ಳೆಯ ಶೂರನಿದ್ದದರಿಂದ ಸಾಮೋಪಚಾರದಿಂದಲೇ ದುರ್ಗವು ತನ್ನ ಕೈವಶವಾದರೆ ಗುಣವೆಂದು ಭಾವಿಸಿ ದಾದಾಜಿಯು, ಆತನ ಬಳಿ ಯಲ್ಲಿ ಒಪ್ಪಂದದ ವಿಷಯವಾಗಿ ಒಂದು ಪತ್ರ ಬರೆದು ತನ್ನ ವಿಶ್ವಾಸದ ಮನು ಷ್ಯನ ಸಂಗಡ ಅದನ್ನು ಕಳುಹಿದನು. ಅದನ್ನೋದಿಕೊಂಡು ದೇಸಾಯಿಯು "ನಾವು ಗೋವಳಕೊಂಡ ಬಾದಶಹನ ಸ್ವಾಮಿನಿಷ್ಠ ಸೇವಕರು. ಸ್ವಾಮಿಯನ್ನು ಮೋಸಗೊಳಿಸುವ ಕಲೆಯು ಕರ್ನಾಟಕಸ್ಥರಾದ ನಮಗೆ ಗೊತ್ತಿಲ್ಲ. ಇಂಥ ನೀಚಕಾರ್ಯವು ನಮ್ಮಿಂದ ಕಾಲತ್ರಯದಲ್ಲಿಯೂ ಆಗದು. ದುರ್ಗವನ್ನು ತಕ್ಕೊಂಡೇ ತೀರಬೇಕೆಂದು ನಿಮ್ಮ ಬಲವತ್ತರವಾದ ಇಚ್ಛೆಯಿದ್ದರೆ ಶಸ್ತ್ರವನ್ನು ಧರಿಸಬೇಕಾಗುವದು. ನೋಡಿರಿ; ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ." ಎಂದು ಪ್ರತ್ಯುತ್ತರವನ್ನು ಬರೆದು ಕಳುಹಿದನು. ಈಶಪ್ರಭುವು ಹೀಗೆ ಸ್ಪಷ್ಟವಾಗಿ ಹೇಳಿಕಳುಹಿದ್ದನ್ನು ಕಂಡು 'प्रथमग्रासे मक्षिकापातः' ಎಂಬಂತೆ ತನ್ನ ಮೊದಲನೆಯ ಪ್ರಯತ್ನವು ಫಲಕಾರಿಯಾಗದ್ದರಿಂದ ದಾದಾಜಿಯು ವಿಚಾರಕ್ಕೊಳ ಗಾದನು. ಹೀಗೆ ತಾನು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದರೂ ಆತನಲ್ಲಿ ಕೋಟೆ ಯನ್ನು ಗೆದ್ದೇ ತೀರಬೇಕೆಂಬ ಬಯಕೆಯು ಮಾತ್ರ ಬಲವತ್ತರವಾಗತೊಡಗಿತು. ಆದುದರಿಂದಲೇ ಆತನು ಮೇಲೆ ಹೇಳಿದಂತೆ ಕೋಟೆಯ ಸುತ್ತಲೂ ಬಹು ಭದ್ರ ವಾದ ಕಾವಲಿರಿಸಿ ಒಳಗಿನವರಿಗೆ ಏನೂ ದೊರೆಯದಂತೆ ಮಾಡಿದ್ದನು. ಹಾಗು ರಕ್ತಪಾತವಿಲ್ಲದೆ ದುರ್ಗವು ತನ್ನ ಕೈವಶವಾಗಲಾರದೆಂದು ತಿಳಿದು, ಆಗಾಗ ದುರ್ಗದ ಮೇಲೆ ಅಭಿಯೋಗಿಸುತ್ತಿದ್ದನು. ಇಂತು ಶಿವಾಜಿಯ ಅಪರಿಮಿತ ಸೈನ್ಯವು ಕೋಟೆಯನ್ನು ಮುತ್ತಿದ್ದರಿಂದ ಈಶಪ್ರಭುವು ಸ್ವಲ್ಪವೂ ಬೆದರಲಿಲ್ಲ. ಅವನು ಕೋಟೆಯ ಬಾಗಿಲುಗಳನ್ನೆಲ್ಲ ಭದ್ರವಾಗಿ ಇಕ್ಕಿಸಿ ಯುದ್ಧಕ್ಕೆ ಅಣಿಯಾ ದನು; ಮತ್ತು ವೇಳೆ ಸಾಧಿಸಿದಾಗ ಶತ್ರುಸೈನ್ಯವನ್ನು ಹೊಕ್ಕು ಅವರ ಬಲವನ್ನು ನಾಶಮಾಡುತ್ತಿದ್ದನು.

ಮುತ್ತಿಗೆಯು ಹೀಗೆ ಮೂರು ತಿಂಗಳುಗಳ ವರೆಗೆ ಸಾಗಿದರೂ ಕೋಟೆ ಯೊಳಗಿನ ಜನರು ಶತ್ರುಗಳಿಗೆ ಸೊಪ್ಪುಹಾಕದಾದರು. ಇದನ್ನು ಕಂಡು ದಾದಾ ಜಿಯು ಇನ್ನು ಭೇದೋಪಾಯದ ಹೊರತಾಗಿ ತನ್ನ ಕಾರ್ಯವು ಸಾಧಿಸಲಾ ರದೆಂದು ನಿಶ್ಚಯಿಸಿ ಭೇದವನ್ನು ನಡೆಯಿಸಿದನು. '**प्रयत्नांते परमेश्वरः**' ಎಂಬ ಉಕ್ತಿಯಂತೆ ಪ್ರಯತ್ನಮಾಡುತ್ತಿರಲು, ಮೊದಲನೆಯ ಪರಿಚ್ಛೇದ ದಲ್ಲಿ ಹೇಳಿದಂತೆ ದಾದಾಜಿಯು ತೋರಿಸಿದ ಆಮಿಷಕ್ಕೆ ಮರುಳಾಗಿ ಆತನ ವಶ ವಾಗಿ, ಸ್ವಾಮಿಕಾರ್ಯತತ್ಪರನಾದ ಈಶಪ್ರಭುವಿನಮೇಲೆ ಕುಠಾರವನ್ನೆತ್ತಲು ರಾಮಜಿಯು ಸಿದ್ಧನಾದನು. ಪಾಠಕರೇ, ಕಾಲಗತಿಗನುಸಾರವಾಗಿ ಒಂದು ಕ್ಷುದ್ರ ಕೀಟಕವು ಸಹ ಬಲಾಢ್ಯವಾದ ಗಜಪತಿಯ ನಾಶಕ್ಕೆ ಹೇಗೆ ಕಾರಣ ವಾಗುತ್ತದೆಂಬದಕ್ಕೆ ಇದೊಂದು ಉತ್ತಮವಾದ ಉದಾಹರಣವಲ್ಲವೇ ?

( ೩ )

ರವಿಯು ಅಸ್ತಮಿಸಿದನು. ಪ್ರಿಯಪತಿಯ ಅಗಲುವಿಕೆಯಿಂದ ಭೂದೇ ವಿಯ ಮುಖವು ಕಪ್ಪಿಟ್ಟಿತೋ ಏನೋ ಅನ್ನುವಂತೆ ಕತ್ತಲೆಯು ಎಲ್ಲ ಕಡೆಯ ಲ್ಲಿಯೂ ವ್ಯಾಪಿಸಿತು. ಹಗಲು ದುಡಿದು ದಣಿದ ಜನಸಮುದಾಯವನ್ನು ಕಂಡು ಕನಿಕರಬಟ್ಟು ಅವರ ಶ್ರಮಪರಿಹಾರ ಮಾಡಲೋಸುಗ ಪ್ರೇಮದಿಂದ ನಿದ್ರಾ ದೇವಿಯು ತನ್ನ ಕೃಪಾಕಟಾಕ್ಷವನ್ನು ಬೀರಿದಳು. ಮೆಲ್ಲನೆ ಸುತ್ತಲು ಶಾಂತ ತೆಯು ಪಸರಿಸಿತು. ಬೀದಿಗಳಲ್ಲಿಯ ಜನರ ಸಂಚಾರವು ಕಟ್ಟಾಯಿತು. ರಜ ನಿಯು ಮೆಲ್ಲನೆ ಯೌವನವನ್ನು ತಳೆದಳು. ಅಡವಿಯೊಳಗಿನ ಕೀಟಕಗಳ ಕಿರ್ರೆಂಬ ಸಪ್ಪಳವೂ, ಗೂಬೆಗಳ ಕರ್ಕಶರವವೂ, ಕೋಟೆಯ ಮೇಲಣ ಕಾವಲು ಗಾರರ 'ಹುಷಾರ, ಹುಷಾರ' ಎಂಬ ಒದರುವ ಧ್ವನಿಯೂ ನಡುನಡುವೆ ಶಾಂತತೆಯನ್ನು ಭಂಗಗೊಳಿಸುತ್ತಿದ್ದುವು.

ಇಂಥ ಶಾಂತಸಮಯದಲ್ಲಿ ನಮ್ಮ ಮರಾಠಾ ಸರದಾರನ ಪಾಳಯದಲ್ಲಿ ಮೆಲ್ಲನೆ ಸೈನಿಕರ ಸುಳಿದಾಟವು ನಡೆದಿತ್ತು. ಕೆಲವರು ಮೈಯಲ್ಲಿ ಉಕ್ಕಿನ ಅಂಗಿ ಗಳನ್ನು ಧರಿಸುತ್ತಿದ್ದರು. ಹಲವರು ಶಸ್ತ್ರಗಳನ್ನು ಮಸೆದು ಹದನ ಮಾಡುತ್ತಿ ದ್ದರು. ಶಸ್ತ್ರಗಳು ಹದನವಾದವೋ ಇಲ್ಲವೋ ಎಂದು ಕೆಲವರು ಎಡಗೈ ಯಲ್ಲಿ ಖಡ್ಗವನ್ನು ಹಿಡಿದು ಬಲಗೈಯಿಂದ ಅದರ ತುದಿಯ ವರೆಗೂ ಬೆರಳನ್ನಾ ಡಿಸಿ ಸೂಕ್ಷ್ಮದೃಷ್ಟಿಯಿಂದ ನೋಡುತ್ತಿದ್ದರು. ಹೀಗೆ ಎಲ್ಲ ಸೈನಿಕರು ತಮ್ಮ ತಮ್ಮ ಕಾರ್ಯಗಳಲ್ಲಿ ಮಗ್ನರಾಗಿದ್ದರು. ಅವರ ಬಾಯಿಯಿಂದ ಒಂದು ಶಬ್ದವುಸಹ ಹೊರ

ಡುತ್ತಿರಲಿಲ್ಲ. ಮುಂದೆ ಸ್ವಲ್ಪ ವೇಳೆಯಲ್ಲಿಯೇ ಎಲ್ಲರೂ ಶಸ್ತ್ರಾಸ್ತ್ರಗಳನ್ನು ಧರಿಸಿ ಸಿದ್ಧರಾದರು. ದುರ್ಗದ ಹೆಬ್ಬಾಗಿಲ ಬಳಿಯಲ್ಲಿ ಹೋಗಿ ನಿಲ್ಲುವ ಸೂಚನೆಯಾಯಿತು. ಕೂಡಲೆ ಎಲ್ಲರು ಸಾಲಾಗಿ ಮೆಲ್ಲನೆ ಹೊರಟರು. ಹೀಗೆ ಸೈನ್ಯವೆಲ್ಲ ಬಾಗಿಲ ಬಳಿ ಬಂದು ನಿಲ್ಲಲು, ದಾದಾಜಿಯು ತನ್ನ ಕಪಟತಂತ್ರದ ಪರಿಣಾಮವೇನಾಗುವದೆಂದು ಉತ್ಸುಕನಾಗಿ ನೋಡುತ್ತ ನಿಂತಿದ್ದನು; ಇಷ್ಟರಲ್ಲಿ, ಒಮ್ಮೆಲೆ ಆನಂದಭರಿತನಾಗಿ ತನ್ನ ಸೈನಿಕರನ್ನು ಕುರಿತು-'ಆಕೋ, ಅಲ್ಲಿ ನೋಡಿರಿ! ಒರ್ವ ಮನುಷ್ಯನು ಕೋಟೆಯ ಮೇಲಿಂದ ಕೆಳಗಿಳಿದು ಬರುತ್ತಿರುವದು ಕಾಣುವದಿಲ್ಲವೇ ? ಆತನು ಕೆಳಗಿಳಿದು ಬಂದೊಡನೆ ದುರ್ಗದಲ್ಲಿ ಅಗ್ನಿಪ್ರಲಯವಾಗುವದು. ಅದೇ ಸಮಯಕ್ಕೆ ನಾವು ಕೋಟೆಗೆ ಲಗ್ಗೆ ಹತ್ತಬೇಕು. ತಿಳಿಯಿತೇ !' ಎಂದು ನುಡಿಯುತ್ತಿರಲು, ಮೇಲೆ ಹೇಳಿದ ವ್ಯಕ್ತಿಯು ದಾದಾಜಿಯ ಬಳಿಗೆ ಬಂದು ನಮಸ್ಕರಿಸಿ-'ನಿಮ್ಮ ಹೇಳಿಕೆಯಂತೆ ಎಲ್ಲ ಕಾರ್ಯವನ್ನು ಮಾಡಿದೆನು' ಎಂದು ಹೇಳಿತು. ಅತ್ತ ಕೋಟೆಯಲ್ಲಿ ಉರಿಯು ಕಾಣತೊಡಗಿತು. ಬರಬರುತ್ತ ಅದು ಬೆಳೆದು ದೊಡ್ಡದಾಗಿ ದುರ್ಗವನ್ನೆಲ್ಲ ವ್ಯಾಪಿಸಿಸಂತೆ ಕಂಡಿತು. ಒಡನೆಯೆ ಸೈನಿಕರು ಮಹಾದ್ವಾರವನ್ನು ಮುರಿದು ಒಳನುಗ್ಗಲು ಪ್ರಯತ್ನಿಸತೊಡಗಿದರು. ಆಗ ಮಧ್ಯರಾತ್ರಿಯು ಮೀರಿತ್ತು. ಶಾಂತತೆಯು ಎಲ್ಲ ಕಡೆಯಲ್ಲಿಯೂ ನೆಲೆಗೊಂಡಿತ್ತು. ಇಂಥ ಅಪರಾತ್ರಿಯಲ್ಲಿ ತನ್ನ ಜನರಲ್ಲಿ ಗೊಂದಲವೆದ್ದುದನ್ನು ಕಂಡು, ದುರ್ಗಾಧಿಪತಿಯು ಗಾಬರಿಯಾಗಿ, ಲಗುಬಗೆಯಿಂದ ತನ್ನ ಶಯನಗೃಹವನ್ನು ಬಿಟ್ಟು ಖಡ್ಗಪಾಣಿಯಾಗಿ ಹೊರಬಿದ್ದು ನೋಡುತ್ತಾನೆ ! ಸೈನಿಕರ ಗೃಹಗಳೆಲ್ಲ ಅಗ್ನಿಮುಖದಲ್ಲಿ ಬೀಳುತ್ತಿವೆ! ಅವರು ಭಯಗ್ರಸ್ತರಾಗಿ ಗೋಳಿಡುತ್ತಿದ್ದಾರೆ. ಹೀಗೆ ಅಕಸ್ಮಾತ್ತಾಗಿ ದುರ್ಗದಲ್ಲಿ ವಹ್ನಿಯು ಉದ್ಭವಿಸಿದುದನ್ನು ಕಂಡು, ಆ ಛಾಣಾಕ್ಷನು ನೆಟ್ಟಗೆ ದುರ್ಗದ ಮಹಾದ್ವಾರದ ಬಳಿಗೆ ಧಾವಿಸಿ ಹೋದನು. ಅಷ್ಟರಲ್ಲಿ ಶತ್ರುಗಳು ದುರ್ಗದ ಬಾಗಿಲವನ್ನು ಮುರಿಯತೊಡಗಿದ್ದರು. ಅದನ್ನು ಕಂಡ ಕೂಡಲೆ, ದುರ್ಗಾಧಿಪತಿಯ ಬಾಹುಗಳು ಸ್ಫುರಣಹೊಂದಿದವು. ನೇತ್ರಗಳು ಆರಕ್ತವಾದವು. ಸಂತಾಪದಿಂದ ಆತನ ತುಟಿಗಳು ನಡುಗಹತ್ತಿದವು. ವೀರಾವೇಶದಿಂದ ಆತನು ತೊಟ್ಟುಕೊಂಡಿದ್ದ ಅಂಗಿಯ ಕಸೆಗಳು ಚಟಚಟನೆ ಹರಿದವು. ಆಗ ಆತನು ಸಿಂಹಗರ್ಜನೆಯಿಂದ-'ಈ ಶೂರನು ಎಂಥ ಸಂಕಟಗಳು ಬಂದರೂ ಕರ್ತವ್ಯಪರಾಙ್ಮುಖನಾಗಲಾರನು!, ಎಂದು ನುಡಿದವನೇ, ಯುದ್ಧಸಾಂಕೇತಿಕ ತುತೂರಿಯನ್ನೂದಿದನು.

ಇತ್ತ ಅಗ್ನಿಯು ತನ್ನ ಕಾಯಕವನ್ನು ನಡಿಸೇ ಇತ್ತು. ವಾಚಕರೇ, ಪ್ರಲಯಕಾಲದ ಭೀಕರವಾದ ರಾತ್ರಿಯೇ ಅದು. ನಿದ್ರಾಂಗನೆಯ ವಶದಲ್ಲಿದ್ದ ಜನರನ್ನು ಅಗ್ನಿಯು ಅಕಸ್ಮಾತ್ತಾಗಿ ಮುತ್ತಿದ್ದರಿಂದ, ಝಳತಾಕಿ ಎಚ್ಚತ್ತು ಪ್ರತಿಯೊಂದು ವ್ಯಕ್ತಿಯು ತನ್ನ ಜೀವರಕ್ಷಣಾರ್ಥವಾಗಿ ಗೃಹದಿಂದ ಹೊರಬೀಳ ಹತ್ತಿತು. ಈ ಗೊಂದಲದಲ್ಲಿ ತಾಯಿಯೊಂದು ಕಡೆ, ಮಗಳೊಂದು ಕಡೆ, ತಂದೆಯೊಂದು ಕಡೆ, ಮಗನೊಂದು ಕಡೆ, ಹೀಗಾಗಿ ಒಬ್ಬರಿಗೊಬ್ಬರು ಭೆಟ್ಟಿಯಾಗಲೊಲ್ಲರು. ಎಲ್ಲರೂ ಗೋಳಿಡುತ್ತಿದ್ದರು. ಬೆಂಕಿಯ ಭಯದಿಂದ ಪಾರಾದ ಜನರು ತಮ್ಮ ತಮ್ಮ ಆಪ್ತರನ್ನು ಹುಡುಕತೊಡಗಿದ್ದರು. ಸುತ್ತಲೂ ಹಾಹಾಕಾರ ವೆದ್ದಿತು. ಸುಡುತ್ತಿದ್ದ ತೊಲೆಗಳ ಕಡಕಡಾಟವೂ ಉರಿಯಲ್ಲಿ ಸಿಕ್ಕು ಒದ್ದಾಡುತ್ತಿದ್ದ ಜನರ ಕರ್ಣಕಠೋರವಾದ ಚೀತ್ಕಾರವೂ, ಅಳ್ಳೆದೆಯ ಜನರ ಹೃದಯವನ್ನು ಕರಗಿಸಿ ನೀರು ಮಾಡುತ್ತಿದ್ದವು. ತೋಫಿನ ಗುಂಡುಗಳಿಗೆ ಎದೆಗೊಟ್ಟು ನಿಲ್ಲುವ ಶೂರಪುರುಷರು ಸಹ ಅಗ್ನಿಯ ಅಕರಾಳ ವಿಕರಾಳ ಸ್ವರೂಪವನ್ನು ಕಂಡು ಹತಾಶರಾದರು. ಅವರ ಬುದ್ಧಿಯು ಭ್ರಮಿಸಿದಂತಾಗಿ, ಮುಂದೇನು ಮಾಡಬೇಕೆಂಬುದು ಅವರಿಗೆ ತಿಳಿಯದ ಹಾಗಾಯಿತು. ಅಷ್ಟರಲ್ಲಿ ಯುದ್ಧಕ್ಕೆ ಸಜ್ಜಾಗಲು ಸೂಚಿಸುವ ತುತೂರಿಯ ಸ್ವರವು ಅವರ ಕರ್ಣರಂಧ್ರವನ್ನು ಪ್ರವೇಶಿಸಿತು. ಕೂಡಲೆ ಅವರು ನಿದ್ರೆಯಿಂದ ಎಚ್ಚತ್ತವರಂತೆ ಜಾಗೃತರಾಗಿ ಶಸ್ತ್ರಗಳನ್ನು ದೊರಕಿಸುವದಕ್ಕಾಗಿ ಗೃಹಗಳನ್ನು ಪ್ರವೇಶಿಸಲು ಯತ್ನಿಸಿ, ಅಗ್ನಿಯ ಮುಂದೆ ತಮ್ಮ ಆಟವು ಸಾಗದ್ದರಿಂದ ಶಸ್ತ್ರಾಗಾರದ ಕಡೆಗೆ ಧಾವಿಸಿದರು. 'ಶತ್ರುಗಳು ದುರ್ಗದ ಮೇಲೆ ಏರಿಬಂದರು!' ಎಂಬ ಸುದ್ದಿಯು ಸುತ್ತಲು ಪಸರಿಸಿತು. ಚಾವಡಿಯಲ್ಲಿದ್ದ ಸೈನಿಕರು ತುಬಾಕಿಗಳನ್ನು ಹಾರಿಸಹತ್ತಿದರು. ತೋಪುಗಳೂ ಹಾರಹತ್ತಿದವು. ಹೆಂಡರು, ಮಕ್ಕಳು, ಧನ, ಗೃಹ, ಮೊದಲಾದವುಗಳನ್ನೆಲ್ಲ ತೃಣೀಕರಿಸಿ ಗಂಭೀರವೃತ್ತಿಯಿಂದ ಸ್ವಾಮಿಕಾರ್ಯಾರ್ಥವಾಗಿ ಪ್ರತಿಯೊಬ್ಬ ಸೈನಿಕನು ಶತ್ರುವಿನ ಸಂಗಡ ಕಾಳಗಮಾಡಲು ಹೊರಟನು.

ಅಷ್ಟರಲ್ಲಿ ಅರಿಗಳು ಮತ್ತಗಜಗಳ ಸಾಹಾಯ್ಯದಿಂದ ದುರ್ಗದ ದ್ವಾರಗಳನ್ನು ಮುರಿದು ಒಳಗೆ ನುಗ್ಗಹತ್ತಿದರು. ಆದರೆ ಚೌಕಿಯಲ್ಲಿದ್ದ ಕೆಲ ಜನರೇ, ತಮಗೆ ಬೆಂಬಲವಾಗಿ ದುರ್ಗಾಧಿಪತಿಯು ಬರುವ ವರೆಗೆ ಒಳ್ಳೆಯ ಶೌರ್ಯದಿಂದ ಕಾದುತ್ತ ಶತ್ರುಗಳನ್ನು ತಡೆದು ನಿಲ್ಲಿಸಿದರು. ಅಲ್ಪಾವಧಿಯಲ್ಲಿಯೇ ಉಳಿದ ಸೈನಿಕರು ಅಲ್ಲಿಗೆ ಬಂದರು. ಯುದ್ಧಕ್ಕೆ ಆರಂಭವಾಯಿತು. ಎರಡೂ ಬಣದ

ವರು ಕೈಗೆ ಕೈಗೊಟ್ಟು ಒಳ್ಳೆಯ ರಭಸದಿಂದ ಕಾದಹತ್ತಿದರು. ಅತ್ತ ಬೇಗೆಯು ದುರ್ಗವನ್ನೆಲ್ಲ ವ್ಯಾಪಿಸಿತು. ಜ್ವಾಲೆಗಳು ಆಕಾಶವನ್ನು ಸುಡಲು ಯತ್ನಿಸುವವೋ ಏನೋ ಅನ್ನುವಷ್ಟು ದೂರಹೋಗಹತ್ತಿದವು. ಇತ್ತ ಶಸ್ತ್ರಗಳ ಇರಿದಾಟದಿಂದ ಶೂರರ ಶರೀರದಲ್ಲಿಯ ನೆತ್ತರವು ಭರದಿಂದ ಚಿಮ್ಮಹತ್ತಿತು. ಅತ್ತ ವಹ್ನಿಯು ಸುಯ್ ಸುಯ್ ಸಪ್ಪಳಮಾಡುತ್ತ ಒತ್ತರದಿಂದ ಬೆಳೆಯುತೊಡಗಿತು. ಇತ್ತ ದುರ್ಗಾಧಿಪತಿಯು ಸೈನಿಕರನ್ನು ಹುರಿದುಂಬಿಸುತ್ತ ವೈರಿಗಳನ್ನು ನೆಲಕ್ಕುರುಳಿಸ ತೊಡಗಿದ್ದನು. ಅತ್ತ ಅಗ್ನಿಯು ಅಂತಸ್ತಿನ ಮನೆಗಳನ್ನು ಸುಟ್ಟು ಭಸ್ಮಮಾಡ ತೊಡಗಿದ್ದದರಿಂದ ದುರ್ಗವೆಲ್ಲ ಹೊಗೆಯಿಂದ ಮುಸುಕಿತು. ರಣಾಂಗಣವೆಲ್ಲ ಪದಾತಿಗಳ ಪಾದಧೂಳಿಯಿಂದ ವ್ಯಾಪಿಸಿತು. ಹೀಗೆ ಎರಡೂ ಮಗ್ಗಲಿನಲ್ಲಿ ಗೊಂದಲ ವೆದ್ದಿತು. ಎದುರಾಳಿಗಳು ಕನ್ನಡಿಗರ ರಭಸವನ್ನು ತಾಳಲಾರದೆ ಮೆಲ್ಲನೆ ಹಿಂದೆಗೆಯ ತೊಡಗಿದರು. ಅದನ್ನು ಕಂಡು ದಾದಾಜಿಯು 'ರಾವಜೀ, ಕಾಲವು ಕಠಿಣ ಬಂದೊದಗಿತು. ಸುಮ್ಮನೆ ಸ್ವಜನಸಂಹಾರಮಾಡಿಸುವದರಲ್ಲೇನೂ ಅರ್ಥವಿಲ್ಲ. ನೀವು ಒಂದು ಭಾಗವನ್ನು ತಕ್ಕೊಂಡು ಕೊತ್ತಳದ ಮೇಲಿಂದ ಏರಿ ಹೋಗುವ ಉದ್ಯೋಗಕ್ಕೆ ತೊಡಗಿರಿ. ನಾನು ದುರ್ಗದ ಹಿಮ್ಮಗ್ಗಲಿನಿಂದ ಶತ್ರುಗಳನ್ನಿದಿರಿಸುವೆನು ಉಳಿದವರು ಇಲ್ಲಿಯೇ ಕಾದುತ್ತ ನಿಂತುಕೊಳ್ಳಲಿ. ಹೀಗೆ ಸುತ್ತಲಿಂದ ಮುತ್ತಿದ್ದರೆ ಶತ್ರುಗಳು ಹಿಮ್ಮೆಟ್ಟಲಾರರು. ಹೋಗಿರಿ. ತೀವ್ರ ಹೋಗಿರಿ. ಇಲ್ಲದಿದ್ದರೆ ಅಪಜಯವು ನಮ್ಮ ಪಾಲಿಗೆ ಕಟ್ಟಿಟ್ಟಂತೆಯೇ. ಬಳಿಕ ನಾವು ಮಹಾರಾಜರ ಮುಂದೆ ಯಾವ ಮುಖದಿಂದ ನಿಲ್ಲುವದು?' ಎಂದು ನುಡಿದನು

ರಾವಜಿಯು ಮರಾಟರ ದಳದ ಒಂದು ಭಾಗದ ಜಮಾದಾರನು. ಆತನು ಚತುರನೂ ಜಾಣನೂ ಇದ್ದನು. ಸೇನಾನಿಯು ಸೂಚಿಸಿದ ಯುಕ್ತಿಯು ಆತನಿಗೆ ಸರಿದೋರಿತು. ಕೂಡಲೆ ಆತನು ತನ್ನ ಜನರನ್ನು ತಕ್ಕೊಂಡು, ಕೊತ್ತಳದ ಹತ್ತರ ಹೋಗಿ, ದುರ್ಗವನ್ನೇರಹತ್ತಿದನು. ದಾದಾಜಿಯು ಮೆಲ್ಲನೆ ಸರಿಯುತ್ತ, ಸರಿಯುತ್ತ. ಶತ್ರುಗಳು ತನ್ನ ಕೈಯೊಳಗೆ ಸಿಕ್ಕ ಕೂಡಲೆ ಸುತ್ತಲಿಂದ ಒಮ್ಮೆಲೆ ಮುತ್ತಿ ಅವರನ್ನು ಸಂಹರಿಸಹತ್ತಿದನು. ಈಗ ಮಾತ್ರ ಕನ್ನಡಿಗರು ತತ್ತರಿಸಿದರು. ಮರಾಟರ ಮುಂದೆ ಅವರ ಆಟವು ಸಾಗದಾಯಿತು. ಇದನ್ನು ಕಂಡು ದೇಸಾಯಿಯು, ಠಾಣೇದಾರ ಹಾಗೂ ಹವಾಲದಾರರ ಹತ್ತರ ಬಂದು 'ಪ್ರಸಂಗವು ಕಠಿಣವಿರುವದು. ಮರಾಟರು ಸುತ್ತಲಿಂದಲೂ ಕಾದತೊಡಗಿದರು. ನಾವು ಬೆಂಕಿಯನ್ನು ನಂದಿಸುವದರಲ್ಲಿ ತೊಡಗಿರಲು, ಅವರು ನಮ್ಮ ಆಯಕಟ್ಟಿನ ಸ್ಥಳಗಳ

ನ್ನೆಲ್ಲ ಸ್ವಾಧೀನಮಾಡಿಕೊಂಡಿದ್ದಾರೆ. ಅವರ ದೊಡ್ಡ ದಂಡಿನೊಡನೆ ನಾವು ನಮ್ಮ ಅಲ್ಪಸಂಖ್ಯಾಕರಾದ ಐನೂರು ಜನರಿಂದ ಕೂಡಿಕೊಂಡು ಎಷ್ಟು ಕಾದಾಡೇವು? ಸದ್ಯಕ್ಕೆ ನಮಗೆ ಹೊಸ ಸಾಹಾಯ್ಯ ದೊರಕುವ ಆಶೆಯೂ ಇಲ್ಲ. ಮಾನಹೋಗುವ ಹೊತ್ತು ಬಂದೊದಗಿತು. ಆದರೂ ಚಿಂತೆಯಿಲ್ಲ. ಯಾರ ಉಪ್ಪಿನಿಂದ ನಮ್ಮ ದೇಹವನ್ನು ಬಳೆಯಿಸಿರುವೆವೋ, ಅವರ ಸೇವೆಯಲ್ಲಿಯೆ ನಮ್ಮ ದೇಹವನ್ನು ನೀಗಿ ಸಾರ್ಥಕಮಾಡಿಕೊಳ್ಳುವ. ಧೈರ್ಯಗುಂದಿದರೆ ಕೆಲಸ ಕೆಡುವದು. ತಿಳಿಯಿತೇ?" ಎನ್ನಲು, ಅದಕ್ಕೆ ಅವರು 'ದುರ್ಗಾಧಿಪತಿಗಳೇ, ಹೆಂಡಿರುಮಕ್ಕಳು ಅಗ್ನಿಮುಖ ದಲ್ಲಿ ಬಿದ್ದು ಒದ್ದಾಡುತ್ತಿರಲು ಅವರ ಸಲುವಾಗಿ ತುಸುವಾದರು ಚಿಂತಿಸದೆ ಯುದ್ಧಕ್ಕೆ ಸಜ್ಜಾದುದು ಸ್ವಾಮಿನಿಷ್ಠೆಯನ್ನು ತೋರಿಸುವದಕ್ಕಾಗಿಯೇ ಅಲ್ಲವೆ? ಕನ್ನಡಿಗರಾದ ನಾವು ಶತ್ರುಗಳಿಗೆ ಎಂದಿಗೂ ಬೆನ್ನುತೋರಿಸಲಾರೆವು. ನಿಮ್ಮ ಮನಸ್ಸಿನಲ್ಲಿ ಸದ್ಯದ ಕಠಿನಪ್ರಸಂಗವನ್ನು ಕಂಡು ಸಂಶಯವುಂಟಾಗಿದ್ದರೆ ಅದನ್ನು ಕಿತ್ತೊಗೆಯಿರಿ.' ಎಂದು ಗಾಂಭೀರ್ಯದಿಂದ ಹೇಳಿದರು.

ಅವರ ಭಾಷಣವನ್ನು ಕೇಳಿ ಆನಂದಿತನಾದ ಈಶಪ್ರಭುವು ' ಶಾಬಾಸ, ಯೋಗ್ಯಮಾತಾಡಿದಿರಿ. ನಿಮ್ಮ ನಿಶ್ಚಯವನ್ನು ನೋಡಿ ನನಗೆ ಬಹಳ ಆನಂದವಾಯಿತು. ನನ್ನ ಪ್ರಿಯ ಮಿತ್ರರೇ, ನಮ್ಮ ಕರ್ತವ್ಯವನ್ನು ನಾವು ಒಮ್ಮನಸ್ಸಿನಿಂದ ಮಾಡುವ; ಯಶಸ್ಸು ಕೊಡಲು ಈಶನು ಸಮರ್ಥನಿದ್ದಾನೆ. ಸದ್ಯಕ್ಕೆ ಅಗ್ನಿಯು ನಮ್ಮ ದುರ್ಗವನ್ನು ದಹಿಸುತ್ತಿರುವದರಿಂದ, ಆತನು ನಮ್ಮ ಮೇಲೊಂದು ಉಪ ಕಾರವನ್ನು ಮಾಡಿದಂತೆಯೆ ಆಗಿದೆ. ಯಾಕಂದರೆ ಪ್ರಕಾಶದಲ್ಲಿ ವೈರಿಗಳ ಪ್ರತಿಯೊಂದು ಕಾರ್ಯವು ನಮಗೆ ನಿಚ್ಚಳವಾಗಿ ಕಾಣುವುದು. ಅಕೋ, ಅಲ್ಲಿ ನೋಡಿರಿ! ಶತ್ರುಗಳು ಹೇಗೆ ಹಗ್ಗಗಳ ಸಾಹಾಯ್ಯದಿಂದ ದುರ್ಗದ ಮೇಲೆ ಏರ ತೊಡಗಿದ್ದಾರೆ! ಮಿತ್ರರೇ, ಮಾತಾಡುತ್ತ ನಿಲ್ಲುವ ಸಮಯವಿದಲ್ಲ. ನಮ್ಮ ಸೈನ್ಯದಲ್ಲಿ ಮೂರು ಭಾಗಗಳನ್ನು ಮಾಡಿರಿ. ಒಂದು ಭಾಗವನ್ನು ತಕ್ಕೊಂಡು ಹವಾಲದಾರರು ದುರ್ಗದ ಮಹಾದ್ವಾರಗಳನ್ನು ರಕ್ಷಿಸಲಿ. ಎರಡನೆಯ ಭಾಗವನ್ನು ತಕ್ಕೊಂಡು, ಠಾಣೇದಾರರೇ, ನೀವು ಕೊತ್ತಳಗಳನ್ನು ಕಾಪಾಡಿರಿ. ಮೂರನೆಯದನ್ನು ತಕ್ಕೊಂಡು ನಾನು ಶತ್ರುಸೈನ್ಯದಲ್ಲಿ ಹೋಗುವೆನು. ಹೀಗೆಂದು ದುರ್ಗಾಧಿಪತಿಯು ತನ್ನ ಜನರೊಂದಿಗೆ ರಿಪುಸೈನ್ಯದಲ್ಲಿ ಹೊಕ್ಕನು. ಠಾಣೇದಾರನೂ ಹವಾಲದಾರನೂ ತಮ್ಮ ತಮ್ಮ ಕಾರ್ಯವನ್ನು ದಕ್ಷತೆಯಿಂದ ಮಾಡತೊಡಗಿದರು.

( ೪ )

ಬೆಳವಡಿ ಕಿಲ್ಲೆಯು ಗೋವಳಕೊಂಡ ಬಾದಶಹನ ವಶದಲ್ಲಿತ್ತು. ಅದರ ರಕ್ಷಣಾರ್ಥವಾಗಿ ಬಾದಶಹನು ದುರ್ಗಾಧಿಪತಿ, ಠಾಣೇದಾರ (ಸ್ಥಾನಾಧಿಕಾರಿ) ಹವಾಲದಾರ ( ಕೊತವಾಲ ) ಹೀಗೆ ಅನುಕ್ರಮವಾಗಿ ಮೂವರು ಮುಖ್ಯಾಧಿಕಾರಿಗಳನ್ನು ನಿಯಮಿಸಿದ್ದನು. ಠಾಣೇದಾರನೂ ಹವಾಲದಾರನೂ ದುರ್ಗಾಧಿಪತಿಗೆ ಅಂಕಿತರು. ಹವಾಲದಾರನು ಸೈನ್ಯದ ವ್ಯವಸ್ಥೆಯನ್ನು ನೋಡುವನು. ಠಾಣೇದಾರನು ಕಂದಾಯದ ಕೆಲಸವನ್ನೂ ಸೇನಾಪತಿಯ ಕೆಲಸವನ್ನೂ ಮಾಡುವನು. ದುರ್ಗಾಧಿಪತಿಯು ಎಲ್ಲ ಕೆಲಸಗಳ ಮೇಲ್ವಿಚಾರಣೆಯನ್ನು ಮಾಡುವನು. ಆತನ ಅಪ್ಪಣೆಯಂತೆ ದುರ್ಗದಲ್ಲಿಯ ಎಲ್ಲ ಕಾರ್ಯಗಳು ಜರುಗಿಸಲ್ಪಡುವವು. ಆತನು ಸರ್ವಾಧಿಕಾರಿಯು. ದುರ್ಗದಲ್ಲಿಯ ವ್ಯವಸ್ಥೆಯು ಹೀಗಿದ್ದಿತು. ಇರಲಿ.

ವೀರರೆಲ್ಲರು ಯುದ್ಧದಲ್ಲಿ ತೊಡಗಿದ್ದುದರಿಂದಲೂ ತಮ್ಮ ಗೃಹಗಳೆಲ್ಲ ಅಗ್ನಿಮುಖದಲ್ಲಿ ಬಿದ್ದುದರಿಂದಲೂ ಎಲ್ಲ ಹೆಂಗಳೆಯರು ದುರ್ಗಾಧಿಪತಿಯ ಗೃಹದಲ್ಲಿ ನೆರೆದಿದ್ದರು. ದೇಸಾಯಿಯ ಗೃಹವು ದುರ್ಗದ ಮಧ್ಯಪ್ರದೇಶದಲ್ಲಿದ್ದುದರಿಂದ ಅದಕ್ಕೆ ಅಗ್ನಿಯ ಭಯವಿರಲಿಲ್ಲ. ಆದುದರಿಂದ ದುರ್ಗದಲ್ಲಿಯ ಎಲ್ಲ ಸ್ತ್ರೀಯರೂ, ಬಾಲರೂ, ವೃದ್ಧರೂ ಅಲ್ಲಿಯೇ ನೆರೆದಿದ್ದರು. ಕಮಲಮುಖಿಯರ ಮುಖಗಳು ಚಿಂತಾಗ್ನಿಯಿಂದ ಬಾಡಿದ್ದವು. ಯಾರ ಮುಖದಲ್ಲಿಯೂ ಕಳೆಯಿರಲಿಲ್ಲ. ಎಲ್ಲರೂ ಹೌಹಾರಿ ಹೋಗಿದ್ದರು. ಅಷ್ಟರಲ್ಲಿ ಒಬ್ಬ ಸೈನಿಕನು ಧಾವಿಸುತ್ತ ಅವರೆಡೆಗೆ ಬಂದನು. ಕೂಡಲೆ ಎಲ್ಲರೂ ಅವನ ಸುತ್ತಲೂ ನೆರೆದರು ಆಗ ದುರ್ಗಾಧಿಪತಿಯ ವೀರಪತ್ನಿಯಾದ ಮಲ್ಲವ್ವನು ಆತನಿಗೆ–"ಹೇಳು, ಕಾಳಗದ ಸಮಾಚಾರವೇನಿದೆ? ಎಲ್ಲವನ್ನೂ ಹೇಳು. ಎಲ್ಲರೂ ಸುಖವಾಗಿದ್ದಾರೆಯೇ?" ಎನ್ನಲು, ಅವನು 'ತಾಯೀ ಏನೆಂದು ಹೇಳಲಿ!' ಎಂದು ದುಃಖದಿಂದ ನಿಟ್ಟುಸಿರುಬಿಟ್ಟನು.

ಅದನ್ನು ನೋಡಿ-'ಹೇಳು, ಏನಿದ್ದುದನ್ನು ಶೀಘ್ರ ಹೇಳು.' ಎಂದು ಸತಿಯು ಭಯಾನ್ವಿತಳಾಗಿ ಕೇಳಿದಳು. ಆಗ ಆತನು–" ತಾಯೀ, ಹೇಳುವೆನು ಕೇಳಿರಿ. ಮರಾಟರು ಎಲ್ಲ ಕಡೆಯಿಂದಲೂ ನಮ್ಮವರನ್ನು ಹೊಡೆದು ಕೆಡವತೊಡಗಿದ್ದರಿಂದಲೂ, ಹೊಸದಾಗಿ ಸಾಹಾಯ್ಯ ಬರುವ ಆಶೆಯಿಲ್ಲದ್ದರಿಂದಲೂ ನಮ್ಮ ಧನಿಯರು ಧೈರ್ಯಗುಂದಿದರು. ಆದುದರಿಂದ ಕೂಡಲೆ ಅವರು ತಮ್ಮ ಸೈನ್ಯದಲ್ಲಿ ಮೂರು ಭಾಗಗಳನ್ನು ಮಾಡಿ, ಒಂದು ಭಾಗಕ್ಕೆ ಹವಾಲದಾರರನ್ನು ನಿಯಮಿಸಿ ಅವರಿಗೆ ದ್ವಾರ ರಕ್ಷಣೆಯ ಕಾರ್ಯವನ್ನು ಒಪ್ಪಿಸಿದರು. ಮತ್ತೊಂದು ಭಾಗವನ್ನು ಠಾಣೇ

ದಾರರ ವಶಕ್ಕೆ ಕೊಟ್ಟು ಕೊತ್ತಳದ ರಕ್ಷಣಾರ್ಥವಾಗಿ ಅವರನ್ನು ಕಳುಹಿದರು. ಮೂರನೆಯೆದನ್ನು ತಾವು ತಕ್ಕೊಂಡು ರಿಪುಸೈನ್ಯವನ್ನು ಹೊಕ್ಕರು. ಹವಾಲದಾರರು ದ್ವಾರಗಳನ್ನು ಒಳ್ಳೆಯ ಶೌರ್ಯದಿಂದ ರಕ್ಷಿಸತೊಡಗಿದರು. ಆದರೆ ನಮ್ಮ ದುರ್ದೈವವು! ಅವರು ವೈರಿಯ ತುಬಾಕಿಯ ಗುಂಡಿಗೆ ತುತ್ತಾದರು. ನಶ್ವರ ದೇಹವನ್ನು ತ್ಯಜಿಸಿ ವೀರಸ್ವರ್ಗವನ್ನು ಪಡೆದರು. ನಡುನೀರಿನೊಳಗೆ ನಮ್ಮ ಕೈಬಿಟ್ಟರು. ಸ್ವಾಮಿಯು ಮರೆಯಾದದ್ದರಿಂದ ನಮ್ಮವರೆಲ್ಲ ಬೆದರಿದರು. ಶತ್ರುಗಳು ಕನ್ನಡಿಗರನ್ನು ಕುರಿಗಳಂತೆ ಸಂಹರಿಸತೊಡಗಿದರು. ಇದನ್ನು ತಿಳಿದು ಠಾಣೇದಾರ ದೊರೆಗಳು ಕೊತ್ತಳದ ಹತ್ತರ ಯುದ್ಧಮಾಡುವದನ್ನು ನಿಲ್ಲಿಸಿ, ಮಹಾದ್ವಾರದಿಂದ ಒಳನುಗ್ಗುತ್ತಿದ್ದ ವೈರಿಗಳನ್ನು ತಡೆದರು. ಇತ್ತ ಕೊತ್ತಳದ ಬಳಿಯಲ್ಲಿ ವೈರಿಗಳನ್ನು ಪ್ರತಿಬಂಧಿಸಲು ಯಾರೂ ಉಳಿಯದ್ದರಿಂದ ಮರಾಟರು ಮರ್ಗದ ಮೇಲೇರಿ ಬಂದು ಠಾಣೇದಾರರನ್ನು ಹಿಮ್ಮಗ್ಗಲಿನಿಂದ ಮುತ್ತಿದರು. ಈಗಂತೂ ನಮ್ಮವರ ಕೊಲೆಯು ಮೇರೆದಪ್ಪಿದೆ. ಠಾಣೇದಾರರ ಸುಳಿವು ಎಲ್ಲಿಯೂ ಕಾಣಲೊಲ್ಲದು!" ಎಂದು ಕಂಬನಿಗಳನ್ನು ಸುರಿಸುತ್ತ ಮಾತನಾಡಿದನು.

ಅಲ್ಲಿಯೆ ಮಲ್ಲವ್ವನ ಬಳಿ ಕುಳಿತುಕೊಂಡಿದ್ದ ಠಾಣೇದಾರನ ಹೆಂಡತಿಯು ಒಮ್ಮೆಲೆ-" ಏನು! ನನ್ನ ಪತಿಯು ರಣರಂಗದಲ್ಲಿ ಎಲ್ಲಿಯೂ ಕಾಣಲಿಲ್ಲವೆ! ಅವರು ವೀರಸ್ವರ್ಗವನ್ನು ಪಡೆದರೆ! ಹಾಯ್, ದೇವಾ ಈ ಅಭಾಗಿನಿಯಾದ ಅಬಲೆಯ ಮೇಲೆ ಕೋಪಿಸಿಕೊಂಡು, ವಜ್ರಾಸ್ತ್ರವನ್ನು ಪ್ರಯೋಗಿಸಿದಿಯಾ! ಹಾ, ನಾಥಾ, ಹೀಗೇಕೆ ಒಬ್ಬರೇ ಹೊರಟಿರಿವಿರಿ! ನಾನು ನಿಮ್ಮ ಅರ್ಧಾಂಗಿಯಲ್ಲವೇ! ನನ್ನ ಮೇಲೆ ಮುನಿದು ಹೀಗೆ ಒಬ್ಬರೇ ಹೊರಟಿರಾ! ನಾನೂ ವೀರಪತ್ನಿಯಾಗಿರುವೆನು! ಹ! ನಾನೇನು ನಿಮ್ಮ ಬೆನ್ನು ಬಿಡುವವಳಲ್ಲ! ಇಗೋ ಬಂದೆನು! ತಡೆಯಿರಿ!"ಎಂದು ದುಃಖಾವೇಗದಿಂದ ನುಡಿಯುತ್ತ ಎಚ್ಚರತಪ್ಪಿ ಭೂಮಿಯಲ್ಲಿ ಬಿದ್ದು ಬಿಟ್ಟಳು. ಉಸಿರಾಡಿಸುವದೂ ನಿಂತಿತು. ಇದನ್ನು ಕಂಡು ಹೆಂಗೆಳೆಯರಲ್ಲಿ ವಿಲಕ್ಷಣವಾದ ಗೊಂದಲವೆದ್ದಿತು. ಕೆಲವರು ಅವಳ ನೆತ್ತಿಗೆ ನೀರು ಬಡಿದರು. ಹಲವರು ತಮ್ಮ ಸೆರಗಿನಿಂದ ಗಾಳಿಯ ಬೀಸಲಾರಂಭಿಸಿದರು. ಉಪಚಾರವು ಹಾಗೆಯೇ ನಡೆದಿತ್ತು. ಹೀಗೆ ಕೆಲವೇಳೆ ಕಳೆದ ಬಳಿಕ ಕ್ರಮವಾಗಿ ಅವಳ ಕೈಕಾಲುಗಳು ಮೆಲ್ಲನೆ ಚಲಿಸತೊಡಗಿದವು; ಉಸಿರಾಡಿಸುವದೂ ಮೆಲ್ಲನೆ ಆರಂಭವಾಯಿತು; ಮುಂದೆ ತೀವ್ರದಲ್ಲಿಯೇ ಅವಳು ಕಣ್ದೆರೆದು ಸುತ್ತಲೂ ನೋಡಿದಳು. ಅದನ್ನು ಕಂಡು ಅಲ್ಲಿ ನೆರೆದ ವನಿತೆಯರಿಗೆಲ್ಲ ಅಂಥ ಸ್ಥಿತಿಯಲ್ಲಿಯೂ ಆನಂದವೆನಿಸಿತು. ಮಲ್ಲವ್ವನು ಅವಳ ಬಳಿಯು

ಲ್ಲಿಯೆ ಕುಳಿತುಕೊಂಡಿದ್ದಳು. ಅವಳನ್ನು ಕಂಡು ಠಾಣೇದಾರನ ಸತಿಯು— "ಅಕ್ಕಾ, ಇನ್ನೂ ನನ್ನ ಜೀವವು ಏಕೆ ಹಾರಿ ಹೋಗಲೊಲ್ಲದು ! ಸೌಭಾಗ್ಯಹೀನ ಳಾದ ನನ್ನಿಂದ ಇನ್ನು ಏನಾಗಬೇಕಾಗಿದೆ ! ಪತಿಯನ್ನು ಬಿಟ್ಟು ನಾನು ಹೇಗೆ ಜೀವಿಸಲಿ ! ಮರಾಟರು ನನ್ನ ಸೌಭಾಗ್ಯವನ್ನು ಸೂರೆಗೊಂಡರು ! ಅಯ್ಯೋ ನಾನೇನು ಮಾಡಲಿ ! ಎತ್ತ ಹೋಗಲಿ !" ಎಂದು ರೋದಿಸಹತ್ತಿದಳು. ಅದನ್ನು ಕಂಡು ಮಲ್ಲವ್ವನು-"ತಂಗೀ, ಹೀಗೇಕೆ ರೋದಿಸುವಿ? ರೋದನವು ನಿನ್ನಂಥ ವೀರ ಪತ್ನಿಗೆ ಉಚಿತವೇ? ನೀನೇ ಹೇಳು. ಯಾರು ನಿನ್ನ ಸೌಭಾಗ್ಯವನ್ನು ಹರಣ ಮಾಡಿದರೋ, ಅವರ ಹೆಸರಿನಿಂದ ಹೀಗೆ ಹೇಡಿಯಂತೆ ಶಪಿಸುತ್ತ ಕೂಡ್ರುವ ದರಿಂದ ಆಗುವದಾದರೂ ಏನು? ಆದುದರಿಂದ ಏಳು! ಕನ್ನಡ ವೀರರ ಪತ್ನಿಯರು ಪತಿಗಳಷ್ಟೇ ವೀರರಿರುವರೆಂಬುದನ್ನು ಮರಾಟರ—ಅಲ್ಲ. ಇಡೀ ಜಗತ್ತಿನ—ನಿದರ್ಶ ನಕ್ಕೆ ತಂದುಕೊಡಲು ಸಿದ್ಧಳಾಗು. ಪತಿಯ ಶವದೊಡನೆ ಸತಿಹೋಗುವದು ನನ್ನ ಮನಕ್ಕೆ—ಅದೇಕೆ ? ವೀರಪತ್ನಿಯರಿಗೆ—ಒಪ್ಪತಕ್ಕ ಮಾತಲ್ಲ. ವೈರಿಗಳೊಡನೆ ಯುದ್ಧಮಾಡಿ ವೀರಸ್ವರ್ಗವನ್ನು ಪಡೆದು ಸ್ವಾಮಿಯನ್ನನುಸರಿಸಿ ಹೋಗುವದು ಮೇಲು ! ಅದೇ ಶ್ರೇಯಸ್ಕರವು! ಭೂಷಣವು ! ಹೀಗೆ ಮಾಡದೆ ಹೇಡಿಯಂತೆ ಪ್ರಾಣಬಿಟ್ಟರೆ ಸ್ವರ್ಗದೊಳಗಿನ ಪತಿದೇವರು ನಿನ್ನನ್ನು ಹತ್ತರ ಬರಗೊಟ್ಟಾರೇ?"

ದುರ್ಗಾಧಿಪತಿಯ ಸತಿಯು ಹೀಗೆ ಅವಳಿಗೆ ಹೇಳುತ್ತಿರುವಷ್ಟರಲ್ಲಿ ಅವರ ದುಃಖವನ್ನು ಇಮ್ಮಡಿಸಲೋಸುಗವೋ ಏನೋ ಅನ್ನುವಂತೆ, ಮತ್ತೊಬ್ಬ ಸಿಪಾ ಯಿಯು ಭರದಿಂದ ಓಡುತ್ತ ಅವಳ ಬಳಿಗೆ ಬಂದು—"ಅವ್ವನವರೇ, ಏಳಿರಿ. ಜೀವವುಳಿಸಿಕೊಳ್ಳುವ ಉಪಾಯವನ್ನು ಮಾಡಿರಿ. ನಮ್ಮ ಯಜಮಾನರು ರಣ ದಲ್ಲಿ ಮಡಿದರು. ಮೂವರೂ ದುರ್ಗರಕ್ಷಕರು ವೀರಸ್ವರ್ಗವನ್ನು ಪಡೆದರು ನಮಗೆ ಮಾರ್ಗದರ್ಶಕರು ಯಾರೂ ಉಳಿಯಲಿಲ್ಲ. ಕನ್ನಡ ಸೈನ್ಯವೆಲ್ಲ ದಾರಿ ಸಿಕ್ಕತ್ತ ಓಡತೊಡಗಿದೆ. ವೈರಿಗಳು ಬಾದಶಹನ ಹಸರು ಪತಾಕೆಯನ್ನು ಕಿತ್ತು ತಮ್ಮ ಭಗವೀ ಬಾವುಟವನ್ನು ಅದರ ಸ್ಥಳದಲ್ಲಿ ಊರಿದರು. ದುರ್ಗದಲ್ಲಿಯ ಎಲ್ಲ ಸ್ಥಳಗಳನ್ನು ಶೋಧಿಸಹತ್ತಿದ್ದಾರೆ."ಎನ್ನಲು, ಅವಳು-"ಹಾ! ಪ್ರಾಣನಾಥಾ!"ಎಂದು ಚೀರುತ್ತ ಹಾಗೆಯೇ ಕುಸಿಬಿದ್ದಳು. ಅಶ್ರುಧಾರೆಗಳು ಪ್ರವಾಹಗೊಂಡು ಹರಿಯ ಹತ್ತಿದವು. ಆಗ ಆತನು ಮತ್ತೆ—" ಅವ್ವನವರೆ ! ಇದು ದುಃಖಿಸುತ್ತ ಕುಳ್ಳಿ ರುವ ಸಮಯವಲ್ಲ. ಶತ್ರುಗಳು ತೀರ ಸಮೀಪಿಸಿದರು. ಏಳಿರಿ, ಶೀಘ್ರ ಏಳಿರಿ, ಎಲ್ಲಿಯಾದರೊಂದು ಗುಪ್ತಸ್ಥಲದಲ್ಲಿ ನಿಮ್ಮನ್ನು ಬಚ್ಚಿಡುವೆನು; ಏಳಿರಿ!" ಎಂದನು.

ಅದನ್ನು ಕೇಳಿ—"ಏನು? ನನ್ನನ್ನು ಬಚ್ಚಿಡುವಿಯಾ ? ಅಡಗಿಕೊಂಡು ಕುಳ್ಳಿರಲು ನಾನೇನು ಹೇಡಿಯೆ ? ನಾನು ವೀರಪತ್ನಿಯಲ್ಲವೆ ? ಸತಿಯು ಪತಿಯ ಅರ್ಧಾಂಗ ವಲ್ಲವೇ? ನನ್ನಲ್ಲಿ ನನ್ನ ವೀರಪತಿಯ ಅರ್ಧವಾದರೂ ಶೌರ್ಯವಿಲ್ಲವೆ? ಆ! ಏನಂದಿ? ವೈರಿಗಳು ಸಮೀಪಿಸಿದರೇ ? ಸಮೀಪಿಸಲಿ! ನನ್ನ ಹತ್ತರವೇ ಬಂದು ನಿಲ್ಲಲಿ! ಕನ್ನಡಿಗಿತಿಯರು ಪುರುಷರಷ್ಟೇ ಶೂರರಿರುವರೆಂಬದನ್ನು ಮರಾಟರಿಗೆ ಚೆನ್ನಾಗಿ ಮನವರಿಕೆ ಮಾಡಿಕೊಡುವೆನು." ಎಂದು ಗರ್ಜಿಸುತ್ತ ಠಾಣೇದಾರನ ಸತಿಯು ಕಡೆಗೂ ಉಳಿದ ಹೆಂಗುಸರ ಕಡೆಗೂ ನೋಡುತ್ತ,—"ನನ್ನ ಪ್ರಿಯ ಗೆಳತಿಯರೇ, ಶೋಕವನ್ನಾವರಿಸಿಕೊಳ್ಳಿರಿ; ಕಂಬನಿಗಳನ್ನು ಒರೆಸಿಕೊಳ್ಳಿರಿ; ನಮ್ಮೆಲ್ಲರ ಪತಿಗಳು ಸ್ವಾಮಿಕಾರ್ಯಕ್ಕಾಗಿ ಶೌರ್ಯದಿಂದ ಕಾದಿ ರಣದಲ್ಲಿ ಒರಗಿದರು. ನಾವು—ಅವರ ಅರ್ಧಾಂಗಿಗಳಾದ ನಾವು—ಅವರ ಮರಣದಿಂದುಂಟಾದ ದುಃಖವನ್ನು ಅಶ್ರುಗಳನ್ನುದಿರಿಸುತ್ತ ಶಾಂತಪಡಿಸಿಕೊಳ್ಳೋಣವೆ ? ಇದು ಅವರ ಶೌರ್ಯಕ್ಕೆ ಕಲಂಕವನ್ನುಂಟುಮಾಡಲಿಕ್ಕಿಲ್ಲವೆ ? ನಾವು ವೀರಸತಿಯರು; ಹೇಡಿ ಹೆಂಗಸರಲ್ಲ ವೆಂಬುದನ್ನು ಅರಿಗಳ ನಿದರ್ಶನಕ್ಕೊಮ್ಮೆ ತಂದುಕೊಡೋಣ ! ಅಂದರೇ, ನಾವು ಇಲ್ಲಿಯವರೆಗೆ ಬದುಕಿದ್ದುದು ಸಾರ್ಥಕವು. ನಡೆಯಿರಿ. ಎಲ್ಲರೂ ಶಸ್ತ್ರಾಗಾರದ ಕಡೆಗೆ ಸಾಗಿರಿ. ಉಕ್ಕಿನ ಅಂಗಿಗಳನ್ನು ತೊಡಿರಿ. ಕರದಲ್ಲಿ ಖಡ್ಗಗಳನ್ನು ಧರಿಸಿರಿ. ಎಲ್ಲಿ—ಯಾವ ಸ್ಥಳದಲ್ಲಿ—ನಮ್ಮ ವೀರಪತಿಗಳು ಪ್ರಾಣತ್ಯಜಿಸಿದರೋ ಅಲ್ಲಿಗೆ—ಆ ಸ್ಥಳಕ್ಕೆ—ಹೋಗಿ ಶತ್ರುಗಳೊಡನೆ ಕಾದಾಡಿ ರಣದೇವತೆಗೆ ನಮ್ಮ ದೇಹಗಳನ್ನು ಬಲಿಯಾಗಿ ಅರ್ಪಿಸುವ ! ಹಾಗೂ ಸ್ವರ್ಗದಲ್ಲಿ ಪತಿಗಳು ಪಡೆಯುತ್ತಿರುವ ಸೌಖ್ಯದಲ್ಲಿ ಪಾಲುಗಾರರಾಗುವ ! ಅದೆಲ್ಲ ಬಿಟ್ಟು ನೀವು ಹೀಗೆ ಶೋಕಿಸುತ್ತ ಕುಳಿತರೆ ನಿಮಗೆ ವೀರಪತ್ನಿಯರೆಂದು ಆರು ಕರೆಯಬೇಕು ?" ಎಂದು ಗಾಂಭೀರ್ಯದಿಂದಲೂ ರಭಸದಿಂದಲೂ ನುಡಿದಳು.

ಅವಳ ಈ ಪ್ರೋತ್ಸಾಹಜನಕ ಭಾಷಣವನ್ನು ಕೇಳಿ, ಅಲ್ಲಿ ನೆರೆದ ಪ್ರತಿಯೊಬ್ಬಳ ಮನದಲ್ಲಿ ತನ್ನ ಪತಿಯನ್ನು ಕೊಂದ ಸೇಡನ್ನು ಚೆನ್ನಾಗಿ ತೀರಿಸಿಕೊಳ್ಳಬೇಕೆಂಬ ಪ್ರಬಲವಾದ ಇಚ್ಛೆಯಾಯಿತು. ಓದುಗರೇ, ಅಂತು ಅಬಲೆಯರು ಸಬಲೆಯರಾಗಿ ಶತ್ರುಗಳೊಡನೆ ಸಮರಮಾಡಲು ಸಿದ್ಧರಾದರು!

( ೫ )

ಠಾಣೇದಾರನ ಸತಿಯನ್ನು ಸಂಗಡ ಕರೆದುಕೊಂಡು ನಮ್ಮ ಕಥಾನಾಯಿಕೆಯು ತನ್ನ ಗೆಳತಿಯರೊಂದಿಗೆ ಪತಿಯ ಶಸ್ತ್ರಾಗಾರವನ್ನು ಹೊಕ್ಕು, ಅಲ್ಲಿ

ಆತನು ಉಪಯೋಗಿಸುತ್ತಿದ್ದ ಆಯುಧಗಳನ್ನು ನೋಡುತ್ತಿರುವಾಗಳೆ, ದುಃಖಾತಿಶಯದಿಂದ ಅವಳ ಕಂಠವು ಬಿಗಿದು ಬಂದಿತು. ಕಂಬನಿಗಳು ಪಟಪಟನೆ ಉದಿರತೊಡಗಿದವು. ಪಾಠಕರೇ, ಸಮರಾಂಗಣದಲ್ಲಿ ಶತ್ರುಗಳ ಶಸ್ತ್ರಾಘಾತಕ್ಕೆ ಎದೆಗೊಟ್ಟು ನಿಂತು ನಿಕರದಿಂದ ಹೋರಾಡುವ ಶೂರಪುರುಷರು ಸಹ ಸ್ವಕೀಯರ ನಿಧನವೃತ್ತಾಂತವನ್ನು ಕೇಳಿ ದುಃಖಿಸತೊಡಗುವರು. ಇವಳಂತೂ ಅಬಲೆಯು ; ಕೋಮಲಮನದವಳು. ತನ್ನ ಪತಿಯ—ಅಲ್ಲ ಸೌಭಾಗ್ಯರವಿಯ—ಅಸ್ತವನ್ನು ಕೇಳಿ ಕಣ್ಣೀರುದಿರಿಸಿದ್ದರಲ್ಲಿ ಏನಾಶ್ಚರ್ಯವು! ಇರಲಿ. ಕೂಡಲೆ ಅವಳು ನಿದ್ದೆ ತಿಳಿದೆದ್ದವಳಂತೆ—"ಗೆಳತಿಯರೆ, ಅಲ್ಲಿ ನೋಡಿರಿ, ನನ್ನ ಪತಿಯು ವೀರಸ್ವರ್ಗವನ್ನು ಪಡೆದು ಹೇಗೆ ಸುಖವಾಗಿ ಕುಳಿತುಕೊಂಡಿದ್ದಾನೆ ! ನಾನಾದರೋ ಅವರ ವೀರಪತ್ನಿಯಾಗಿ ವೈಧವ್ಯದುಃಖದಿಂದ ಅವರನ್ನು ಸ್ಮರಿಸುತ್ತ ಆಕ್ರೋಶಮಾಡತೊಡಗಿದ್ದೇನೆ ! ಇದನ್ನು ಕಂಡು ಇವರ ಸೇವಾನಿರತರಾದ ಅಪ್ಸರೆಯರು ನನ್ನನ್ನು ಹೀಯಾಳಿಸುತ್ತಿದ್ದಾರೆ ! ನೋಡಿ ನಗುತ್ತಿದ್ದಾರೆ ! ಮಿತ್ರೆಯರೆ, ನಾನು ಶೂರಪತ್ನಿಯಲ್ಲವೆ ? ಅವರ ಅರ್ಧಾಂಗಿಯಲ್ಲವೆ ? ಅಪ್ಸರೆಯರೇ, ನೀವು ಸಹಸ್ರಾಕ್ಷನ ವಾರಾಂಗನೆಯರಲ್ಲವೆ? ನನ್ನ ಪತಿಯನ್ನು ಮೋಹಗೊಳಿಸುವಿರಾ? ಬೇಡಿರಿ. ಹಾಗೆ ಮಾಡಬೇಡಿರಿ. ಇಗೋ ನಾನೂ ಬಂದೆನು!" ಎಂದು ನುಡಿದು ತನ್ನ ಕಾಲ್ಪನಿಕವಾದ ಆವೇಶದ ಭರದಲ್ಲಿಯೇ ಉಕ್ಕಿನಂಗಿಯನ್ನು ಧರಿಸಿದಳು. ಅಲ್ಲಿಯೇ ಗೋಡೆಗೆ ತೂಗಹಾಕಿದ ತನ್ನ ಪತಿಯ ಖಡ್ಗವನ್ನು ತಕ್ಕೊಂಡು ಕೋಣೆಯಿಂದ ಹೊರಗೆ ಬರುವಷ್ಟರಲ್ಲಿಯೇ ಉಳಿದ ಮಹಿತೆಯರೆಲ್ಲ ಯುದ್ಧಕ್ಕೆ ಸಜ್ಜಾಗಿ ಅವಳ ದಾರಿಯನ್ನೇ ನೋಡುತ್ತ ನಿಂತುಕೊಂಡಿದ್ದರು. ಎಲ್ಲರೂ ಲಾಯದಿಂದ ತಂದ ಅಶ್ವಗಳನ್ನು ಹತ್ತಿದರು. ಮಲ್ಲವ್ವನು ಅವರನ್ನು ಕುರಿತು—"ಪತಿಸೇವಾಪರಾಯಣೆಯರಾದ ನನ್ನ ಪ್ರಿಯಸಹೋದರಿಯರೇ, ಪತಿಯೊಡನೆ ಸಹಗಮನ ಮಾಡುವದು ಆರ್ಯಸ್ತ್ರೀಯರಾದ ನಮ್ಮ ಕರ್ತವ್ಯವು. ಆದರೆ ಅಗ್ನಿಯಲ್ಲಿ ನಮ್ಮ ದೇಹವನ್ನು ಈಡಾಡುವದಕ್ಕಿಂತ, ವೀರಾಂಗನೆಯರಿಗೆ ಉಚಿತವಾದ ಮಾರ್ಗದಿಂದ ಪತಿಸನ್ನಿಧಿಯನ್ನು ಸೇರುವ." ಎಂದು ನುಡಿಯುತ್ತ ಅಶ್ವಾರೋಹಿಣಿಯಾಗಿ ಒತ್ತರದಿಂದ ಕುದುರೆಯನ್ನು ಓಡಿಸುತ್ತ ನಡೆದಳು. ಉಳಿದವರೂ ಅವಳನ್ನು ಹಿಂಬಾಲಿಸಿದರು. ಅರೆ ನಿಮಿಷದಲ್ಲಿ ರಣಭೂಮಿಗೆ ಬಂದು ತಲ್ಪಿದರು.

ಅಲ್ಲಿ ಈಶಪ್ರಭುವಿನ ಭಗ್ನಶರೀರವು ಅಸುಹೀನವಾಗಿ ಭೂಶಯ್ಯೆಯ ಮೇಲೆ ಪವಡಿಸಿತ್ತು. ಆದರೂ ಅವನ ಮುಖದ ಮೇಲೆ ವೀರಶ್ರೀಯು ಪ್ರಕಾಶಿಸುತ್ತಿತ್ತು.

ಥುಲುಕುಳ್ಳು ನಗುವಂತಿದ್ದ ಅವನ ಮೋರೆಯು ಪ್ರಾಣದಾಸೆಯಿಂದ ಓಡಿಹೋಗು ತ್ತಿದ್ದ ರಣಹೇಡಿಗಳನ್ನು ಹಾಸ್ಯಮಾಡುವಂತೆ ತೋರುತ್ತಿತ್ತು. ಕರ್ತವ್ಯಪರಿ ಪೂರ್ತಿಯ ಸಮಾಧಾನತ್ವಾಯೆಯು ಮುಖಚರ್ಯೆಯಲ್ಲಿ ಪ್ರತಿಫಲಿಸಿತ್ತು. ಪ್ರತ್ಯ ವಯವದಲ್ಲಿಯೂ ಸಮರರಭಸದ ವೀರಾವೇಶವೂ ಲಾಘವವೂ ಮೈಗೊಂಡು ಮೆರೆಯುತ್ತಿದ್ದವು. ಅಂಗಾಂಗಗಳೊಳಗಿನ ಗಾಯಗಳಿಂದ ಸ್ರವಿಸುತ್ತಿದ್ದ ರಕ್ತವು, ಸ್ವಾಭಿಮಾನ ಮತ್ತು ಕರ್ತವ್ಯನಿಷ್ಠೆ ಇವುಗಳ ಸುಪಾವನವಾದ ಗಂಗ ಪ್ರವಾಹ ದಂತೆ ರಂಜಿಸುತ್ತಿತ್ತು.

ಈ ಸ್ಥಿತಿಯಲ್ಲಿದ್ದ ಪತಿರಾಯನನ್ನು ನೋಡಿದೊಡನೆಯೆ, ಮಲ್ಲವ್ವನ ಸ್ಥಿತಿಯು ಹೇಗಾಗಿರಬಹುದೆಂಬದನ್ನು ವಾಚಕರು ಕಲ್ಪನೆಯಿಂದಲೇ ಊಹಿಸಬೇಕು. ಅನಿರ್ವಚನೀಯವಾದ ಮನಃಸ್ಥಿತಿಯಲ್ಲಿ ಮಗ್ನಳಾಗಿ ಕಿಂಚಿತ್ಕಾಲ ಅವಳು ಸ್ತಬ್ಧ ಳಾಗಿದ್ದಳು. ಮೊದಮೊದಲು ದುಃಖ, ಚಿಂತೆ, ಅಸಮಾಧಾನ ಈ ವಿಕಾರಗಳು ಅವಳ ಚಂದ್ರಸದೃಶವಾದ ಮುಖದಲ್ಲಿ ಆವಿರ್ಭವಿಸಿದವು. ಆ ಮೇಲೆ ಸೇಡು ತೀರಿಸಿಕೊಳ್ಳುವ ಭಾವನೆಯು ಪ್ರಬಲವಾಯಿತು; ವೀರಶ್ರೀಯು ಬಂದು ಅದನ್ನು ಸೇರಿತು. ಇವೆರಡೂ ಭಾವನೆಗಳ ಸಮ್ಮಿಶ್ರಣಕ್ಕೆ ಕರ್ತವ್ಯನಿಷ್ಠೆ, ಸ್ವಾಭಿಮಾನ ಈ ಭಾವನೆಗಳು ಮುಂದಾಳುಗಳಾದವು. ಕಣ್ಣುಗಳೊಳಗಿಂದ ಹರಿಯುತ್ತಿದ್ದ ಪ್ರವಾಹವು ತನ್ನಿಂದ ತಾನೇ ಕಟ್ಟಾಯಿತು. ಮುಖಚರ್ಯೆಯು ಗಂಭೀರವಾ ಯಿತು. ಮಲ್ಲವ್ವನ ಮುಖಮುದ್ರೆಯಲ್ಲಿ ಇಂತಹ ವಿಲಕ್ಷಣವ್ಯತ್ಯಾಸವು ಕ್ಷಣ ಮಾತ್ರದಲ್ಲಿಯೆ ಆಯಿತು. ಅವಳು ಉಡಿಗೆತೊಡಿಗೆಗಳನ್ನು ಬದಲಿಸಿದಳು. ಸೂತಕದ ಬಟ್ಟೆಗಳನ್ನು ಧರಿಸಿಕೊಂಡಳು. ತನ್ನ ಬಲಗೈಯಿಂದಲೇ ಸೌಭಾಗ್ಯತಿ ಲಕವನ್ನು ಒರೆಸಿಕೊಂಡಳು. ಹಾಯ ! ಹಾಯ ! ಸಾಧ್ವಿಯ ಹೃದಯವದು ! ಈಗ ಮಾತ್ರ ಅವಳ ಕಣ್ಣೀರುಗಳು ಸೂರಿನ–ಹರಿನಾಳಿಕೆಯ–ಪ್ರವಾಹದಂತೆ ಧಾರೆಯಾಗಿ ಹರಿದವು. ಆದರೆ ಮುಖವು ಗಂಭೀರವಾಗಿತ್ತು. ತುಟಿಯನ್ನು ಕೂಡ ಅವಳು ಅಲುಗಿಸುತ್ತಿದ್ದಿಲ್ಲ. ಈ ಪ್ರಕಾರವಾಗಿ ಕುಂಕುಮರಹಿತವಾದ ಲಲಾಟ ದಿಂದ ಪತಿದೇಹದ ಸಮೀಪಕ್ಕೆ ಹೋದಳು. ಪತಿಶವವನ್ನು ನಿಟ್ಟಿಸಿದಳು. ಆಕಾ ಶದ ಕಡೆಗೆ ಮೋರೆ ಮಾಡಿ ಗಂಭೀರಭಾವದಿಂದ ಕೆಲಹೊತ್ತು ನಿಂತಳು. ಆಮೇಲೆ ಶಾಂತಮನಸ್ಸಿನಿಂದ ಕೆಳಗೆ ಬಾಗಿ ಪತಿದೇಹದಿಂದ ಹೊರಬೀಳುವ ರಕ್ತವನ್ನು ಬೆರ ಳಿನಿಂದ ತನ್ನ ಹಣೆಗೆ ಹಚ್ಚಿಕೊಂಡಳು. ಪತಿಯ ಮಗ್ಗಲಿನಲ್ಲಿಯೇ ಅವನ ಖಡ್ಗವು ಬಿದ್ದಿತ್ತು. ಅದಕ್ಕೆ ನಮಸ್ಕಾರ ಮಾಡಿ ಕೈಯಲ್ಲಿ ತೆಗೆದುಕೊಂಡು ಕುದುರೆಯನ್ನೇ

ರಿದಳು. 'ಜಯ ಭವಾನೀ!' ಎಂಬ ಮೃದು ಮಧುರಧ್ವನಿಯು ಎಲ್ಲ ಸ್ತ್ರೀಸಮೂಹ ದಿಂದ ಒಮ್ಮೆಲೆ ಗಂಭೀರವಾಗಿ ಹೊರಟು ಆಕಾಶ ಮಂಡಲವನ್ನು ವ್ಯಾಪಿಸಿತು. ಸವಿ ಯಂರಿಂಮೊಡಗೂಡಿದ ಪ್ರಮೀಲೆಯು ಅರ್ಜುನನೊಡನೆ ಯುದ್ಧಸನ್ನದ್ಧಳಾದದ್ದರ ಪ್ರತ್ಯಕ್ಷನೋಟವು ಅಲ್ಲಿ ಪ್ರೇಕ್ಷಕರ ನೆನಪಿಗೆ ಬರುತ್ತಿತ್ತು. ಇಂತು ಮೀಸೆ ಹೊತ್ತ ಗಂಡಸರನ್ನು ಕೂಡ ಕೆಳವೋರೆಮಾಡಿಸುವಂತಹ ರೀತಿಯಿಂದ ಮಲ್ಲವ್ವನು ರಣ ರಂಗದಲ್ಲಿ ಮುಂದುವರಿದಳು.

ನಾಯಕನು ಮರಣ ಹೊಂದುತ್ತಲೆ ಹಿಂದೂ ಸೈನಿಕರು ಪಲಾಯನ ಸೂಕ್ತ ವನ್ನು ಪಠಿಸುತ್ತಿದ್ದರೆಂಬದನ್ನು ಇತಿಹಾಸಜ್ಞರಾದ ವಾಚಕರಿಗೆ ಜೀರೆ ಹೇಳುವ ಅವಶ್ಯವಿಲ್ಲ. ಇದಕ್ಕನುಸರಿಸಿಯೇ ಬೆಳವಡಿಯ ಸೈನಿಕರಾದರೂ ದಾರಿ ಸಿಕ್ಕತ್ತ ಓಡತೊಡಗಿದ್ದರು. ಅದನ್ನು ಕಂಡು ನಮ್ಮ ಕಥಾನಾಯಿಕೆಯು ಸಂತಪ್ತಳಾಗಿ ಅವರನ್ನು ತರುಬಿದಳು. ಆಗ ಹತಾಶರಾದ ದಂಡಾಳುಗಳು – 'ಅವ್ವನವರೇ ನಮ್ಮ ಯಜಮಾನರು ರಣದಲ್ಲಿ ಮಡಿದರು. ನಮಗೆ ಮಾರ್ಗದರ್ಶಕರಾರೂ ಉಳಿಯದ್ದರಿಂದ ಪಲಾಯನದ ಹೊರತಾಗಿ ಮತ್ತಾವ ಮಾರ್ಗವೂ ಇಲ್ಲವು!" ಎಂದು ದೈನ್ಯದಿಂದ ನುಡಿದರು.

ಅದನ್ನು ಕೇಳಿ ಅವಳು – "ಏನು? ನಿಮ್ಮ ನಾಯಕರು ಮಡಿದರೆ ? ನಿಮಗೆ ಮಾರ್ಗದರ್ಶಕರು ಯಾರೂ ಇಲ್ಲವೆ ? ನಿಮ್ಮ ಯಜಮಾನರ ಅರ್ಧದೇಹವು ಸಜೀವವಾಗಿರಲು, ಅದು ನಿಮ್ಮ ಬಲಿಷ್ಠವೈರಿಗಳ ಅಸುವನ್ನು ಹೀರಲುದ್ಯುಕ್ತ ವಾಗಿರಲು ನೀವು ಹೀಗೆ ದೀನರಾಗಿ ಶತ್ರುಗಳಿಗೆ ಬೆನ್ನುತೋರಿಸಬೇಕೆನ್ನುವಿರಾ! ಏನನ್ನಬೇಕು ನಿಮ್ಮ ಈ ತರದ ಶೌರ್ಯಕ್ಕೆ ! ಇತ್ತ ನೋಡಿರಿ, ಈ ವನಿತೆಯರ ಚಮುವನ್ನು; ಅವರು ಸಹ ಅರಿಗಳೊಡನೆ ಎದುರಾಗಲು ಸಿದ್ಧರಾಗಿದ್ದಾರೆ. ನಿಮ್ಮ ಪುರುಷಾರ್ಥಕ್ಕೆ ಧಿಕ್ಕಾರವಿರಲಿ. ನೀವು ಈಗ ಓಡಿ ಪಾರಾದರೆ ನಿಮ್ಮ ಮರಣ ತಪ್ಪಿತೆಂದು ತಿಳಿದಿರುವಿರಾ ! ಇಂದಿಲ್ಲವಾದರೂ ಮುಂದೆ ಎಂದಾದರೊಂದು ದಿನ ಅದು ನಿಮಗೆ ಗಂಟು ಬೀಳುವದು ನಿಶ್ಚಯವೇ ! 'जातस्य मरणं ध्रुवम्' ಜನಿಸಿದ ಜೀವಿಯು ಜನ್ಮನೀಗಲೆಬೇಕು. ವ್ಯಾಧಿಗ್ರಸ್ತರಾಗಿ ಮನೆಯೊಳಗೆ ನರಳುತ್ತ ಬಿದ್ದು ಮರಣಹೊಂದುವವಕ್ಕಿಂತ, ವೈರಿಗಳೊಡನೆ ಕಲಿತನದಿಂದ ಕಾದಾಡಿ ಕಾಳಗದ ಕಣದಲ್ಲಿ ಕಣ್ಣುಮುಚ್ಚುವದು ಹೆಚ್ಚು ಭೂಷಣವಲ್ಲವೆ! ಹೀಗಿ ರಲು ಪಲಾಯನಸೂಕ್ತವನ್ನು ಪಠಿಸುವದೇಕೆ? ದೇಹದಲ್ಲಿ ಸಾಮರ್ಥ್ಯವಿಲ್ಲದಿದ್ದರೆ ಕರಗಳಲ್ಲಿ ಕಂಕಣಗಳನ್ನು ಧರಿಸಿ ಅಂತರ್‌ಗೃಹಗಳಲ್ಲಿ ಅಡಗಿಕೊಳ್ಳಿರಿ! ಅಂದರೆ

ಅಹಿತರು ಅಬಲೆಯರೆಂದು ಅರಿತು ನಿಮ್ಮನ್ನು ನಾಶಮಾಡಲಿಕ್ಕಿಲ್ಲ. ಥೂ, ಹೇಡಿಗಳಿರಾ! ಹೋಗಿರಿ, ಓಡಿ ಪಾರಾಗಿರಿ! ನಾವು ಸ್ವರ್ಗದ ದಾರಿಗೆ ಹೊರಟಿರುವೆವು. ನೀವು ನರಕದ ದಾರಿಯನ್ನನುಸರಿಸಿರಿ ! ಕಾಲ್ದೆಗೆಯಿರಿ ! ಮುಖಕ್ಕೆ ಕಪ್ಪು ಬಳಿದುಕೊಳ್ಳಿರಿ! ಓಡಿರಿ!" ಎಂದು ನುಡಿಯುತ್ತ ಆವೇಶದಿಂದ, ಮರಾಟರನ್ನು ಇದಿರಿಸಿದಳು. ಮುಂಭಾಗದ ಸೈನ್ಯವನ್ನು ಕ್ಷಣಾರ್ಧದಲ್ಲಿ ಸವರಿದಳು. ಅವಳ ಶೌರ್ಯವನ್ನು ಕಂಡು ಕನ್ನಡಿಗರಿಗೆ ಹೊಸ ಹುರುಪು ಹುಟ್ಟಿತು. ಅವರೂ ಯುದ್ಧ ಮಾಡಲೆಸಗಿದರು. ಆಗ ತನ್ನ ಸೈನಿಕರ ಸಾಹಾಯ್ಯದಿಂದ ಆ ವೀರಾಂಗನೆಯು ಅರಿದಳವನ್ನು ತುಂಡರಿಸಹತ್ತಿದಳು. ಮತ್ತೆ ಆಯಕಟ್ಟಿನ ಸ್ಥಳಗಳನ್ನೆಲ್ಲ ಆಕ್ರಮಿಸಿದಳು. ಕೋಟೆಯ ಒಡತಿಯ ವಿಲಕ್ಷಣವಾದ ರಣಚಾಪಲ್ಯವನ್ನು ಕಂಡು ಕೋಟೆಯೊಳಗಿನ ವೃದ್ಧಪುರುಷರಲ್ಲಿ ಕೂಡ, ಶಕ್ತಿಯ ಸಂಚಾರವಾಗಿ ಶಸ್ತ್ರಗಳನ್ನು ತಕ್ಕೊಂಡು ಅವರು ಸಹ ತವೊಡೆಯಳ ಸಾಹಾಯ್ಯಕ್ಕೆ ಧಾವಿಸಿದರು. ಇದರಿಂದ ಅವಳ ಧೈರ್ಯವು ದ್ವಿಗುಣಿತವಾಯಿತು. ಎದುರಾಳಿಗಳ ಸಂಹಾರವು ಮಿತಿಮೀರಿತು. ಅವರು ಗಾಬರಿಯಾಗಿ ಮೆಲ್ಲನೆ ಕಾಳಗದ ಕಣದಿಂದ ಕಾಲ್ತೆಗೆಯ ತೊಡಗಿದರು.

ಮಲ್ಲವ್ವನ ಮುಂದಾಳುತನವೂ ಉಬ್ಬಾಳುತನವೂ ಅಸದೃಶವಾದವುಗಳು. ಅವಳ ಯುದ್ಧಚಾಪಲ್ಯವನ್ನು ವರ್ಣಿಸುವದಸಾಧ್ಯವು. ಸಾಕ್ಷಾತ್ಸಮರದೇವತೆಯಂತೆ ಅವಳು ಮೆರೆಯುತ್ತಿದ್ದಳು. ಇಂತಹ ತಮ್ಮ ನಾಯಿಕೆಯನ್ನು ಕಂಡೊಡನೆಯೆ ಬೆಳವಡಿಯ ಸೈನಿಕರಲ್ಲಿ ನೂತನ ವೀರಾವೇಶವು ಸಂಚರಿಸಿತು. ಅವರು ಹುರಿಗೊಂಡು ಹುರುಪಿನಿಂದ ಕಾದಿವರು. ಯುದ್ಧಾವೇಶದಲ್ಲಿ ತಲ್ಲೀನರಾಗಿ ಮೈಮರೆತರು.

ಇಂತಹ ಕೆಚ್ಚೆದೆಯ ಕನ್ನಡಿಗರ ಹೊಡೆತವನ್ನು ಎದುರಾಳಿಗಳಾದ ಮರಾಟರು ತಡೆಯದಾದರು. ಕೊಲೆಯನ್ನು ತಪ್ಪಿಸಿಕೊಂಡು ಜೀವವುಳಿಸಿಕೊಳ್ಳುವ ಆಲೋಚನೆಯನ್ನು ಅವರ ದಂಡಾಳುಗಳು ಮಾಡಹತ್ತಿದರು. ಅವರ ದಂಡಿನ ಕಟ್ಟು ಹರಿಯಿತು. ಒಡ್ಡು ಒಡೆದ ಪ್ರವಾಹದ ನೀರಿನಂತೆ ಅವರ ಸೈನಿಕರು ದಾರಿ ಸಿಕ್ಕತ್ತ ಓಡಹತ್ತಿದರು. ಮಲ್ಲವ್ವನು ಯುದ್ಧಮಾಡಹತ್ತಿ ಎರಡು ಪ್ರಹರಗಳ ವೇಳೆಯಾಗಿರಬಹುದು. ಇಷ್ಟರಲ್ಲಿ ಅವಳು ಹಗೆಗಳನ್ನು ಹಣ್ಣು ಮಾಡಿ ಅವರನ್ನು ಕೋಟೆಯಿಂದಾಚೆಗೆ ಅಟ್ಟಿಬಿಟ್ಟಳು.

(೩)

ರಂಗೆ ಒಬ್ಬ ಹೆಂಗಸಿನಿಂದ ಪರಾಜಿತನಾದದ್ದು ಶಿವಾಜಿಯ ಮನಸ್ಸಿಗೆ ನಟ್ಟಿತು. ಅವನು ಈ ದಕ್ಷಿಣದಿಗ್ವಿಜಯದಲ್ಲಿ ವಿಶೇಷಖ್ಯಾತಿಗೊಂಡಿದ್ದನು.

ಇಂತಹನು ಈ ಕೋಟೆಯನ್ನು ಹಾಗೆಯೇ ಬಿಟ್ಟು ಹೋಗುವದು ಹೇಗೆ? ಬೆಳವಡಿಯ ದೇಸಾಯಿಯನ್ನು ತಡವದೆ ಹೋಗಿದ್ದರೇ ನೆಟ್ಟಗಿತ್ತು; ಇದೊಂದು ದೊಡ್ಡ ಪೇಚಾಟವಾಯಿತು; ಎಂದು ಅವನು ಚಿಂತೆಗೊಳಗಾದನು. ಕೊನೆಗೆ ಗಟ್ಟಿ ಮನಸ್ಸುಮಾಡಿ ಮುತ್ತಿಗೆಯನ್ನು ಮತ್ತಷ್ಟು ಬಿಗಿಯಾಗಿ ಸಾಗಿಸಿದನು. ದಂಡಾಳುಗಳ ಆಶ್ರಯಕ್ಕಾಗಿ ಕೋಟೆಯ ಸುತ್ತಲು ಅಲ್ಲಲ್ಲಿ ಕಂದಕಗಳು ಅಗಿಯಲ್ಪಟ್ಟವು. ಅವುಗಳ ಮರೆಯಿಂದ ಆಗಾಗ ಕೋಟೆಯ ಮೇಲೆ ಲಗ್ಗೆ ಏರಹತ್ತಿದರು. ಆದರೆ ಮರಾಟರ ಈ ಪ್ರಯತ್ನಗಳೆಲ್ಲವೂ ನಿಷ್ಫಲವಾದವು.

ಆಗ ಅಪಜಯದಿಂದಲೂ ಅವಮಾನದಿಂದಲೂ ಅತ್ಯಂತಖಿನ್ನನಾದ ದಾದಾಜಿಯು ತನ್ನ ಸೈನಿಕರನ್ನು ಕುರಿತು—"ವೀರರೇ, ಮುಂದುವರಿಯಿರಿ, ಹೀಗೇಕೆ ಬೆಪ್ಪಾಗಿ ನಿಂತಿರುವಿರಿ ? ಮಾನ ಹೋಗುವ ಸಮಯ ಬಂದೊದಗಿತು. ಆದರೂ ಎದೆಗುಂದಬೇಡಿರಿ. ಮರಾಟರು ಒರ್ವ ಕರಿನಾಡಿನ ಸ್ತ್ರೀಯಿಂದ ಪರಾಭೂತರಾದರೆಂಬ ಕಲಂಕನ್ನು ಹಚ್ಚಿಕೊಳ್ಳಬೇಡಿರಿ. ಅದಕ್ಕಿಂತಲೂ ಮರಣವೇ ಮೇಲು!" ಎಂದು ಬಲು ಕಳವಳದಿಂದ ನುಡಿದನು. ದಾದಾಜಿಯ ಭಾಷಣದಿಂದ ಮರಾಟರಲ್ಲಿ ನವಚೈತನ್ಯವುಂಟಾಯಿತು. ಅವರ ಶಸ್ತ್ರಗಳು ಒತ್ತರದಿಂದ ತಿರುಗಹತ್ತಿದವು. 'ಹರ ಹರ ಮಹಾದೇವ!' ಎಂದು ಗರ್ಜಿಸುತ್ತ ಅವರು ಮತ್ತೊಮ್ಮೆ ಕನ್ನಡಿಗರನ್ನು ಬಿಗಿಯಾಗಿ ಮುತ್ತಿದರು.

ಈ ಮುತ್ತಿಗೆಯು ಒಂದೇ ಸವನೆ ೨೭ ದಿನಗಳ ವರೆಗೆ ನಡೆಯಿತು. ಆ ಮೇಲೆ ಕೋಟೆಯೊಳಗಿನ ಆಹಾರಸಾಮಗ್ರಿಯು ತೀರಿತು. ದಂಡಾಳುಗಳು ಉಪವಾಸಬೀಳುವ ಹೊತ್ತು ಬಂತು. ಮದ್ದುಗುಂಡುಗಳ ಸಂಗ್ರಹವೂ ಸರಿಯಿತು. ಕೋಟೆಯ ರಕ್ಷಣವು ಇನ್ನು ಅಸಾಧ್ಯವೆಂದು ಮಲ್ಲಮ್ಮನಿಗೆ ತೋರಹತ್ತಿತು. ಆದರೂ ಅವಳು ಎದೆಗುಂದಲಿಲ್ಲ. ಇಂತಹ ಸಮಯದಲ್ಲಿ ಅಳ್ಳೆದೆಯ ಮತ್ತೊಬ್ಬ ಸೇನಾನಾಯಕನಿದ್ದಿದ್ದರೆ, ಕೋಟೆಯನ್ನು ಮರಾಟರಿಗೆ ಒಪ್ಪಿಸಿ ಶರಣು ಹೋಗುತ್ತಿದ್ದನು; ಇಲ್ಲವೆ ಪಲಾಯನಸೂಕ್ತವನ್ನು ಪಠಿಸುತ್ತ ಪ್ರಾಣವನ್ನುಳಿಸಿಕೊಳ್ಳುತ್ತಿದ್ದನು. ಆದರೆ ಮಲ್ಲಮ್ಮನು ಅತಿಧೈರ್ಯದಿಂದ ಶಿವಾಜಿಯ ಸೇನಾಸಮುದ್ರವನ್ನು ತಡೆದಳು. ಮುತ್ತಿಗೆಗಾಗಿ ಶಿವಾಜಿಯು ಏರ್ಪಡಿಸಿದ ಕಟ್ಟಡಗಳನ್ನೆಲ್ಲ ಕೆಡವಿ, ತನ್ನನ್ನು ಎದುರಿಸಿದವರನ್ನು ಹಿಮ್ಮೆಟ್ಟಿಸಿದಳು. ಹೀಗೆ ಅವಳು ಅತ್ಯಂತಶೌರ್ಯದಿಂದ ಹೋರಾಡಿದಳು.

ಆದಳೆ ಬರಬರುತ್ತ ಅವಳ ಸೈನ್ಯವು ಕಡಿಮೆಯಾಗಹತ್ತಿತು. ತನ್ನ

ಡಿಗರು ಮೆಲ್ಲನೆ ಒಬ್ಬೊಬ್ಬರಾಗಿ ನೆಲಕ್ಕುರುಳತೊಡಗಿದರು. ಮೊದಲೇ ಅವರ ಸಂಖ್ಯೆಯು ತೀರ ಸಣ್ಣದು. ಅದರಲ್ಲಿಯೂ ಮತ್ತೆ ಜನವು ಕಡಿಮೆಯಾಗ ತೊಡಗಿತು. ಹೀಗಾಗಿ ಅವರ ಬಲವು ಕುಂದುತ್ತ ನಡೆಯಿತು. ಅವರು ಈಗ ಹೆಚ್ಚುಕಡಿಮೆ ಐವತ್ತು ಜನರುಳಿದರು. ಇದನ್ನು ಕಂಡು ದಾದಾಜಿಯು ಇನ್ನೂರು ಶೂರ ಮರಾಟರೊಂದಿಗೆ ಅವರನ್ನು ಮುತ್ತಿದನು. ತನ್ನ ಸೈನ್ಯವು ಕಡಿಮೆಯಾಗುತ್ತಿದ್ದರೂ ಮಲ್ಲವ್ವನು ಬೆದರಲಿಲ್ಲ. ಅವಳ ಶಸ್ತ್ರಗಳು ಹಾಗೆಯೇ ಒತ್ತರದಿಂದ ಸಾಗಿದವು. ಕೂಡಲೆ ಮತ್ತೆರಡು ಸಾವಿರ ಜನರು ಅವಳನ್ನು ಮುತ್ತಿದರು. ಕನ್ನಡಿಗರು ಕಡೆಯ ಪ್ರಯತ್ನವೆಂದು ನಿಕರದಿಂದ ಕಾದಿದರು. ಮಲ್ಲವ್ವನ ಅತುಲಪರಾಕ್ರಮಕ್ಕೆ ದಾದಾಜಿಯ ಧೈರ್ಯವು ಕುಗ್ಗಿತು. ಅಸುರ ಮರ್ದಿನಿಯಾದ ದುರ್ಗೆಯೇ ಮಲ್ಲವ್ವನ ರೂಪದಲ್ಲಿ ನಮ್ಮ ಮುಖಕ್ಕೆ ಕಪ್ಪುತೊಡೆ ಯಲು ಬಂದಿಹಳೋ ಏನೋ ಎಂದು ದಾದಾಜಿಗೆ ತೋರಿತು! ಅವನು ನಿರಾಶೆಯಿಂದ ಒಟಗುಟ್ಟುತ್ತ ಪ್ರಯತ್ನಬಟ್ಟು ಅವಳನ್ನು ಕನ್ನಡಿಗರಿಂದ ಅಗಲಿಸಿದನು. ಅಸಹಾ ಯಳಾದಳೆಂದು ಅವಳ ಅಶ್ವವನ್ನು ತಡೆಯಲು ಪ್ರಯತ್ನಿಸಿದನು. ಆದರೂ ಆತನ ಕಾರ್ಯಕ್ಕೆ ಯಶದೊರೆಯಲಿಲ್ಲ. ಕಡೆಗೆ ಮೆಲ್ಲನೆ ಹಿಂಭಾಗದಿಂದ ಬಂದು, ಅಶ್ವದ ಹಿಂಗಾಲನ್ನು ಕತ್ತರಿಸಿದನು. ಕೂಡಲೆ ಆ ಮೂಕಪ್ರಾಣಿಯು ನಿಲ್ಲಲಾರದೆ ನೆಲಕ್ಕುರುಳಿತು. ಅಷ್ಟರಲ್ಲಿ ಚಪಲತೆಯಿಂದ, ನಮ್ಮ ವೀರರಮಣಿಯು ಕೆಳಕ್ಕೆ ಜಿಗಿ ದಳು. ಆಗ ಮರಾಟರು ಆಕೆಯನ್ನೂ ಆಕೆಯ ಪರಿವಾರವನ್ನೂ ಸುತ್ತುಗಟ್ಟಿದರು. ಅವಳ ಖಡ್ಗವು ತನ್ನ ಕಾಯಕವನ್ನು ನಡಿಸೇ ಇತ್ತು. ಪಾದಚಾರಿಣಿಯಾಗಿಯೇ ಅರಿದಳವನ್ನು ತರಿಯುತ್ತಿದ್ದಳು. ಆದರೇನು ? ವಾಚಕರೇ, ಅಗಣಿತ ವಾದ ದಳದೊಡನೆ, ಒಬ್ಬಳೇ ಒಬ್ಬಳಾದ ಅಬಲೆಯು ಎಷ್ಟುಕಾಲ ಕಾದಬ ಹುದು? ಅವಳು ತನ್ನವರನ್ನು ಕೂಡಲು ಬಹುವಾಗಿ ಹೆಣಗಿದಳು. ಎಲ್ಲವೂ ವ್ಯರ್ಥ ವಾಯಿತು! ಅದರಲ್ಲಿಯೂ, ಹಿಂದೊಮ್ಮೆ ರಣವೀರನಾದ ಕರ್ಣನು ಬಾಲವೀರ ನಾದ ಅಭಿಮನ್ಯುವಿನ ಕರವನ್ನು ಕಳ್ಳನ ಹಾಗೆ ಹಿಂಬದಿಯಿಂದ ಬಂದು ಛೇದಿಸಿ ದಂತೆ, ನಮ್ಮ ವೀರರಮಣಿಯ ಬಲದ ಹಸ್ತವನ್ನು ವೀರಸೇನಾಪತಿಯಾದ ದಾದಾ ಜಿಯು ಹಿಂದಿನಿಂದ ಬಂದು ತನ್ನ ಖಡ್ಗದಿಂದ ಹೊಡೆದನು. ಇದರಿಂದ ಅವಳ ಕೈಗೆ ಬಲವಾದ ಗಾಯವಾಯಿತು. ಇಲ್ಲಿಗೆ ಅವಳ ಶೌರ್ಯದ ಕೊನೆಯಾ ಯಿತು. ಯಾವ ಶಸ್ತ್ರದ ಬಲದಿಂದ ಅತುಲಪರಾಕ್ರಮವನ್ನು ಪ್ರಕಟಿಸುತ್ತಿ ದ್ದಳೋ, ಆ ಶಸ್ತ್ರವೂ ಕೈಬಿಟ್ಟಿತು; ಅದಕ್ಕೆ ಆಧಾರವಾದ ಹಸ್ತವೂ ಬಲಹೀನ

ವಾಯಿತು. ಪತಿಸೇವಾಪರಾಯಣೆಯಾದ ಸಾಧ್ವಿಯು ಸಹಜವಾಗಿ ಸೆರೆಸಿಕ್ಕಿದಳು. ಮರಾಟರು ಅವಳನ್ನು ತಮ್ಮ ಬಿಡಾರಕ್ಕೆ ಕರೆದೊಯ್ದರು. ಉಳಿದ ಹಲಕೆಲವರು ಕನ್ನಡ ಸೈನಿಕರೂ ಬಂಧಿಯಾದವರು. ಜಯಲಕ್ಷ್ಮಿಯು ಕನ್ನಡಿಗರನ್ನು ವಂಚಿಸಿ ಮರಾಟರಿಗೆ ಮಾಲೆಹಾಕಿದಳು. ದುರ್ಗವು ಅವರ ವಶವಾಯಿತು. 'ಭಗವೀನಿಶಾನೆ'ಯು ದುರ್ಗದ ಮೇಲೆ ಮೆರೆಯತೊಡಗಿತು. 'ಶಹ'ನ ಗಿಳಿವಣ್ಣದ ಪತಾಕೆಯು ಹಾರಿಹೋಯಿತು. ಇರಲಿ.

ವಿಜಯಶಾಲಿಯಾದ ದಾದಾಜಿಯು, ಎಲ್ಲ ಕನ್ನಡ ದಂಡಾಳುಗಳನ್ನು ಬಂಧಿಸಿಕೊಂಡು, ಶಿವಾಜಿಯ ಕಡೆಗೆ ಹೋದನು. ಶಿವಾಜಿಯು ಆತನನ್ನು ಆದರದಿಂದ ಬರಮಾಡಿಕೊಂಡನು. ಮರುದಿನ ದಾದಾಜಿಯು ಛತ್ರಪತಿಯ ಮುಂದೆ ಬೆಳವಡಿಯಲ್ಲಿ ನಡೆದ ಎಲ್ಲ ವಿಷಯಗಳನ್ನು ವಿವರಿಸಿ ಹೇಳಿ, ಮಲ್ಲವ್ವನ ಪರಾಕ್ರಮವನ್ನು ಅತಿಯಾಗಿ ಹೊಗಳಿದನು. ಶಿವಾಜಿಯು ಅದನ್ನು ಕೇಳಿ ಆಶ್ಚರ್ಯಚಕಿತನಾಗಿ, ಆ ಶೌರ್ಯಮೂರ್ತಿಯನ್ನು ನೋಡಬಯಸಿದನು. ಕೂಡಲೆ, ಮಾಂಗಲ್ಯವಿರಹಿತಳಾದ ಒರ್ವ ಸತಿಯನ್ನು ತಂದು ಅವನೆದುರಿನಲ್ಲಿ ನಿಲ್ಲಿಸಿದರು. ಅವಳ ಮುಖದಲ್ಲಿ ವೀರಶ್ರೀಯು ಮಿನುಗುತ್ತಿತ್ತು. ಹುಡಿಯಲ್ಲಿ ಮುಳುಗಿದ ಮತ್ತು ರಕ್ತದಿಂದ ನೆನೆದ ಆ ವೀರಾಂಗನೆಯನ್ನು ನೋಡಿ ಶಿವಾಜಿಯ ಮನಸ್ಸು ಕರಗಿತು.

ಅವನು ಅವಳನ್ನು ಆದರದಿಂದ ಬರಮಾಡಿಕೊಂಡು ಅವಳನ್ನುದ್ದೇಶಿಸಿ—“ದೇವಿ, ದುಃಖಿತರಾಗಬೇಡಿರಿ, ನೀವು ನನ್ನ ಮಾತೆಯರು. ಮಗನಿಂದ ಮಾತೆಗೆ ಯಾತರ ಕೊರತೆಯೂ ಆಗಲಾರದು.” ಎಂದು ವಿನಯದಿಂದ ನುಡಿದನು. ಅದನ್ನು ಕೇಳಿದೊಡನೆ ಅವಳ ನೇತ್ರಗಳು ಕೆಂಪಾದವು. ಕ್ರೋಧಾವೇಶದಿಂದ ಅವಳ ಅಧರಗಳು ಅದಿರ ಹತ್ತಿದವು. ಮುಖವು ಆರಕ್ತವಾಯಿತು. ರಭಸದಿಂದ ಅವಳು—“ನನ್ನ ಮಕ್ಕಳನ್ನು ತೋಪಿನ ಬಾಯಿಗೆ ಕೊಡಿರಿ. ನನ್ನನ್ನು ಮತ್ತಗಜದಿಂದ ತುಳಿಸಿಯಾದರೂ ಕೊಲ್ಲಿಸಿರಿ. ಇಂಥ ಕ್ಷುದ್ರಕಾರ್ಯಗಳಿಗಾಗಿ ದುಃಖಿಸುವ ಸ್ತ್ರೀಯು ನಾನಲ್ಲ. ನನ್ನಿಂದ ನಮ್ಮ ಬಾದಶಹನ ಸೇವೆಯಾಗಲಿ, ನನ್ನ ಪತಿಯು ಕೈಕೊಂಡ ಕಾರ್ಯವಾಗಲಿ ಆಗತಕ್ಕಷ್ಟು ಆಗಲಿಲ್ಲವೆಂಬ ಚಿಂತೆಯೊಂದೇ ಮರಣಪ್ರಾಯವಾದ ತಾಪಕೊಡುತ್ತಿದೆ. ಆಯತ್ತಸಮಯದಲ್ಲಿ ನನ್ನ ಬಲದ ಹಸ್ತವು ನನಗೆ ಮೋಸಮಾಡಿದ್ದರಿಂದ ನಿಮ್ಮ ಈ ಶೂರಸರದಾರನ ಕೈವಶವಾದೆನು. ಈಗಳಾದರೂ ಏನಾಯಿತು ? ನನ್ನ ಮನಕ್ಕೆ ಆಗುತ್ತಿರುವ

ತಾಪವನ್ನು ಶಾಂತಗೊಳಿಸಬೇಕೆಂದು ನಿಮ್ಮ ಮನಕ್ಕೆ ಅನಿಸುತ್ತಿದ್ದರೆ, ನನಗೆ ನನ್ನ ಪತಿಯ ಖಡ್ಗವನ್ನು ದಯಮಾಡಿ ಕೊಡಿಸಿದರೆ ನನ್ನ ಎಡಗೈಯಿಂದಾದರೂ ಅದನ್ನು ಧರಿಸಿ, ನನ್ನ ಸ್ವಾಮಿಯ ವೈರಿಗಳೊಡನೆ ಇನ್ನೊಮ್ಮೆ ಕಾಳಗ ಮಾಡಿ, ಅದಕ್ಕೆ ಹತ್ತಿದ ಅಪಜಯರೂಪವಾದ ಕಲಂಕವನ್ನು ತೊಳೆದು ಪವಿತ್ರವಾಗೆ ಮಾಡುವೆನು. ಅದು ಅಂಥ ಇಂಥ ಖಡ್ಗವಲ್ಲ. ನನ್ನ ಪತಿಯು ಧರಿಸುತ್ತಿದ್ದ ಅಖಂಡವಿಜಯಿಯಾದ ಶಸ್ತ್ರವದು. ನನ್ನಿಂದ ಅದಕ್ಕೆ ಇಂದು ಕಲಂಕವು ತಟ್ಟಿತು. ನನ್ನ ಜೀವಿತಕ್ಕೆ ಧಿಕ್ಕಾರವಿರಲಿ!" ಎಂದು ಉಸಿರಿದಳು.

ಆಗ ಶಿವಾಜಿಯು—"ದೇವೀ, ಶಾಂತರಾಗಿರಿ. ನಿಮ್ಮ ಸ್ವಾಮಿಭಕ್ತಿಯೂ, ಪರಾಕ್ರಮವೂ ಅವರ್ಣನೀಯವಾದವುಗಳು. ನಿಮಗೆ ಕೆಡಕೆನಿಸಿದ್ದು ಸ್ವಾಮಿ ಸೇವೆಯನ್ನು ಯೋಗ್ಯವಾಗಿ ಮಾಡಲಿಲ್ಲೆಂದಲ್ಲವೆ? ಅದನ್ನಂತೂ ನೀವು ಜೀವದ ಪರಿವೆ ಇಲ್ಲದೆ ಶೌರ್ಯದ ಪರಮಾವಧಿಯನ್ನು ಪ್ರಕಟಗೊಳಿಸಿ ಕೊನೆಗಾಣಿಸಿರುವಿರಿ. ಆತನ ಋಣದಿಂದ ಮುಕ್ತರಾಗಿರುವಿರಿ. ಬೆಂಬಲವಿಲ್ಲದೆ ನನ್ನ ದೊಡ್ಡ ಸೈನ್ಯವನ್ನು ಚದರಿಸಿದ್ದಾದರೂ ಕೇವಲ ಸ್ವಾಮಿಭಕ್ತಿಯ ಜೋರಿಸಿಂದಲೇ!" ಎಂದನು.

ಅವನ ಭಾಷಣದಿಂದ ಅವಳ ತಾಪವು ಶಾಂತವಾಗದೆ ಇಮ್ಮಡಿಸಿತು. ದ್ವೇಷವು ಹೆಚ್ಚಾಯಿತು. ತನ್ನ ಸುತ್ತಲು ನಿಂತ ರಾಜಪುರುಷರ ಅರಿವು ಅವಳಿಗೆ ಉಳಿಯಲಿಲ್ಲ. ಅವಳು ಸರಕ್ಕನೆ ಶಿವಾಜಿಯನ್ನು ಶಿಕ್ಷಿಸಲು ಆತನ ಮೇಲೆ ದುಮುಕಿದಳು. ಅಷ್ಟರಲ್ಲಿ ಸೇವಕರು ಅವಳನ್ನು ತಡೆದರು. ಇದನ್ನು ಕಂಡು ಶಿವರಾಯನು ಸಭಿಕರನ್ನುದ್ದೇಶಿಸಿ,—"ಈ ವೀರಪತ್ನಿಯು ಧನ್ಯಳು! ಇವಳು ಜನಿಸಿದ ಕುಲವೂ ಧನ್ಯವಾದುದು!! ಇವಳ ರಾಜಭಕ್ತಿಯು ಮಿಗಿಲಾದುದು!!! ತಾನು ಹೆಣ್ಣಾದರೂ ಸ್ವಾಮಿಕಾರ್ಯಕ್ಕಾಗಿ ಅಸುವಿನ ಆಶೆದೊರೆದು ಕಾದಿದಳು. ಆಗೂ ಅದು ತನ್ನಿಂದ ಕೊನೆಗಾಣಿಸಲ್ಪಡಲಿಲ್ಲವೆಂದು ಈಗಲೂ ಅವಳು ತಳಮಳಿಸುತ್ತಿರುವಳು. ಆದರೆ ಇದರದೆಲ್ಲ ಆ ಮ್ಲೇಂಛರಿಗೇನು? ಪ್ರಾಮಾಣಿಕ ಯಜಮಾನನಿದ್ದರೇ, ಪ್ರಾಮಾಣಿಕ ಸೇವಕನು ಮಾಡುವ ಶ್ರಮವು ಸಾರ್ಥಕವಾಗುವದು. ಇಲ್ಲದಿದ್ದರೆ ಮರ್ಕಟನ ಬಳಿಯಲ್ಲಿಯ ಮಾಣಿಕದಂತೆಯೇ! ಇಂಥ ಸ್ವಾಮಿನಿಷ್ಠ ಜನರಿದ್ದುದದರಿಂದಲೇ ನಮಗೆ ಬೆಳವಡಿಯನ್ನು ತಕ್ಕೊಳ್ಳಲು ಇಷ್ಟು ಪ್ರಯಾಸವಾಯಿತು."ಎಂದು ನುಡಿದು ಮಲ್ಲವ್ವನ ಕಡೆಗೆ ನೋಡುತ್ತ—"ತಾಯೀ, ಸಮಾಧಾನತಾಳಿರಿ. ನಿಮ್ಮ ರಾಜನಿಷ್ಠೆಯನ್ನೂ ಪತಿಭಕ್ತಿಯನ್ನೂ ಎಷ್ಟು ಹೊಗಳಿದರೂ ಕಡಿಮೆಯೆ. ನಿಮ್ಮಂಥ ಸ್ತ್ರೀಯರು ವಾಸಿಸುತ್ತಿರುವ ದೇಶಕ್ಕೆ ಪಾರತಂತ್ರ್ಯದ

ಗಾಳಿಯು ಕೂಡ ಸೋಂಕದು. ನಿಮ್ಮಂಥ ವೀರಮಾತೆಯರ ಉದರದಿಂದ ವೀರಪು ತ್ರರೇ ಜನಿಸುವದು ನಿಜ. ಈ ಶಿವಾಜಿಯು ನಿಮ್ಮ ಉದರದಲ್ಲಿ ಜನಿಸಿದ್ದರೆ, ಆತನಲ್ಲಿ ಸ್ವಾಭಿಮಾನವೂ, ವೀರತ್ವವೂ ಈಗಿದ್ದದ್ದಕ್ಕಿಂತ ಎಷ್ಟೋ ಪಾಲು ಅಧಿಕವಾಗಿ ರುತ್ತಿದ್ದವು. ದೇವೀ, ಇಂದಿನಿಂದ ನಾನು ನಿಮ್ಮ ಬಾಲಕನು, ನೀವು ನನ್ನ ತಾಯಿ. ನಿಮ್ಮ ಆ ಖಡ್ಗಪಟುಹಸ್ತವನ್ನು ನನ್ನ ಮಸ್ತಕದ ಮೇಲೆ ಇಡಿರಿ. ವಿಜಯಿ ಯಾಗೆಂದು ಆಶೀರ್ವದಿಸಿರಿ. ನಿಮ್ಮ ಆಶೀರ್ವಾದದ ಬಲದಿಂದಾದರೂ, ಯವನ ರನ್ನು ಮುರಿಬಡಿದು, ಹಿಂದೂಧರ್ಮ ಮತ್ತು ಹಿಂದೂರಾಷ್ಟ್ರ ಇವುಗಳನ್ನು ಸ್ಥಾಪಿ ಸಲು ನಾನು ಸಮರ್ಥನಾಗುವೆನು." ಎಂದು ನುಡಿದು ನಮಸ್ಕರಿಸಿ, ಅತ್ಯಂತ ಪೂಜ್ಯಭಾವದಿಂದ ಅವಳನ್ನು ಬಹುವಾಗಿ ಹೊಗಳಿ, ಅವಳ ದೇಸಗತಿಯ ಗ್ರಾಮ ಗಳೊಳಗಿನ ಎರಡು ಊರುಗಳನ್ನು ಮಾತ್ರ ಅವಳಿಗೆ ಉಂಬಳಿಯಾಗಿ ಬಿಟ್ಟು, ಉಡುಗೊರೆಗಳನ್ನು ಕೊಟ್ಟು ಯೋಗ್ಯಮರ್ಯಾದೆಯಿಂದ ಆಕೆಯನ್ನು ಬೆಳವ ಡಿಗೆ ಕಳಿಸಿಕೊಡುವ ವ್ಯವಸ್ಥೆ ಮಾಡಿದನು.

ಶಿವಾಜಿಯ ಸರಳತೆಯನ್ನು ಕಂಡು ಈಗ ಮಾತ್ರ ಮಲ್ಲಮ್ಮನ ಅಂತಃಕರ ಣವು ಉಕ್ಕಿ ಬಂದಿತು. ಕುತ್ತಿಗೆಯ ಶಿರಗಳು ಬಿಗಿದು ಮಾತಾಡಲು ಬಾರದಾ ಯಿತು. ಕಡೆಗೆ ಅವಳು ಆಕಾಶದ ಕಡೆಗೆ ನೋಡುತ್ತ, ಹಿಂದೂಧರ್ಮದ ಹಾಗು ಹಿಂದೂರಾಷ್ಟ್ರದ ರಕ್ಷಣೆಮಾಡಲು ಪರಮೇಶ್ವರನು ಸಮರ್ಥನಿದ್ದಾನೆಂದು ಸೂಚಿ ಸಿದಳು. ಶಿವಾಜ್ಞೆಯಂತೆ ದಾದಾಜಿಯು ಅವಳನ್ನು ಬೆಳವಡಿಗೆ ಕರೆದೊಯ್ದನು.

ಹೀಗೆ ಶಿವಾಜಿಯು ಮಲ್ಲಮ್ಮನ ಪ್ರಾಂತವನ್ನು ಕಸಿದುಕೊಂಡು ಹೋದ ಬಳಿಕ ತುಸು ವರ್ಷಗಳಲ್ಲಿಯೇ ತೀರಿಕೊಂಡನು. ಅನಂತರ ಅವನ ರಾಜ್ಯದಲ್ಲಿ ಅವ್ಯವಸ್ಥೆಯುಂಟಾಯಿತು. ಆಗ ಮಲ್ಲಮ್ಮನು ಮತ್ತೆ ತನ್ನ ಸೀಮೆಯನ್ನು ತಿರುಗಿ ದೊರಕಿಸಿಕೊಂಡು ಪೂರ್ಣಸ್ವತಂತ್ರಳಾದಳು. ಈ ದೇಸಗತಿಯು ಮುಂದೆ ಕೆಲವು ವರ್ಷಗಳ ವರೆಗೆ ಬಾಳಿತು. ಕೊನೆಗೆ ಕಿತ್ತೂರ ಸಂಸ್ಥಾನದವರು ಅದನ್ನು ಮುರಿದು ಬಿಟ್ಟರೆಂದು ತಿಳಿಯುತ್ತದೆ. —ಧೀ. ಹ. ಕರದೇಸಾಯಿ.